# ವ್ರತ ಕೆಟ್ಟರೂ ಸುಖವಿಲ್ಲ!

ಗಿಯೋವಾನಿ ಬೊಕ್ಯಾಚಿಯೋ

ಚಲುವಿನ ಗಣಿಗಳೇ !

ಪುರುಷರನ್ನು ಸ್ತ್ರೀಯರು ಮೋಸಗೊಳಿಸಿರುವ ಅನೇಕ ಕಥೆಗಳನ್ನು ಕೇಳಿದ್ದೀರಿ. ಗಂಡಸು, ಹೆಂಗಸೊಬ್ಬಳಿಗೆ ಯಾವ ರೀತಿ ಮಣ್ಣು ಮುಕ್ಕುವ ಹಾಗೆ ಮಾಡಿದನು ಎಂಬ ಕಥೆಯನ್ನು ಹೇಳುತ್ತೇನೆ.

ಈ ರೀತಿ ಮಾತನಾಡುತ್ತಿರುವುದನ್ನು ಕೇಳಿ ಅಪಾರ್ಥಮಾಡಿಕೊಳ್ಳ ಬೇಡಿ. ನಾನು ಆ ಮನುಷ್ಯನನ್ನು ಖಂಡಿಸುವುದೂ ಇಲ್ಲ. ಅಥವ ಆ ಹೆಂಗಸಿಗೆ ಹಾಗೆ ಆಗಬಾರದಿತ್ತೆಂದು ಸಲಹೆಯನ್ನು ಕೊಡುವುದೂ ಇಲ್ಲ. ನಾನು ಹೇಳುವುದಿಷ್ಟೆ. ಹೆಂಗಸನ್ನು ನಂಬಿ ಗಂಡಸು ಮೋಸ ಹೋಗುವ ರೀತಿಯೇ, ಗಂಡಸನ್ನು ನಂಬಿದಾಗ ಹೆಂಗಸುಕೂಡ ಮೋಸಹೋಗುತ್ತಾಳೆ. ನಾನು ಹೇಳ ಬಯಸುವ ಕಥೆಯಲ್ಲಿ ಹೆಂಗಸು ಅತಿಯಾಗಿ ದುರಾಸೆ ಪಟ್ಟದ್ದಕ್ಕೆ ಗಂಡನು ಸರಿಯಾದ ಶಿಕ್ಷೆಯನ್ನು ಕೊಟ್ಟನು.

ಹೆಂಗಸರಿಗೆ ಲಜ್ಜೆಯು ಸಹಜವಾದುದೆಂದು ನಿಮಗೆಲ್ಲಾ ತಿಳಿದಿರುವ ವಿಚಾರವೆ! ಹಾಗೂ, ಪರಿಶುದ್ಧಳಾಗಿರಬೇಕು, ಪತಿಗೆ ಕನಸಿನಲ್ಲಿ ಕೂಡ ದ್ರೋಹವನ್ನು ಮಾಡದೆ, ಇರಬೇಕೆಂದು ಬಯಸುತ್ತೀರಿ. ಎಂತಹ ಆಸೆ ಯಾದರೂ ತಡೆದುಕೊಂಡು, ಪಾತಿವ್ರತ್ಯವನ್ನು ಉಳಿಸಿಕೊಳ್ಳಲು ಪ್ರಯತ್ನಿ ಸುವಿರಿ. ಇದೇ ನಿಮ್ಮ ಆದರ್ಶ. ಹಣದ ಆಸೆಗೆ ಅಡ್ಡಹಾದಿಯನ್ನು ಹಿಡಿದ ಹೆಂಗಸಿಗೆ ನರಕವು ಖಂಡಿತ. ಪ್ರೀತಿಯಿಂದ ಮನಸೋತಲ್ಲಿ ಅದು ಕ್ಷಮಾರ್ಹ.

ಮಿಲಾನಿನಲ್ಲಿ ಗುಲ್ಫಾರ್ಡೊ ಎಂಬ ಒಬ್ಬ ಜರ್ಮನ್ ಸೈನಿಕನಿದ್ದನು. ಸಾಹಸಿಗ, ವಿನಯಶೀಲ. ಅವನ ಗೆಳೆಯ ಗಸಾಪಾರಲೋ ಆಗರ್ಭ

ಶ್ರೀಮಂತ. ಅವನ ಹೆಂಡತಿ ಅಂಬ್ರೋಷಿಯ ಅತ್ಯಂತ ರೂಪವತಿ. ಮಿತ್ರನ ಹೆಂಡತಿಯನ್ನು ನೋಡಿ ಅನುರಕ್ತನಾದನು.

ಸೈನಿಕನು ತನ್ನ ಆಸೆಯನ್ನು ಯಾರೊಂದಿಗೂ ಹೇಳಿಕೊಳ್ಳಲಿಲ್ಲ. ಅವನ ಮಿತ್ರನಿಗೆ ಈ ವಿಷಯವು ಗೊತ್ತಾಗುವ ಅವಕಾಶವೂ ಇರಲಿಲ್ಲ. ದಿನಗಳುರುಳಿದಂತೆ ಪ್ರೇಮವು ಬೃಹದಾಕಾರವಾಗಿ ಮನಸ್ಸನ್ನು ಕಾಡಿಸಿತು. ಒಂದು ದಿವಸ ತಡೆಯಲಾಗದೆ ತಾನು ಅನುರಕ್ತನಾಗಿರುವುದಾಗಿ ಅಂಬ್ರೋಷಿಯೋಳಿಗೆ ಹೇಳಿಕಳುಹಿಸಿದನು.

ಅಂಬ್ರೋಷಿಯೋ :ಅನುಮಾನಿಸುವಂತೆ ನಟಿಸಿ 'ನಮ್ಮ ಪ್ರೇಮವು ಯಾರಿಗೂ ತಿಳಿಯದಂತೆ ಗುಟ್ಟಾಗಿರಬೇಕು. ಇನ್ನೂರು ಫ್ಲಾರಿನ್‌ಗಳನ್ನು ಕೊಟ್ಟಲ್ಲಿ ಒಪ್ಪಿಕೊಳ್ಳುತ್ತೇನೆ' ಎಂದು ಹೇಳಿದಳು.

ಗುಲ್ಫಾರ್ಡೊಗೆ ಅವಳು ಹೇಳಿದ ಮಾತನ್ನು ಕೇಳಿ ಆಶ್ಚರ್ಯವಾಯಿತು. ದುಃಖವೂ ಆಯಿತು. ಅವಳಿಗೆ ಧನ ಪಿಶಾಚಿಯೇ ಹಿಡಿದಿರಬೇಕು. ಸರಿಯಾದ ಪಾಠಕಲಿಸಬೇಕೆಂದು ಮನಸ್ಸು ಮಾಡಿದನು. ಕಡೆಗೊಂದು ದಿವಸ "ಹಣವನ್ನು ಕೊಡುತ್ತೇನೆ, ಯಾವತ್ತು ಬರಬೇಕೋ ಹೇಳಿ ಕಳುಹಿಸು. ಆದರೆ ಒಂದು, ಈ ವಿಶಯವು ನನ್ನ ಸ್ನೇಹಿತನೊಬ್ಬನಿಗೆ ಮಾತ್ರ ತಿಳಿದಿರುತ್ತದೆ. ಮತ್ತ್ಯಾರಿಗೂ ತಿಳಿಸುವುದಿಲ್ಲ" ಎಂದು ಬರೆದು ಕಳುಹಿಸಿದನು. ಕಾಗದವನ್ನು ಓದಿಕೊಂಡು ಅಂಬ್ರೋಷಿಯೋ ಹಿಗ್ಗಿದಳು.

ಸ್ವಲ್ಪ ದಿನಗಳಾದ ಮೇಲೆ ಅಂಬ್ರೋಷಿಯೋ ಪತಿ ಕೆಲಸದ ಮೇಲೆ ಜರ್ಮನಿಗೆ ಹೋಗಬೇಕಾಗಿ ಬಂದಿತು. ಗುಲ್ಫಾರ್ಡೋಗೆ ಅವತ್ತೇ ಸಂಜೆ ಎಷ್ಟು ಹೊತ್ತಿಗೆ ಮನೆಗೆ ಬರಬೇಕೆಂದು ಬರೆದು ಕಳುಹಿಸಿದಳು.

ಗುಲ್ಫಾರ್ಡೊ ಕಾಗದವನ್ನು ಓದಿಕೊಂಡು ನೆಟ್ಟಗೆ ಅವಳ ಗಂಡನ ಹತ್ತಿರ ಹೋಗಿ

"ಗಸಪಾರಲೋ! ನನಗೆ ಇನ್ನೂರು ಫ್ಲಾರಿನ್ ಹಣವು ತುರ್ತಾಗಿ ಬೇಕಾಗಿದೆ. ಸಾಲವೆಂದೇ ತಿಳಿದು ಕೊಡು" ಎಂದನು.

ಗಸಪಾರಲೋ ಚೀಟಿಯನ್ನು ಬರೆದು ಹಣವನ್ನು ಕೊಟ್ಟು ಜರ್ಮನಿಗೆ ಪ್ರಯಾಣ ಬೆಳಸಿದನು.

ಗಂಡನು ಮನೆಯಕಡೆ ಬೆನ್ನು ತಿರಗಿಸಿದ್ದೇ ತಡ, ಅಂಬ್ರೋಷಿಯೋ ಗುಲ್ಫಾರ್ಡ್ದೊವಿಗೆ ಹೇಳಿಕಳುಹಿಸಿದಳು. ಗುಲ್ಫಾರ್ಡ್ದೊ ಮಿತ್ರನೊಡನೆ ಅವಳ ಮನೆಗೆ ನೆಟ್ಟಗೆ ನಡೆದನು. ಅಂಬ್ರೊಷಿಯೋ ಅವನಿಗಾಗಿ ಕಾದು ಕುಳಿತಿದ್ದಳು. ಗುಲ್ಫಾರ್ಡ್ದೊ ಅವಳ ಕೈಲಿ ಹಣದ ಚೀಲವನ್ನು ಕೊಟ್ಟು. "ಈ ಹಣವನ್ನು ದಯವಿಟ್ಟು ನಿನ್ನ ಪತಿಯು ಬಂದಮೇಲೆ ಅವನಿಗೆ ಕೊಡು" ಎಂದನು.

ಗುಲ್ಫಾರ್ಡ್ದೊ ತನ್ನ ಮಿತ್ರನಿಗೆ ವಿಶಯವು ತಿಳಿಯಬಾರದೆಂದು ಈ ರೀತಿ ಹೇಳುತ್ತಿದ್ದಾನೆಂದು ಬಗೆದು ನಗುತ್ತಾ ಸಂತೋಷವಾಗಿ ಮೊದಲು ಎಣಿಸಿನೋಡುತ್ತೇನೆ'' ಎಂದು ಮೇಜಿನ ಮೇಲೆ ಹಣವನ್ನು ಸುರಿದು ಎಣಿಸಿಕೊಂಡಳು. ತೃಪ್ತಳಾಗಿ ತನ್ನ ಮಲಗುವ ಮನೆಗೆ ಕರೆದುಕೊಂಡು ಹೋದಳು. ಅಂದಿನ ದಿನ ಮಾತ್ರವಲ್ಲ, ಗಂಡನು ಹಿಂತಿರುಗುವವರೆಗೂ ತನ್ನ ದೇಹವನ್ನು ಅವನಿಗೆ ಅರ್ಪಿಸಿದಳು.

ಗಸಪಾರಲೊ ಊರಿಗೆ ಬಂದ ಸುದ್ದಿಯನ್ನು ಕೇಳಿ ಗುಲ್ಫಾರ್ಡ್ದೊ ನೆಟ್ಟಗೆ ಅವನ ಮನೆಗೆ ಹೋದನು. ಗಂಡ-ಹೆಂಡಿರಿಬ್ಬರೂ ಮಾತನಾಡುತ್ತಾ ಕುಳಿತ್ತಿದ್ದರು. ಗುಲ್ಫಾರ್ಡ್ದೊ "ಗಸಪಾರಲೋ, ನೀನು ಸಮಯಕ್ಕೆ ಹಣಕೊಟ್ಟದುದಕ್ಕಾಗಿ ನಾನು ಚಿರಋಣಿ. ನಾನು ಯಾವ ಕಾರ್ಯಕ್ಕಾಗಿ ತೆಗೆದುಕೊಂಡೆನೋ ಅದು ಆಗಲಿಲ್ಲ. ಅವತ್ತೇ ನಿನ್ನ ಹೆಂಡತಿಯ ಕೈಲಿ ಹಿಂತಿರುಗಿ ಕೊಟ್ಟೆ. ದಯವಿಟ್ಟು ಸಾಲವನ್ನು ವಜಾಮಾಡು" ಎಂದನು.

ಗಸಾಪಾರಲೋ ಹೆಂಡತಿಯ ಕಡೆ ತಿರುಗಿ "ಹೌದಾ?'' ಎಂದು ಕೇಳಿದನು. ಗುಲ್ಫಾರ್ಡ್ದೋ ಸ್ನೇಹಿತನ ಎದುರಿಗೆ ಹಣವನ್ನು ಕೊಟ್ಟಿದ್ದರಿಂದ ಇಲ್ಲವೆಂದು ಹೇಳಲು ಸಾಧ್ಯವಿರಲಿಲ್ಲ.

''ಹೌದೂಂದ್ರೆ ಮಾತಿನಲ್ಲಿ ಮರತೇ ಬಿಟ್ಟಿದ್ದೆ" ಎಂದಳು.

'ಹಾಗಾದರೆ ಸರಿ' ಎಂದನು ವಣಿಕ.

ಗುಲ್ಫಾರ್ಡ್ದೋ ಹಣವನ್ನು ಎರುವಾಗಿ ಕೊಟ್ಟಿದ್ದಕ್ಕೆ ಬಾಯಿತುಂಬ ಹೊಗಳಿ ಅಲ್ಲಿಂದ ಕಾಲು ಕಿತ್ತನು. ದುರಾಸೆ ಪಟ್ಟಿದ್ದಕ್ಕೆ ಗಂಡನ ಹತ್ತಿರವೇ ಸಾಲವನ್ನು ತೆಗೆದುಕೊಂಡು ಅವಳೊಡನೆ ಮುಫ್ತಿನಲ್ಲೇ ವಜಾಮಾಡಿದ್ದ!

# ಕುದುರೆಯನ್ನು ಓಡಿಸಿ ಕುಮುದೆಯನ್ನು ಪಡೆದ !

ಪ್ರೊಟೋನಿಯಸ್

ನಗರಾಧ್ಯಕ್ಷನ ಹೆಂಡತಿಯು ಅನುಪಮ ಸುಂದರಿ. ಪ್ರತಿನಿತ್ಯ ನಗರದ ಪ್ರಾಮುಖ್ಯ ಚೌಕದ ಬಳಿ ಅವಳ ಮನೆಯ ಮುಂದೆ ಹೋಗಿಬರುವವರನ್ನು ನೋಡುತ್ತಾ ನಿಲ್ಲುತ್ತಿದ್ದ ಸಂಗೀತ ನಿರ್ಮಾತೃ (Composer) ವನ್ನು ನೋಡಿ, ಮೋಹಿತಳಾಗಿ ಅವನೊಡನೆ ಪ್ರೇಮದ ಪರಾಕಾಷ್ಠತೆಯ ಸುಖ ವನ್ನು ಅನುಭವಿಸಲು ಬಯಸಿದಳು.

ಅವಳ ಗಂಡನು ವಕೀಲ, ನ್ಯಾಯಶಾಸ್ತ್ರ ಪಂಡಿತ. ಕಾರ್ಯನಿರ್ವಹಣೆ ಯಲ್ಲಿ ವಿಶೇಷ ಪರಿಶ್ರಮವನ್ನು ಪಡೆದಿದ್ದರೂ, ರಸಿಕನಲ್ಲ. ದಾಂಪತ್ಯ ಜೀವನವು ನೀರಸವಾಗಿತ್ತು. ಯಾರಾದರೂ ಸ್ವಾರಸ್ಯವಾಗಿ ಬುದ್ಧಿವಂತಿಕೆ ಯನ್ನು ಉಪಯೋಗಿಸಿದ್ದಲ್ಲಿ ಮನವೊಲಿಯವುದಾಗಿ ಸಂಗೀತಗಾರನಿಗೆ ತಿಳಿಸಿದಳು.

ಸಂಗೀತಗಾರನೂ ಅವಳನ್ನು ನೋಡಿ ಮುಗ್ಧನಾದನು. ಅವಳಿಗೆ ತಾನು ಅತಿ ಬುದ್ಧಿವಂತನೆಂದು ತೋರಿಸಲು ಮನಸ್ಸು ಮಾಡಿದನು.

ಒಂದು ದಿವಸ ' ಎಂತಹ ಕಷ್ಟವಾದ ಕೆಲಸವನ್ನಾದರೂ ಮಾಡ ಬಲ್ಲೆಯಾ ; ಎಂದು ಕೇಳಿದಳು " ಓ ಅದಕ್ಕೇನು" ಎಂದನು ಕೃತಿಕಾರ."

" ನೀನು ಸಂಗೀತಗಾರ. ನಮ್ಮ ಯಜಮಾನರಿಗೂ ಸಂಗೀತವೆಂದರೆ ಇಷ್ಟವೆ ! ಕೃತಿಗಳನ್ನು ಕೇಳಲು ಬೆಟ್ಟದ ಮೇಲಿರುವ ನಿನ್ನ ಮನೆಗೆ ಬರು

ತ್ತೇನೆ. ನನ್ನ ಯಜಮಾನರು ತಾವೂ ಬರುವುದಾಗಿ ಹೇಳುವರು. ಇಬ್ಬರೂ ಬರುತ್ತೇವೆ" ಎಂದಳು.

"ಸರಿ, ನಿನ್ನ ಸವಾಲೇನು ?"

"ನಿಮ್ಮ ಮನೆಯಿಂದ ನಾವಿಬ್ಬರೂ ಹಿಂತಿರುಗುವುದಕ್ಕೆ ಮೊದಲು ನೀನು ನನ್ನನ್ನು ಪ್ರೀತಿಸಬೇಕು. ಆಗ ನಾನು ನಿನ್ನವಳು ಎಂದಳು.

ಸಂಗೀತಗಾರನು ಸ್ವಲ್ಪ ಹೊತ್ತು ಯೋಚಿಸಿದನು. ಉಪಾಯವೊಂದು ಹೊಳೆಯಿತು. ಪಕ್ಕದ ಮನೆಯಲ್ಲಿದ್ದ ಗೆಳೆಯನೊಂದಿಗೆ ಬೆಟ್ಟದ ಮೇಲಿದ್ದ ಮನೆಗೆ ಹೋದನು. ಇಬ್ಬರೂ ನಗರಾಧ್ಯಕ್ಷ ಮತ್ತು ಅವನ ಹೆಂಡತಿಯನ್ನೇ ಎದುರು ನೋಡುತ್ತಾ ಕುಳಿತರು. ಮನೆಯ ಮುಂದೆ ಕುದುರೆಯ ಗಾಡಿಯೊಂದು ಬಂದು ನಿಂತಿತು. ಇಬ್ಬರೂ ಜಗಳವಾಡುತ್ತಿದ್ದಂತೆ ಗಟ್ಟಿಯಾಗಿ ಮಾತನಾಡತೊಡಗಿದರು. ಅತಿಥಿಗಳು ಗಾಡಿಯಿಂದ ಇಳಿಯುತ್ತಿದ್ದಂತೆ ಸಂಗೀತಗಾರನು ಮನೆಯ ಬಾಗಿಲನ್ನು ತೆಗೆದು, ಕೈಯ್ಯಲ್ಲಿ ದೊಣ್ಣೆ ಹಿಡಿದು ಗೆಳೆಯನನ್ನು ಹೊಡಿಯುತ್ತಾ ಹೊರಗೆ ಬಂದನು. ಗೆಳೆಯನು ಓಡಿ ಹೋದನು.

"ನಾನು ಬರುತ್ತಿರುವ ಸಮಯವು ಸರಿಯಾಗಿಲ್ಲವೆಂದು ಕಾಣುತ್ತಿದೆ" ಎಂದನು ಮೇಯರ್.

"ಚಿಂತೆಯಿಲ್ಲ. ಎಂದಿದ್ದರೂ ನಿಜವು ಹೊರಕ್ಕೆ ಬಂದೇ ಬರುತ್ತದೆ. ನೋಡಿ, ನನಗೆ ಹೆಂಗಸರೆಂದರೆ ಆಗುವುದಿಲ್ಲ. ಅವರನ್ನು ಕಂಡು ಮೋಹಿಸುವುದೂ ಇಲ್ಲ. ಗಂಡಸಿನೊಡನೆಯೇ ಸಹವಾಸ ಬೆಳಸಿದ್ದೇನೆ. ನೀವು ಬರುವುದಕ್ಕೆ ಮುಂಚೆ ಈಗ ಹೊಡೆದು ಓಡಿಸಿದೆನಲ್ಲಾ ಅವನು ಬೇರೆ ಹುಡುಗಿಯನ್ನು ಪ್ರೀತಿಸುವುದಾಗಿ ಹೇಳಿದನು. ಅದಕ್ಕೇ ಜಗಳ." ಎಂದ ಸಂಗೀತಗಾರ.

ಅಷ್ಟರಲ್ಲಿ ಹೊರಗಡೆ ಗಲಭೆ ಎದ್ದಿತು. ಬಾಗಿಲ ಹತ್ತಿರ ಬಂದು ನೋಡಿದಾಗ ಗೆಳೆಯನು ಗಾಡಿಗೆ ಕಟ್ಟಿದ್ದ ಹೆಣ್ಣು ಕುದುರೆಯನ್ನು ಬಿಚ್ಚಿ ಹತ್ತಿಸಿಕೊಂಡು ಹೋಗುತ್ತಿದ್ದನು. ಸ್ವಲ್ಪ ಹೊತ್ತಾದ ಮೇಲೆ, ಮಿತ್ರನು ಹಿಂತಿರುಗಿ ಬಂದು ಸಂಗೀತಗಾರನನ್ನು ನೋಡಿ,

" ನಿನಗೆ ಸರಿಯಾಗಿ ಶಿಕ್ಷೆ ಮಾಡಿದ್ದೇನೆ. ಈಗ ಬಂದಿರುವ ನಿನ್ನ ಮಿತ್ರರು ಹಿಂತಿರುಗಿ ಹೋಗುವ ಹಾಗೆಯೇ ಇಲ್ಲ." ಎಂದನು.

ಸಂಗೀತಗಾರನು ತನ್ನ ಗೆಳೆಯನು ಮಾಡಿದ ಕಾರ್ಯಕ್ಕೆ ಕ್ಷಮೆಯನ್ನು ಬೇಡಿ " ಅವನಿಗೆ ಮುಂಗೋಪ. ಬೇರೆ ಯಾರಾದರೂ ಈ ಕಡೆ ಬರುವವರೆಗೂ ನೀವು ಇಲ್ಲೇ ಇರಬೇಕಾಗುತ್ತದೆ. ವೃಥಾ ತೊಂದರೆ ಕೊಡುತ್ತಿದ್ದೇನೆ" ಎಂದನು.

ಮೇಯರ್ ತೊಂದರೆ ಏನಿಲ್ಲ. ನಡೆದುಹೋದ ವಿಷಯಕ್ಕೆ ಯೋಚಿಸಿ ಪ್ರಯೋಜನವಿಲ್ಲ. ಒಂದು ವಿಷಯ. ಇಲ್ಲಿ ಮಲಗಲು ಸೌಕರ್ಯ ವಿದೆಯೊ ?" ಎಂದು ಕೇಳಿದನು.

ಸಂಗೀತಗಾರನು " ನನಗೊಂದು ನನ್ನ ಮಿತ್ರನಿಗೊಂದು ಹಾಸಿಗೆ ಇದೆ. ನಿಮಗೇ ಗೊತ್ತಿದೆ. ನಾನು ಮತ್ತು ನನ್ನ ಸ್ನೇಹಿತನು ಜಗಳವಾಡಿರುವುದರಿಂದ ಒಂದೇ ಹಾಸಿಗೆಯಲ್ಲಿ ಮಲಗಲು ಸಾಧ್ಯವಿಲ್ಲ " ಎಂದನು.

ಮೇಯರು ಸ್ವಲ್ಪ ಹೊತ್ತು ಯೋಚಿಸಿದನು. ತನ್ನ ಹೆಂಡತಿಯು ಸಂಗೀತಗಾರನ ಸ್ನೇಹಿತನ ಜೊತೆಯಲ್ಲಿ ಮಲಗಲು ಸಾಧ್ಯವಿಲ್ಲ. ಏಕೆಂದರೆ ಸ್ವಲ್ಪ ಹೊತ್ತಿಗೆ ಮುಂಚೆ ಅವನು ಹೆಂಗಸರನ್ನು ಪ್ರೀತಿಸುವುದಾಗಿ ಹೇಳಿದ್ದಾನೆ ಎಂದುಕೊಂಡು " ನೋಡಿ ಹೀಗೆ ಮಾಡಿದರೆ ಹೇಗೆ? ನಾನು ಮತ್ತು ನಿಮ್ಮ ಮಿತ್ರ ಒಂದು ಹಾಸಿಗೆಯಲ್ಲಿ, ನೀವೂ ಮತ್ತು ನನ್ನ ಆಕೆ ಒಂದು ಹಾಸಿಗೆಯಲ್ಲಿ ಮಲಗಬಹುದಲ್ಲಾ ?" ಎಂದನು.

ಸಂಗೀತಗಾರನು ಅಭ್ಯಂತರವೇನಿಲ್ಲವೆಂದನು. ನಾಲ್ವರೂ ಮಲಗಲು ಹೊರಟರು. ಸಂಗೀತಗಾರನು ರಾತ್ರಿಯೆಲ್ಲಾ ತನ್ನ ಪ್ರೇಯಸಿಗೆ ಮಧುರ ಸಂಗೀತವು ಝೇಂಕರಿಸುವಂತೆ ಮಾಡಿದನು.

# ರಾಕ್ಷಸ ಮತ್ತು ರಾಜಕುಮಾರಿ

ಐರ್ಲೆಂಡಿನ ಒಂದು ದಂತಕಥೆ

ಸೈಂಟ್ ಪ್ಯಾಟ್ರಿಕ್ ಮಹಾದಂಡವನ್ನು ಹಿಡಿದು ವಿಷಸರ್ಪಗಳಂತಿದ್ದ ಜನರನ್ನು ಸುಧಾರಿಸಲು ಪಾದಾರ್ಪಣಮಾಡಿದ್ದಕ್ಕೂ ಮೊದಲು ಐರ್ಲೆಂಡಿನಲ್ಲಿ, ಬಹಳ ಹಿಂದಿನ ಕಾಲದಲ್ಲಿ ಇಬ್ಬರು ರಾಜರುಗಳಿದ್ದರು. ಒಬ್ಬನು ಸಾಧಾರಣ ಐರ್ಲೆಂಡಿಗನಂತೆ ಗುಂಡುಗುಂಡಾಗಿ ಮೈತುಂಬಿಕೊಂಡು ಬಲಾಢ್ಯನಾಗಿದ್ದನು. ಅವನನ್ನು ಜನರು ಒಳ್ಳೆಯ ದೊರೆ ಎಂದು ಕರೆಯುತ್ತಿದ್ದರು. ಅವನಿಗೊಬ್ಬಳು ಮಗಳಿದ್ದಳು. ದೇವಲೋಕದ ಸುಂದರಿಯಂತೆ ಅವಳ ರೂಪ.

ಪಕ್ಕದಲ್ಲಿದ್ದ ರಾಜನನ್ನು ಮನುಷ್ಯನೆಂದು ಹೇಳುವ ಹಾಗೆಯೇ ಇರಲಿಲ್ಲ. ಧಾಂಡಿಗ. ಮೈಮೇಲೆಲ್ಲಾ ಕರಡಿಯ ಹಾಗೆ ಕೂದಲು. ರಾಕ್ಷಸನಂತೆ ಎತ್ತರ, ದಪ್ಪವಾಗಿದ್ದನು. ಜನರು ಅವನನ್ನು ರಾಕ್ಷಸನೆಂದೇ ಕರೆಯುತ್ತಿದ್ದರು.

ಒಂದು ದಿವಸ ರಾಕ್ಷಸರಾಜನು ಒಳ್ಳೆಯ ರಾಜನನ್ನು ನೋಡಲು ಬಂದನು. ಬಂದದ್ದು ಕೆಟ್ಟ ಘಳಿಗೆ ಎಂದು ಹೇಳಬಹುದು. ಅವನ ವಕ್ರ ದೃಷ್ಟಿಯು ರಾಜಕುಮಾರಿಯ ಮೇಲೆ ಬಿತ್ತು. ನೋಡುತ್ತಾ ಇದ್ದ ಹಾಗೆ ಅವನ ಬಾಯಲ್ಲಿ ನೀರೂ ಊರಿತು.

“ ನಿನ್ನ ಮಗಳನ್ನು ಮದುವೆ ಏಕೆ ಆಗಬಾರದು ಎಂದೆನಿಸುತ್ತಿದೆ. ಏನು ಹೇಳುತ್ತೀ?” ಎಂದು ಸವಾಲು ಹಾಕಿದನು.

ಒಳ್ಳೆಯ “ ದೊರೆಯು ” ಇವಳಂತಹ ಸುಂದರಳಾದ ಯುವತಿಯು ದೇಶದಲ್ಲೇ ಇಲ್ಲವೆಂದು ಹೇಳಬೇಕು. ಅವಳನ್ನು ಕಪ್ಪುಕೂದಲಿನ ಇವಾನ್ಸಿಗೆ ಕೊಡಲು ನಿಶ್ಚಯಿಸಿದ್ದೇನೆ” ಎಂದು ಉತ್ತರವಿತ್ತನು.

ರಾಕ್ಷಸನಿಗೆ ಅಸಮಾಧಾನವಾಯಿತು. ಅವಳನ್ನು ನಾನೇ ಮದುವೆಯಾಗುತ್ತೇನೆ ! ಇಲ್ಲದಿದ್ದರೆ ನಮ್ಮ ದೇಶಗಳ ಮಧ್ಯೆ ಯುದ್ಧವೇ ಆಗುತ್ತದೆ.

ಇದು ಖಂಡಿತ! ನಿನ್ನ ಆ ಇವಾನನ್ನು ಕರೆಕಳುಹಿಸು. ಅವನ ಹತ್ತಿರ ನಾನು ಮಾತನಾಡಬೇಕು. ಕರೀ ಕೂದಲಿನ ಆ ಪ್ರಾಣಿಗೆ ತಲೆಯಲ್ಲಿ ಬುದ್ಧಿ ಏನಾದರೂ ಇದ್ದರೆ ಮದುವೆಯ ಯೋಚನೆಯನ್ನು ಬಿಡುತ್ತಾನೆ." ಎಂದು ಗುಡುಗಿದನು.

ಒಳ್ಳೆಯ ದೊರೆಯು ತನ್ನ ಭಾವೀ ಅಳಿಯನಿಗೆ ರಾಕ್ಷಸನು ಹೇಳಿದ್ದನ್ನು ತಿಳಿಸಿದನು. ಇವಾನನು ಐರ್ಲೆಂಡಿನವರು ಸಹಜವಾಗಿ ಉತ್ತರ ಕೊಡುವಂತೆ "ದೇಶಗಳ ನಡುವೆ ಯುದ್ಧವೇಕೆ ಆಗಬೇಕು. ನಾನು ಮತ್ತು ದೊರೆಯು ದ್ವಂದ ಯುದ್ಧ ಮಾಡಿದರಾಯಿತು. ಯುದ್ಧದಲ್ಲಿ ಗೆದ್ದವರು ನಿನ್ನ ಮಗಳನ್ನು ಮದುವೆಯಾಗಲಿ" ಎಂದನು.

ರಾಜನು ಸಂತೋಷದಿಂದ "ಚೆನ್ನಾಗಿಯೇ ಹೇಳಿದೆ. ಹೋಗಿ ದೇವರನ್ನು ಪ್ರಾರ್ಥಿಸು. ಅದಕ್ಕಿಂತಲೂ ಮನಸ್ಸಿಗೆ ಹೆಚ್ಚಾಗಿ ಸಮಾಧಾನ ಕೊಡುವುದು ಮತ್ತೊಂದಿಲ್ಲ" ಎಂದನು.

ಆದರೂ ಇವಾನನು ಇಜಾರದಲ್ಲೇ ನಡುಗಿದನು. ರಾಕ್ಷಸನು ತೆಂಗಿನ ಮರದಂತೆ ಎತ್ತರವಾಗಿದ್ದನು. ಎದೆಯು ಇವನ ಎದೆಗಿಂತ ಎರಡರಷ್ಟು ಅಗಲವಾಗಿತ್ತು. ಮಹಾ ಬಲಶಾಲಿ. ಅವನ ಕತ್ತಿಯು ದೋಣಿಯ ಹುಟ್ಟುಗೋಲಿನಷ್ಟು ಉದ್ದವಾಗಿ ಮರದಗಲವಿತ್ತು. ಇವಾನನ ಮನಸ್ಸಿನಲ್ಲಿದ್ದ ಆಂದೋಳನವನ್ನು ಅರಿತು ರಾಜಕುಮಾರಿಯು ನಸುನಗುತ್ತಾ ಅವನ ಕಿವಿಯಲ್ಲಿ "ನೀನು ಬದುಕಬೇಕೆಂಬ ಆಸೆಯಿದ್ದರೆ ದ್ವಂದಯುದ್ಧ ಮಾಡುವಾಗ ನಿನ್ನ ಬೆನ್ನು ರಾಜನ ಕಡೆಯಿರಲಿ" ಎಂದು ಹುರಿದುಂಬಿಸಿದಳು.

ಮರುದಿನ ಬೆಳಿಗ್ಗೆ ಊರಿನ ಜನರೆಲ್ಲಾ ದ್ವಂದ ಯುದ್ಧವನ್ನು ನೋಡಲು ನೆರೆದರು. (ಒಬ್ಬ ಹೆಂಗಸಾದರೂ ಬಂದಿರಲಿಲ್ಲ). ರಾಕ್ಷಸ ಮತ್ತು ಇವಾನ್ ಇದುರುಬದುರಾಗಿ ನಿಂತರು. ಒಬ್ಬನು ಮನುಷ್ಯ, ಮತ್ತೊಬ್ಬನು ರಾಕ್ಷಸ. ಇಬ್ಬರೂ ರಾಜನು ಪ್ರಾರಂಭಿಸಲು ಯಾವಾಗ ಅಪ್ಪಣೆ ಕೊಡುವನೋ ಎಂದು ಎದುರುನೋಡುತ್ತಾ ನಿಂತರು. ರಾಜಕುಮಾರಿಯು ರಾಜನ ಬಲಭಾಗದಲ್ಲಿ ಬಂದು ಕುಳಿತಳು.

ರಾಜನು "ಯುದ್ಧವನ್ನು ಪ್ರಾರಂಭಿಸಿ. ಯಾರು ಗೆಲ್ಲುತ್ತಾರೋ ಅವರು ಇಡೀ ಐರ್ಲೆಂಡಿನಲ್ಲೇ ಅತ್ಯುತ್ತಮ ಕತ್ತಿಯೋಧ. ನನ್ನ ಮಗಳ ಕೈಹಿಡಿಯಲು ಅರ್ಹನಾದವನು " ಎಂದು ಕೈಸನ್ನೆ ಮಾಡಿದನು.

ಕಹಳೆಯೂದಿತು. ಇಬ್ಬರೂ ಕತ್ತಿಗಳನ್ನು ಮೇಲಕ್ಕೆ ಎತ್ತಿದರು. ರಾಕ್ಷಸನು ಕತ್ತಿಯನ್ನು ಎತ್ತುತ್ತಿದ್ದಂತೆ ಇವಾನನು ನುಗ್ಗಿ ಇರಿದಿದ್ದರೆ ಎದುರಾಳಿಯು ತಕ್ಷಣವೇ ಮಡಿಯುತ್ತಿದ್ದನು. ರಾಕ್ಷಸನು ರುಯ್ಯನೆ ಕತ್ತಿಯಿಂದ ಒಂದೇ ಸಮನಾಗಿ ಪ್ರಹಾರಮಾಡಲುಪಕ್ರಮಿಸಿದನು. ಇವಾನನು " ಇನ್ನು ನನ್ನ ಗತಿಯಾಯಿತು " ಎಂದುಕೊಂಡನು.

ಕಡೆಗೆ ರಾಜಕುಮಾರಿಯು ಹೇಳಿದ ಮಾತು ಜ್ಞಾಪಕಕ್ಕೆ ಬಂದಿತು. " ನೀನು ಬದುಕಲು ಇಷ್ಟಪಟ್ಟಲ್ಲಿ ರಾಜನ ಎದುರಾಗಿ ಬೆನ್ನುಮಾಡಿ ಯುದ್ಧ ಮಾಡು. ರಾಕ್ಷಸನು ರಾಜನ ಎದುರಾಗಲಿ " ರಾಕ್ಷಸನು ರಾಜನ ಎದುರಾಗುವಂತೆ ಚಮತ್ಕಾರವಾಗಿ ಪಕ್ಕಕ್ಕೆ ಸರಿಯುತ್ತಾ ಹೋದನು. ಸ್ವಲ್ಪ ಹೊತ್ತಿನಲ್ಲಿ ರಾಕ್ಷಸನು ದೊರೆಯ ಎದಿರಾದನು. ಇವಾನನ ಎದುರಿಗೆ ಹಚ್ಚ ಹುಲ್ಲುಗಾವಲು, ಮರಗಳು.

ರಾಕ್ಷಸನು ಹುಮ್ಮಸ್ಸಿನಿಂದ " ನಿನ್ನನ್ನು ಯಾವ ಘಳಿಗೆಯಲ್ಲಿ ಬೇಕಾದರೂ ಸೀಳಿಹಾಕಬಲ್ಲೆ. ರಾಜಕುಮಾರಿಗೆ ತಾನು ಎಂತಹ ದುರ್ಬಲನನ್ನು ಮದುವೆಯಾಗುತ್ತಿದ್ದಳು ಎಂಬುದು ಮನದಟ್ಟಾಗಲಿ". ಎಂದು ಗಹಗಹಿಸಿ ನಕ್ಕನು ಇದ್ದಕ್ಕಿದ್ದಂತೆ ರಾಕ್ಷಸನ ಕೈ ಇಳಿಮುಖವಾಗುತ್ತಾ ಬಂದಿತು. ಕಡೆಗೆ ಕತ್ತಿಯ ತುದಿಯು ನೆಲವನ್ನು ಮುಟ್ಟಿತು ಕಣ್ಣುಗಳನ್ನು ಅಗಲಿಸಿ ಆಶ್ಚರ್ಯದಿಂದ ಬಾಯಿಬಿಟ್ಟುಕೊಂಡು ನೆಟ್ಟ ನೋಟದಿಂದ ನೋಡುತ್ತಾ ನಿಂತುಕೊಂಡನು. ಇವಾನನಿಗೆ ರಾಕ್ಷಸನು ಹೀಗೇಕೆ ನಿಂತಿದ್ದಾನೆ ಎಂದು ಆಶ್ಚರ್ಯವಾಗಿ ತಿರುಗಿ ನೋಡಿ ತಾನೂ ಸ್ತಬ್ಧನಾಗಿ ನಿಂತನು.

ಯಾರ ಕಣ್ಣಿಗೂ ಬೀಳದಂತೆ (ಏಕೆಂದರೆ ಎಲ್ಲರ ದೃಷ್ಟಿಯೂ ದ್ವಂದ ಯುದ್ಧವನ್ನು ಮಾಡುವವರ ಮೇಲೆ ಕೇಂದ್ರೀಕೃತವಾಗಿತ್ತು.) ರಾಜಕುಮಾರಿಯು ರಾಜನ ಹಿಂದೆ ನಿಂತು ಲಂಗವನ್ನು ಕೆಳಗೆ ಸರಿಸತೊಡಗಿದಳು. ಕತ್ತು, ಭುಜಗಳು ಕಾಣಿಸಿದವು. ಕ್ರಮೇಣ ಚೈತ್ರಮಾಸದ ಚಂದ್ರನಂತೆ ದುಂಡಾಗಿ

ಮಾಟವಾದ ಮೊಲೆಗಳೆರಡು ಗೋಚರವಾದುವು. ಲಂಗವು ಇನ್ನೂ ಜಾರಿದಾಗ ಕಿರಿದಾದ ಕಟಿ, ಹೊಕ್ಕಳು ಕಂಡುಬಂದವು. ರಾಜಕುಮಾರಿಯು ಹಿಂದು ಮುಂದಾಗಿ ಲಂಗವನ್ನು ಜಾರಿಸಿ ಪೂರ್ಣ ಬೆತ್ತಲೆಯಾದಳು. ರಾಕ್ಷಸನು ಕೋಲಿನಂತೆ ಕತ್ತಿಯನ್ನು ನೆಲಕ್ಕೆ ಊರಿ ನಿಂತನು. ಇವಾನನಿಗೆ ರಾಜ ಕುಮಾರಿಯು ಏಕೆ ಹಾಗೆ ಹೇಳಿದ್ದಳೆಂದು ಅರ್ಥವಾಯಿತು. ಸೂಜಿಗಲ್ಲಿನಂತೆ ಸೆಳೆದು ನಿಲ್ಲಿಸಿದ್ದ ಕಣ್ಣನ್ನು ಕಿತ್ತು ಇದೇ ಸರಿಯಾದ ಸಮಯವೆಂದು ಕತ್ತಿಯಿಂದ ರಾಕ್ಷಸನ ಕತ್ತನ್ನು ಇರಿದನು. ರಾಕ್ಷಸನು ಕೆಳಗೆ ಬೀಳುತ್ತಾ ಇವಾನನನ್ನು ನೋಡಿ "ಕೊಂದಿದ್ದು ಆ ಹೆಂಗಸು. ನೀನಲ್ಲ" ಎಂದನು.

ಅವಳು ಹೂಡಿದ ತಂತ್ರದಿಂದ ಇವಾನನು ರಾಕ್ಷಸನಿಗೆ ಬಲಿಯಾಗದಿದ್ದುದು ಮಾತ್ರವಲ್ಲ, ಆವಳ ಇಡೀ ಬಾಳು ರಾಕ್ಷಸನ ತೋಳ್ತೆಕ್ಕೆಯಲ್ಲಿ ಕಳೆಯುವುದೂ ತಪ್ಪಿತು. ಅನೇಕರ ದೃಷ್ಟಿಯಲ್ಲಿ ಈ ಅಸ್ತ್ರವು ಮಹಾ ನಿಕೃಷ್ಟವಾದುದೆಂದಿರಬಹುದು. ಇವಾನನ ದೃಷ್ಟಿಯಲ್ಲಿ ಇದು ಎಲ್ಲ ಆಸ್ತ್ರಗಳಿಗಿಂತ ಮಿಗಿಲಾದ, ಪರಿಣಾಮಕಾರಿಯಾದ ಪ್ರಳಯಾಂತಕ ಅಸ್ತ್ರವೆಂದೇ ತಿಳಿದಿದ್ದನು. ಬದುಕಿರುವವರೆಗೂ ಇದೇ ಅಭಿಪ್ರಾಯವನ್ನು ಹೊತ್ತಿದ್ದಲ್ಲದೆ ಸಮಯ ಬಂದಾಗ ಈ ಅಸ್ತ್ರವನ್ನು ಉಪಯೋಗಿಸಲು ಕೂಡ ಹಿಂಜರಿಯುತ್ತಿರಲಿಲ್ಲ.



# ತೈಲಚಿತ್ರವೂ ಬೆಳೆಯಿತು

ಬರೆದವರು : **ಜುಲಿಆನ್ ರುಯೀಜ್**

ಪಿಟಿಯಾ ಪಾಯಾ ಬ್ರಿಟನಿಯದ ಸುಪ್ರಸಿದ್ಧ ಚಿತ್ರಕಾರ. ತರುಣಿಯೊಬ್ಬಳ ಕೈಹಿಡಿದನು. ಮದುವೆಯಾದ ಹೊಸದರಲ್ಲಿ ಅವರ ದಾಂಪತ್ಯ ಜೀವನವು ಸುಶ್ರಾವ್ಯ ಸಂಗೀತದಂತೆ ಆನಂದಮಯವಾಗಿತ್ತು. ಹೆಚ್ಚು ದಿನಗಳು ಈ ರೀತಿ ಕಾಲಕಳೆಯಲು ಸಾಧ್ಯವಾಗಲಿಲ್ಲ. ಮದುವೆಯಾದ ತಿಂಗಳಲ್ಲೇ ಪಾಯಾ "ನಿನ್ನನ್ನು ಬಿಟ್ಟುಹೋಗಲು ಮನಸ್ಸೇ ಬರುವುದಿಲ್ಲ. ಏನು ಮಾಡಲಿ? ಫ್ಲಾಂಡರ್ಸಿಗೆ ಕೆಲಸದ ಮೇಲೆ ಹೋಗಬೇಕಾಗಿದೆ. ಬರುವಾಗ ನಿನಗೆ ಇಷ್ಟವಾದ ಒಡವೆ-ವಸ್ತ್ರಗಳನ್ನು ತರುತ್ತೇನೆ" ಎಂದು ಖಿನ್ನನಾಗಿ ಹೇಳಿದನು.

ಅವಳಿಗೂ ಈ ಸುದ್ದಿಯು ಸಂತೋಷದಾಯಕವಾಗಿರಲಿಲ್ಲ. "ನೀವು ಹೋಗದೆ ಇಲ್ಲೇ ಇದ್ದಿದ್ದರೆ ಚನ್ನಾಗಿತ್ತು ಕಾಣ್ರೀ . ಹೋಗಲೇಬೇಕಾಗಿದ್ದರೆ ಏನು ಮಾಡುವುದು? ಹುಷಾರಾಗಿ ನಿಮ್ಮ ಆರೋಗ್ಯವನ್ನು ನೋಡಿಕೊಳ್ಳಿ. ಅಲ್ಲಿ ಹೋದಮೇಲೆ ಇಲ್ಲಿರುವುದನ್ನು ಮರಿಯಬೇಡಿ" ಎಂದಳು.

"ಛೆ! ಮರೆಯುವುದಕ್ಕೆ ಆಗುತ್ತದೆಯಾ? ಖಂಡಿತ ಇಲ್ಲ! ಹೋಗುವುದಕ್ಕೆ ಮೊದಲು ನಮ್ಮ ಪ್ರೀತಿಯು ಎಂಥಹದೆಂದು ಸೂಚಿಸಲು ನಿನ್ನ ಮೇಲೆ ಒಂದು ಚಿತ್ರವನ್ನು ಬಿಡಿಸುತ್ತೇನೆ. ಅದನ್ನು ನೋಡಿಕೊಂಡಾಗಲೆಲ್ಲಾ ನಿನಗೆ ನನ್ನ ನೆನಪು ಬರುತ್ತಿರುತ್ತದೆ" ಎಂದನು.

"ಹಾಗಾದರೆ ಬರಿಯಿರೀಂದರೆ" ಎಂದು ಉತ್ಸಾಹದಿಂದ ತೊಟ್ಟ ಸಿಲ್ಕ್ ಗೌನನ್ನು ಬಿಚ್ಚಿ ನಗ್ನಳಾಗಿ ನಿಂತಳು. ಪಾಯಾ, ಅವಳ ಹೊಕ್ಕಳ ಕೆಳಗೆ ಕುರಿಮರಿಯ ಚಿತ್ರವನ್ನು ಬಿಡಿಸಿ, ತಕ್ಷಣ ಊರಿಗೆ ಪ್ರಯಾಣ ಬೆಳಸಿದನು.

ಎರಡು ವರ್ಷಗಳು ಕಳೆದವು. ಪಾಯಾ ಹಿಂತಿರುಗಲಿಲ್ಲ. ಅವಳಿಗೆ ದಿನಗಳನ್ನು ಕಳಿಯುವುದೇ ಕಷ್ಟವಾಯಿತು. ಒಂದೊಂದು ಮಾಸವೂ

ಹೋಗೊಂದು ವರ್ಷದಂತೆ ತೋರಿತು. ವರ್ಷವಾದಂತೆ, ತಿಂಗಳುಗಳುರುಳಿದಂತೆ ತರುಣಿಯ ಮನಸ್ಸೂ ಚಂಚಲವಾಯಿತು. ಕೇವಲ ಒಂದೇ ತಿಂಗಳು ಗಂಡನೊಡನೆ ಸುಖವನ್ನು ಕಂಡಿದ್ದಳು. ಒಂದು ದಿವಸ ಅವಳ ಮನಸ್ಸು ಯುವಕನೊಬ್ಬನ ಕಡೆ ಹರಿಯಿತು. ಯುವಕನನ್ನು ಮನೆಗೆ ಆಹ್ವಾನಿಸಿದಳು. ಹಾಸಿಗೆಯಲ್ಲೂ ಅವನೊಂದಿಗೆ ಮಲಗಿದಳು. ಯುವಕನು ಉತ್ಸಾಹದಲ್ಲಿ ತಿಂಗಳ ಒಳಗೇ ಉಜ್ಜಿಉಜ್ಜಿ ಕುರಿಮರಿಯ ಗುರ್ತಿಲ್ಲದಂತೆ ಅಳಿಸಿಯೇ ಬಿಟ್ಟನು.

ಗಂಡನಿಂದ ಹಿಂತಿರುಗಿ ಬರುವುದಾಗಿ ಪತ್ರವು ಬಂದಿತು. ಯುವತಿಯು ಗಾಬರಿಯಾದಳು. ಇನಿಯನನ್ನು ಕರೆಕಳುಹಿಸಿ, “ಕುರಿಮರಿ ಇದ್ದ ಸ್ಥಳದಲ್ಲಿ ಹಾಗೇ ಇನ್ನೊಂದನ್ನು ಬರಿ” ಎಂದಳು.

ಯುವಕನು ಮಹಾಘಟಂಗ. ಕುರಿಮರಿಗೆ ಬದಲಾಗಿ ಟಗರನ್ನು ಬರೆದು ಅದಕ್ಕೆ ಕೊಂಬುಗಳನ್ನು ಸಿಕ್ಕಿಸಿ, ಇತರ ಅಂಗಾಂಗಗನನ್ನು ಸೂಕ್ಷ್ಮವಾಗಿ ಎದ್ದುಕಾಣುವಂತೆ ಬಿಡಿಸಿದನು.

ಅಷ್ಟು ಉತ್ಸಾಹದಿಂದ ಬರಮಾಡಿಕೊಳ್ಳದಿದ್ದುದನ್ನು ನೋಡಿ-ಪಾಯಾಗೆ ಯಾಕೋ ಯಾವುದೂ ಸರಿಯಾಗಿದ್ದಂತೆ ತೋರಲಿಲ್ಲ. ಬಂದ ತಕ್ಷಣ ಹೆಂಡತಿಯನ್ನು ಮಲಗುವ ಕೋಣೆಗೆ ಕರೆದುಕೊಂಡುಹೋಗಿ “ಕುರಿಮರಿ ಹೇಗಿದೆ ನೋಡಣ ಚಿನ್ನ. ಆಮೇಲೆ ಮಲಗೋಣ” ಎಂದನು.

ಹೊಕ್ಕಳಿನ ಕೆಳಗೆ ಕುರಿಯ ಮರಿಗೆ ಬದಲು ಟಗರೊಂದು ನಿಂತಿದ್ದನ್ನು ನೋಡಿ ಅವಾಕ್ಕಾಗಿ “ಅರ್ಥವೇ ಆಗುವುದಿಲ್ಲ! ಇದು ಹೇಗೆ ಸಾಧ್ಯ.... ಇದೆಲ್ಲಿಂದ ಬಂದಿತು?” ಎಂದನು.

ಹೆಂಡತಿಯು ತುಚ್ಛವಾಗಿ ನಕ್ಕು, “ಕುರಿಮರಿಯು ಟಗರು ಹೇಗಾಯಿತೆಂದು ಕೇಳುತ್ತೀರಾ? ನೀವು ಮೊದಲೇ ಬಂದಿದ್ದರೆ ಕುರಿಮರಿ ಕುರಿಮರಿಯಾಗಿಯೇ ಇರುತ್ತಿತ್ತು” ಎಂದಳು.

ಇದರಿಂದ ಕಲಿಯುವ ನೀತಿ ಏನು? ಹೆಂಡತಿಯನ್ನು ಮನೆಯಲ್ಲಿ ಬಿಟ್ಟು ಬಹುಕಾಲ ದೂರವಾಗಿದ್ದರೆ ಕುರಿಮರಿಯು ಟಗರಾಗುವುದೇನೂ ಹೆಚ್ಚಲ್ಲ!



# ಹೆಬ್ಬೆಟ್ಟಿನ ವೃತ್ತಾಂತ

ಬರೆದವರು : **ಗಿಯೋವಾನಿ ಬೊಕ್ಯಾಷಿಯೋ**

ವಣಿಕ ಅರಿಗೂಷಿಯೋ ಆಗರ್ಭ ಶ್ರೀಮಂತ. ಸತ್ಕುಲಪ್ರಸೂತೆಯೂ, ಸ್ಫುರದ್ರೂಪಿಯೂ ಆದ ಸಿಸ್ಮಾಂಡಳನ್ನು ಮದುವೆಯಾದನು. "ರೂಪವತಿಯಾದ ಹೆಂಡತಿ ಶತೃವಂತೆ." ಹಾಗೆ ನಾಣ್ಣುಡಿಯಿದೆ. ಅರಿಗೂಷಿಯೋಗೆ ತನ್ನ ಹೆಂಡತಿಯ ಮೇಲೆ ಯಾರಾದರೂ ಕಣ್ಣು ಹಾಕಿಯಾರೆಂದು ಅನುಮಾನ! ಹೆದರಿಕೆ! ಅಲ್ಲದೆ ಆಗಾಗ ಕೆಲಸಕ್ಕಾಗಿ ಬೇರೆ ಊರುಗಳಿಗೆ ಹೋಗುವ ಪ್ರಸಂಗಗಳು ಒದಗುತ್ತಿದ್ದವು.

ಸಿಸ್ಮಾಂಡಳೂ ಉಪ್ಪು-ಹುಳಿ-ಖಾರ ತಿನ್ನುವವಳೆ! ರಾಬೆರ್ಟ್ ಎಂಬುವನನ್ನು ಪ್ರೀತಿಸುತ್ತಿದ್ದಳು. ಪತಿಯು ಊರಿನಲ್ಲಿಲ್ಲದಿರುವಾಗ ಪ್ರೇಮಿಗಳಿಬ್ಬರೂ ಸ್ವರ್ಗವನ್ನು ಕಾಣುತ್ತಿದ್ದರು. ಅರಿಗೂಷಿಯೋ ಮೊದಲೇ ಅನುಮಾನ ಪ್ರಕೃತಿಯ ಮನುಷ್ಯ. ಅವನು ಊರಿನಲ್ಲಿದ್ದಾಗ ಪ್ರೇಮಿಗಳಿಬ್ಬರೂ ಸೇರುವುದು ಅಸಾಧ್ಯವಾಗಿತ್ತು. ಅಲ್ಲದೆ ಅರಿಗೂಷಿಯೋ ತನ್ನ ಹೆಂಡತಿಯ ವಿಷಯವಾಗಿ ಜನಗಳು ಆಡಿಕೊಳ್ಳುತ್ತಿದ್ದುದನ್ನು ಕೇಳಿ ಬಹಳ ಜಾಗರೂಕತೆಯಿಂದ ಅವಳ ಚಲನವಲನಗಳನ್ನು ಕಣ್ಣಲ್ಲಿ ಕಣ್ಣಿಟ್ಟುಕೊಂಡು ಗಮನಿಸುತ್ತಿದ್ದನು.

ಸಿಸ್ಮಾಂಡಳಿಗೆ ಒಂದು ಉಪಾಯವು ಹೊಳೆಯಿತು. ತಕ್ಷಣ ಕೆಲಸದವಳನ್ನು ಕರೆದು ರೊಬರ್ಟ್‌ಗೆ, "ರಾತ್ರಿ ಮಲಗಿಕೊಂಡ ಮೇಲೆ ಕೊಠಡಿಯಿಂದ ರಸ್ತೆಗೆ ಒಂದು ದಾರ ಬಿಟ್ಟಿರುತ್ತೇನೆ. ಅದು ನೆಲ ಮುಟ್ಟುವಹಾಗೆ ಇರುತ್ತದೆ. ದಾರವನ್ನು ನನ್ನ ಕಾಲಿನ ಹೆಬ್ಬೆಟ್ಟಿಗೆ ಕಟ್ಟಿಕೊಂಡಿರುತ್ತೇನೆ. ಅವನು ದಾರವನ್ನು ಎಳೆಯಲಿ. ಅದು ಹಾಗೇ ಇದ್ದರೆ ಗಂಡನು ಮಲಗಿಲ್ಲವೆಂದು ಅರ್ಥ. ಅವನು ಮಲಗಿದ್ದರೆ ಹೆಬ್ಬೆಟ್ಟಿನ ದಾರವನ್ನು ಬಿಟ್ಟಿರುತ್ತೇನೆ.

ಅವನು ಬರಬಹುದು. ಬಾಗಿಲು ತೆಗದಿರುತ್ತೆ” ಎಂದು ಹೇಳಿ ಕಳುಹಿಸಿದಳು. ರೊಬರ್ಟ್ ಇನಿಯಳ ಕುಶಾಗ್ರಬುದ್ಧಿಯನ್ನು ಕಂಡು ಮೆಚ್ಚಿದನು. ಪತಿಯು ನಿದ್ರಿಸಿ ಗೊರಕೆ ಹೊಡೆಯುತ್ತಿರುವಾಗ ಇಬ್ಬರೂ ಒಬ್ಬರ ತೋಳ್ತೆಕ್ಕೆಯಲ್ಲಿ ಒಬ್ಬರು ಆನಂದವನ್ನು ಅನುಭವಿಸಿದರು.

ಯಾವಾಗಲೂ ಒಂದೇ ರೀತಿ ಇರುತ್ತದೆಯೇ ? ಒಂದು ದಿವಸ ಅರಿಗೂಚಿಯೋ ನಿದ್ರೆಯಲ್ಲೇ ಹೊರಳಿದಾಗ ದಾರವು ಕಾಲಿಗೆ ಸಿಕ್ಕಿಹಾಕಿ ಕೊಂಡು ಎಚ್ಚರಗೊಂಡನು. ಕರಾಮತ್ತೇ ಇರಬೇಕೆಂದು ಎದ್ದು ಕುಳಿತನು. ಹೆಂಡತಿಗೆ ಝೊಂಪು ಹತ್ತಿತ್ತು. ಅವಳಿಗೆ ತಿಳಿಯದ ಹಾಗೆ ತನ್ನ ಕಾಲಿಗೆ ಆ ದಾರವನ್ನು ಕಟ್ಟಿಕೊಂಡು ಮಲಗಿದನು. ಸ್ವಲ್ಪ ಹೊತ್ತಾಗುತ್ತಲೂ ರೊಬೆರ್ಟ್ ಪ್ರೇಯಸಿಯು ಇಳಿ ಬಿಟ್ಟ ದಾರವನ್ನು ಹಿಡಿದು ಜಗ್ಗಿದನು. ಅರಿಗೂಚಿಯೋ ತನ್ನ ಹೆಬ್ಬೆಟ್ಟಿಗೆ ಸರಿಯಾಗಿ ಕಟ್ಟಿಕೊಳ್ಳದೆ ಇದ್ದುದರಿಂದ ದಾರವು ಕೆಳಗೆ ಬಂದಿತು. ಹಿಗ್ಗಿ ಬಾಗಿಲ ಹತ್ತಿರ ಬಂದು ನಿಂತನು.

ಮನೆಯ ಒಳಗಡೆ ನಡೆದು ಬರುವವರು ಶಬ್ದ ಮಾಡಿಕೊಂಡು ಬಂದುದನ್ನು ಕಂಡು ಇದು ತನ್ನ ಪ್ರೇಯಸಿಯಲ್ಲವೆಂದು ಅಲ್ಲಿಂದ ನಾಗಾಲೋಟ ಕಿತ್ತನು. ಅರಿಗೂಚಿಯೋ ಅವನ ಬೆನ್ನಟ್ಟಿದನು. ಇಬ್ಬರೂ ಕತ್ತಿಯನ್ನು ಸೆಳೆದು ಕತ್ತಲಲ್ಲೇ ಸೆಣೆಯ ತೊಡಗಿದರು.

ಇಷ್ಟರಲ್ಲಿ ಸಿಸ್ಮಾಂಡಳಿಗೆ ಎಚ್ಚರವಾಯಿತು. ಪಕ್ಕದಲ್ಲಿ ಗಂಡನಿಲ್ಲದಿದ್ದುದನ್ನು ಕಂಡು ಏನೋ ಅನಾಹುತವಾಗಿರಬೇಕೆಂದು ಊಹಿಸಿ ಕೆಲಸದವಳನ್ನು ಕರೆದು “ನೀನು ನನ್ನ ಹಾಸಿಗೆಯ ಮೇಲೆ ಮಲಗಿಕೋ. ನನ್ನ ಗಂಡ ಈಗ ಬಂದು ಸಿಕ್ಕಾಪಟ್ಟೆ ಹೊಡಿಯುತ್ತಾನೆ. ಬಾಯೇ ಬಿಡಬೇಡ. ನೋಡು ಹೀಗೆ ಮಾಡಿದರೆ ಈ ಚೀಲದಲ್ಲಿರುವ ಹಣವೆಲ್ಲಾ ನಿನಗೆ” ಎಂದು ಹಣದ ಚೀಲವನ್ನು ಅವಳ ಕೈಲಿಟ್ಟು ಬೀರುವೊಂದರಲ್ಲಿ ಅವಿತು ಕೊಂಡಳು. ರೊಬೆರ್ಟ್ ಕತ್ತಲಲ್ಲಿ ತಪ್ಪಿಸಿಕೊಂಡು ಓಡಿಹೋದನು. ಅರಿಗೂಚಿಯೋಗೆ ಅಸಾಧ್ಯ ಕೋಪ ಬಂದಿತು, ನೆಟ್ಟಗೆ ಮನೆಗೆ ಹಿಂತಿರುಗಿ ಕತ್ತಲೆಯಲ್ಲೇ ಕೋಣೆಯನ್ನು ಪ್ರವೇಶಿಸಿ, ಮಲಗಿರುವುದು ಹೆಂಡತಿಯೆಂದು ಬಗೆದು, ಹೊದ್ದ ದುಪ್ಪಟಿಯನ್ನು ಕಿತ್ತೊಗೆದು “ ಕುಲಗೆಟ್ಟ ಹೆಂಗಸೆ! ನಿನಗೆ ಸರಿಯಾಗಿ ಮಾಡುತ್ತೇನೆ ಇರು. ನನ್ನ ಬೇಕೂಫಾಂತ ತಿಳಿದು ಕೊಂಡೆಯಾ?” ಎಂದು

ಚರ್ಮದ ಬೆಲ್ಟಿನಿಂದ ಬೆನ್ನು ನೀಲಿ ಬಣ್ಣಕ್ಕೆ ತಿರುಗುವ ಹಾಗೆ ಕೈಸೋಲುವ ವರಿಗೂ ಬಾರಿಸಿದನು. ಅಷ್ಟಕ್ಕೂ ತೃಪ್ತನಾಗದೆ ಅವಳ ತಲೆಗೂದಲನ್ನೂ ಹಿಡಿದೆಳೆದಾಗ ಕೈಗೇ ಕಿತ್ತುಕೊಂಡು ಬಂದಿತು. ಕೆಲಸದವಳು ನೋವಿನಿಂದ ತಡಯುಲಾರದೆ ಚೀರಿದಳು. ಅಂಗೂಷಿಯೋ "ನೋವಾಗತ್ತಾ! ನೋಡು ಇನ್ನೂ ಏನೇನಾಗುತ್ತೇಂತ. ನಿಮ್ಮಣ್ಣಂದಿರನ್ನೂ ಕರೆದುಕೊಂಡು ಬರುತ್ತೇನೆ. ಅವರೇ ನೋಡಲಿ ತಮ್ಮ ತಂಗಿ ಎಂಥವಳೂಂತ" ಎಂದು ಅವರ ಮನೆಯ ಕಡೆ ನಡೆದನು.

ಅವನು ಅತ್ತಕಡೆ ಹೋದಂತೆ ಸಿಸ್ಕಾಂಡಳು ಅವಿತುಕೊಂಡ ಸ್ಥಳದಿಂದ ಹೊರಗೆ ಬಂದು ಕೆಲಸದವಳಿಗೆ ಸಮಾಧಾನ ಮಾಡಿ, ಘಾಯವಾದ ಸ್ಥಳಗಳಿಗೆ ಮುಲಾಮನ್ನು ಹಚ್ಚಿ, ಶೈತ್ಯೋಪಚಾರವಾಡಿ ಹಾಸಿಗೆಯನ್ನು ಸರಿಮಾಡಿ, ಬಟ್ಟೆಯನ್ನು ಹೊಲಿಯುತ್ತಾ ಕುಳಿತಳು.

ಸ್ವಲ್ಪಹೊತ್ತಾದ ಮೇಲೆ ಅರಿಗೋಷಿಯೋ ಮೈದುನರೊಂದಿಗೆ ಕೊಠಡಿಯನ್ನು ಪ್ರವೇಶಿಸಿ, "ನೀವೇನೋಡಿ ಅವಳಿಗೆ ಹೇಗೆ ಹೊಡದಿದ್ದೇನೇಂತ. ಬಾಸುಂಡೆ ಬರವಹಾಗೆ ಬಿಗದಿದ್ದೇನೆ" ಎಂದು ಜೇಬಿನಲ್ಲಿದ್ದ ಕೂವಲಿನ ಜೊಂಪೆಯನ್ನು ತೆಗೆದು "ಇಗೋ ನೋಡಿ ಇವಳ ಕೂದಲನ್ನು ಕೂಡ ಕಿತ್ತು ಹಾಕಿದ್ದೇನೆ" ಎಂದು ಎತ್ತಿಹಿಡಿದನು.

ಸಿಸ್ಕಾಂಡಳು ಏನೂ ಅರಿಯದವಳಂತೆ ಕತ್ತೆತ್ತಿ ಆಶ್ಚರ್ಯಗೊಂಡವಳಂತೆ "ಇವರೇನು ಹೇಳುತ್ತಿದ್ದಾರೋ ನನಗೊಂದೂ ಅರ್ಥವಾಗುತ್ತಿಲ್ಲ. ನನ್ನ ಮೇಲೆ ಗುರುತು ಬೀಳುವ ಹಾಗೆ ಹೊಡೆದಿದ್ದರಾ? ಕೂದಲು ಕಿತ್ತಿರಾ? ಇದಾರ ಕೂದಲು? ನನ್ನ ಕೂದಲಿನ ಬಣ್ಣವಿದ್ದಂತೆ ಇಲ್ಲವಲ್ಲ! ಯಾರದೋ ಕಾಣೆ!" ಎಂದು ಕಣ್ಣಲ್ಲಿ ಕಂಬನಿ ತಂದುಕೊಂಡು, "ಇವತ್ತು ನನ್ನನ್ನು ಹೊಡಿಯಲೂ ಇಲ್ಲ. ಮಲಗಿಕೊಳ್ಳಲು ಬರಲೂ ಇಲ್ಲ. ಹಾಸಿಗೆ ನೋಡಿ ಹೇಗಿದೆ. ಇವರು ಬರುತ್ತಾರೇಂತ ಕಾದು ಕುಳಿತಿದ್ದೇನೆ. ಎಲ್ಲೋ ಚನ್ನಾಗಿ ಕುಡಿದು ಬಂದಿದ್ದಾರೆ. ನಿಮ್ಮ ಮನೆಗೂ ಬಂದು ಗಲಾಟೆ ಎಬ್ಬಿಸಿದರಾ?" ಎಂದು ಕಣ್ಣನ್ನು ಒರಸಿಕೊಂಡಳು. ಎಲ್ಲರಿಗಿಂತಲೂ ಕಟ್ಟುಮಸ್ತಾಗಿ ಧಾಂಡಿಗನಂತಿದ್ದ ಮೈದುನನು ಅರಿಗೋಷಿಯೋವನ್ನು ದುರುದುರನೆ ಕೋಪದಿಂದ ನೋಡಿ "ಕುಡಕ! ಹುಷಾರ್, ನನ್ನ ತಂಗಿ ವಿಚಾರವಾಗಿ ಏನಾ

ಮಾನವಾಗಿ ಇನ್ನೊಂದಸಲ ಏನಾದರೂ ಮಾತನಾಡಿದರೆ, ಮೈಯಲ್ಲಿ ಒಂದು ಮೂಳೆ ಇರೋಲ್ಲ. ಚಂಡಿನಂತೆ ಮಾಂಸದ ಮುದ್ದೆ ಮಾಡಿಬಿಡುತ್ತೇನೆ. ಇವತ್ತಿಗೆ ಬಿಟ್ಟಿದ್ದೇನೆ” ಎಂದನು.

ಸಿಸ್ಮಾಂಡಳು “ಹೋಗಲಿ ಬಿಡು ಅಣ್ಣ! ಏನೋ ಕುಡಿದ ಹೊತ್ತಿನಲ್ಲಿ ಹುಚ್ಚುಹುಚ್ಚಾಗಿ ಆಡಿದರು. ಎಲ್ಲರೂ ತಪ್ಪು ಮಾಡೋದು ಸಾಧಾರಣ” ಎಂದು ಸಮಾಧಾನವನ್ನು ಹೇಳಿದಳು. ಅವನು “ಇವಳು ಕೇಳಿಕೊಳ್ಳುತ್ತಾಳೆಂತ ಬಿಟ್ಟಿದ್ದೇನೆ” ಎಂದನು. ಅಂಗೂಷಿಯೋ ಅವಾಕ್ಕಾದನು. ಅಂದಿನಿಂದ ಪ್ರೇಮಿಗಳು ತಡೆಯಲ್ಲದೆ ಒಬ್ಬರಿಂದೊಬ್ಬರು ಸಂತೋಷವನ್ನು ಹೊಂದಿದರು.



# ಬಾಳಿನ ತಿರುಳು

ಬರೆದವರು : **ಗೈಡಿ ಮೊಪಸಾಂತ್**

ಪಾಲ್ ಮತ್ತು ಹೆನ್ರಿಯಟ್ಟರವರ ಪ್ರೇಮ ರಸಕಾವ್ಯದಂತೆ ಅಮಲ ವಾಗಿತ್ತು. ಮದುವೆಯಾಗುವುದಕ್ಕೆ ಮುನ್ನ ನಿಶೆಯಲ್ಲಿ ನಕ್ಷತ್ರಗಳು ಮಿರುಗು ತ್ತಿರುವಾಗ ಪ್ರಕೃತಿಯ ಮಡಲಿನಲ್ಲಿ ಒಬ್ಬರನ್ನೊಬ್ಬರು ನಿರ್ಮಲ ಹೃದಯ ದಿಂದ ಪ್ರೀತಿಸುತ್ತಿದ್ದರು.

ಅವರಿಬ್ಬರೂ ಮೊದಲು ಸಂಧಿಸಿದ್ದು ಕಡಲ ದಂಡೆಯಲ್ಲಿ ಹೆನ್ರಿಯಟ್ಟ, ಘಮಘಮಿಸುವ ರೋಜಾ ಹೂವಿನಂತೆ ಬಣ್ಣಬಣ್ಣದ ಛತ್ರಿಯನ್ನು ಹಿಡಿದು ಅದಕ್ಕೆ ಒಪ್ಪುವಂತಹ ಉಡುಪನ್ನು ಧರಿಸಿ ಪಾಲ್‌ನ ಎದುರಾದಾಗ ಇಬ್ಬರ ಕಣ್ಣುಗಳೂ ಒಂದಾದುವು. ಸಮುದ್ರದ ಅಲೆಗಳು ತೆರೆತೆರೆಯಾಗಿ ಮರಳ ದಡವನ್ನು ಮುತ್ತಿಟ್ಟು ಹಿಂದಕ್ಕೆ ಸರಿಯುತ್ತಿ ದ್ದವು. ತಂಗಾಳಿಯು ಮಂದಗತಿಯಲ್ಲಿ ಬೀಸಿ ಮನಸ್ಸಿಗೆ ಹರ್ಷವನ್ನು ತರುತ್ತಿತ್ತು. ಮೋಡಗಳಿಲ್ಲದ ನೀಲಾಕಾಶ. ಮರಳಿನ ಮೇಲೆ ಕೆಂಗೂದಲಿನ ತರುಣಿಯು ಬಿಂಕದಿಂದ ಬಳುಕಿ ನಡೆದುಹೋದಾಗ ಪಾಲ್ ಅವಳಲ್ಲಿ ಅನು ರಕ್ತನಾದುದೇನೂ ಹೆಚ್ಚಲ್ಲ. ಯುವಕನೊಬ್ಬನು ತನ್ನನ್ನು ತುಂಬುಗಣ್ಣಿ ನಿಂದ ನೋಡಿದಾಗ ಹೆನ್ರಿಯಟ್ಟಳು ಪುಳಕಿತಳಾದಳು. ಅಲ್ಲದೆ ಪಾಲ್ ಆಗರ್ಭ ಶ್ರೀಮಂತ. ಬಹು ಮೃದು ಸ್ವಭಾವದವನು.

ಮೂರು ತಿಂಗಳು, ಕೇವಲ ಕೈ ಹಿಡಿದುಕೊಳ್ಳುತ್ತಿದ್ದರು. ತಂಪಾದ ಬೆಳದಿಂಗಳಿನಲ್ಲಿ ನೈಸರ್ಗಿಕ ಸೌಂದರ್ಯದ ಮಡಲಿನಲ್ಲಿ ನಾಲ್ಕು ತುಟಿಗಳು ಒಂದಾಗುತ್ತಿದ್ದವು ಅಷ್ಟೆ.

ರಾತ್ರಿ ಮಲಗಿದಾಗ ಒಬ್ಬರನ್ನೊಬ್ಬರು ಕನಸಿನಲ್ಲಿ ಕಂಡರು. ದೇಹದ ಅಂದಚಂದವನ್ನು ಮನಸ್ಸಿನಲ್ಲೇ ಚಿತ್ರಿಸಿಕೊಂಡು ಒಂದಾಗ ಬಯಸಿದರು.

ಮದುವೆಯಾದ ಮೇಲೆ ಪರಸ್ಪರ ಪ್ರಂಪಚದಲ್ಲಿ ಎಲ್ಲದಕ್ಕಿಂತ ಮಿಗಿಲಾಗಿ ಒಬ್ಬರನ್ನೊಬ್ಬರು ಪ್ರೀತಿಸಿದರು. ಅವರ ಪ್ರಪಂಚವೆಲ್ಲಾ ಕೇವಲ ದಾಂಪತ್ಯಜೀವನದಲ್ಲೇ ಕೇಂದ್ರೀಕೃತವಾಗಿತ್ತು. ಸಮೀಪದಲ್ಲಿದ್ದಾಗಲೂ, ದೂರದಲ್ಲಿದ್ದಾಗಲೂ ಕಾಮವು ಅವರ ತನುಮನಗಳನ್ನು ಸೂಜಿಗಲ್ಲಿನಂತೆ ಸೆಳದಿತ್ತು. ಕಣ್ಣುಗಳು ಸೇರಿದಾಗ ಪ್ರೇಮವು ಇಮ್ಮಡಿಸಿ ರತಿಕೇಳಿಯಲ್ಲಿ ಕಳೆದ ಸುಖ ಘಳಿಗೆಯ ಚಿತ್ರಗಳು ಮನಸ್ಸಿನಲ್ಲಿ ಸುಳಿಯುತ್ತಿದ್ದವು.

ದಿನಗಳುರಳಿದಂತೆ ಪ್ರೇಮವು ಇಳಿಮುಖದ ಕಡೆ ಹೆಜ್ಜೆಯಿಟ್ಟಿತು. ಔಪಚಾರಿಕವಾಗಿ ಒಲುವಿನ ಮಾತುಗಳು ಬಾಯಲ್ಲಿ ಬಂದುವು. ಅವೂ ನಿಂತು, ಅರ್ಥವಿಲ್ಲದ ಪ್ರೆಮಾಲಾಪ, ಒಣ ಮಾತುಗಳು.

ಇಬ್ಬರೂ ಮೊದಲಿನಂತೆ ಪ್ರೇಮವು ಅಚ್ಚಳಿಯದೆ ಬೆಳಗಲು ಪ್ರಯತ್ನಿಸಿದರು. ಪ್ರಯತ್ನವು ವಿಫಲವೇ ಆಯಿತು. ಮೊದಲರಾತ್ರಿ ಇಬ್ಬರ ತನು ಮನ ಹರ್ಷದಲ್ಲಿ ಓಲಾಡಿದಂತೆ, ಅದೇ ಅನುಭವವನ್ನು ಕಾಣಲೆತ್ನಿಸಿದಾಗ ಇಬ್ಬರ ಮನದಲ್ಲೂ ನಿರಾಶೆಯು ಮೂಡಿತು.

ರಾತ್ರಿ ಪೂರ್ಣ ಚಂದ್ರನ ಬೆಳದಿಂಗಳಲ್ಲಿ ಕಡಲ ದಂಡೆಯ ಮರಳ ಮೇಲೆ ಕುಳಿತು ಪ್ರಯತ್ನಪಟ್ಟರು. ಮನವನ್ನು ಹರ್ಷಗೊಳಿಸುವ ಬೆಟ್ಟದ ಶಿಖರವನ್ನು ಹತ್ತಿ ಸುತ್ತ ಹರಡಿದ ಹಚ್ಚನೆಯ ಹುಲ್ಲುಗಾವಲು, ಮರಗಳು, ಝರಿಗಳು ಎಲ್ಲವನ್ನು ನೋಡಿ ಅಲ್ಲಿ ಪ್ರೇಮವು ಮೊಳೆಯುಬಹುದೆಂದು ನೋಡಿದರು. ಕಡೆಗೆ ಜಾತ್ರೆಯ ದಿವಸ ಜನಜಂಗುಳಿಯಲ್ಲಿ ಸೇರಿ ನೃತ್ಯಗಳಲ್ಲಿ ಭಾಗವಹಿಸಿದರು. ಅಳಿದ ಪ್ರೇಮವು ಪುನಃ ಉದ್ದೀಪ್ತವಾಗಲಿಲ್ಲ.

ಕಡೆಗೊಂದು ದಿವಸ ಹೆನ್ರಿಯಟ್ಟಳು, " ಹೊಟೇಲಿಗೆ ಊಟಕ್ಕೆ ಕರೆದು ಕೊಂಡು ಹೋಗುತ್ತೀರಾ? " ಎಂದು ಕೇಳಿದಳು.

" ಅದಕ್ಕೇನು ಆಗಲಿ. "

" ಹೆಸರುವಾಸಿಯಾದ ಹೊಟೇಲಿಗೆ? "

" ಖಂಡಿತವಾಗಿ. "

ಹೆನ್ರಿಯಟ್ಟಳು ನಿಧಾನಿಸಿ, "ಎಂತಹ ಹೊಟೇಲು ಗೊತ್ತಾ? ಪ್ರೇಮಿಗಳು ಒಬ್ಬರನ್ನೊಬ್ಬರು ಸಂಧಿಸುವ ಹೋಟೇಲು" ಎಂದು ನಕ್ಕು, "ಪ್ರತ್ಯೇಕ ಕೊಠಡಿಗಳಿರುವ ಕೆಫೆ?" ಎಂದಳು.

ಪಾಲ್ ಮುಗುಳ್ನಗೆ ನಕ್ಕು "ಗೊತ್ತಾಯಿತು - ದೊಡ್ಡದೊಡ್ಡ ಕೋಠಡಿಗಳಿರುವ ಕೆಫೆ ಅಲ್ಲವೆ?"

"ಆ ಕೆಫೆಯಲ್ಲಿ ಕೆಲಸ ಮಾಡುವವರೆಲ್ಲಾ ನಿಮಗೆ ಗೊತ್ತಿರಬೇಕು.... ಅಂದರೆ....ನೀವು ಮೊದಲು ಯಾವಾಗಲೂ ಹೋಗಿತ್ತಿದ್ದ ಕೆಫೆ. ಊಟ ಬೇಡ ....ಅಲ್ಲಿ.. ಹೇಳಲಾ!........ಹೇಳಿದರೆ ನಿಮಗೆ ಅಸಮಾಧಾನವಾಗುತ್ತದೋ ಏನೋ...."

"ಹೇಳುವುದಕ್ಕೆ ನನಗೆ ಹೇಗೆ ಹೇಗೋ ಆಗತ್ತೇಂದ್ರೆ."

"ನಾಚಿಕೆ ಪಟ್ಟುಕೋಬೇಡ ಹೇಳು."

"ನೀವು ಕರೆದುಕೊಂಡು ಹೋದಾಗ ಅಲ್ಲಿರುವವರು ನನ್ನನ್ನು ನಿಮ್ಮ ಪ್ರೇಮಸಿ, ಉಪಪತ್ನಿಯೆಂತಲೇ ತಿಳಿದುಕೊಳ್ಳಬೇಕು. ಅಲ್ಲಿರುವವರಿಗೆ ನೀವು ಮದುವೆ ಆಗಿರುವುದೇ ಗೊತ್ತಿರಕೂಡದು. ನಾನೂ ಕೂಡ ನೀವು ನನ್ನನ್ನು ಇಟ್ಟುಕೊಂಡಿರುವ ಹಾಗೇಯೇ ನಟಸುತ್ತೇನೆ. ನೀವೂ ಹಾಗೇ ಮಾಡಬೇಕು. ಇಬ್ಬರೂ ಅಲ್ಲಿರುವಷ್ಟು ಹೊತ್ತೂ ಹಾಗೇಂತ ತಿಳಿದುಕೊಂಡು ನಟಸೋಣ.... ಈ ರೀತಿ ನಿಮ್ಮೊಡನೆ ಬರಬೇಕೂಂತ ತುಂಬ ಆಸೆ ಆಗುತ್ತೆ. ಹೇಳಬಾರದಾಗಿತ್ತು, ಹೇಳಿಬಿಟ್ಟೆ. ನೀವೇನೂ ತಿಳಿದುಕೊಳ್ಳಬೇಡಿ....ಅಷ್ಟೇ ನನ್ನ ಇಷ್ಟ."

ಪಾಲ್ ಗಟ್ಟಿಯಾಗಿ ನಕ್ಕು, "ಹುಚ್ಚಿ! ಇಷ್ಟಕ್ಕೆ ಸುತ್ತಿಸುತ್ತಿ ಹೇಳಬೇಕಾ? ಅದಕ್ಕೇನು ಮಹಾ! ಇವತ್ತು ಸಾಯಂಕಾಲವೇ ಇಂತಹ ಕೆಫೆಗೆ ಹೋಗೋಣ."

ಏಳುಗಂಟೆ ಸುಮಾರಿಗೆ ಇಂತಹದೇ ದೊಡ್ಡ ಕೆಫೆಗೆ ಇಬ್ಬರೂ ಹೋಗಿ ಮಹಡಿಯನ್ನು ಹತ್ತಿ ಪ್ರತ್ಯೇಕ ಕೊಠಡಿಯನ್ನು ಪ್ರವೇಶಿಸಿದರು. ಹೆನ್ರಿಯಟ್ಟಳು ಗೋಪ್ಯವಾಗಿ ಪ್ರಿಯತಮನೊಡನೆ ಬರುವಂತೆ ಮುಖವನ್ನು ತೆಳುವಾದ ಅವಕುಂಠನದಿಂದ ಮುಚ್ಚಿಕೊಂಡಿದ್ದಳು. ಇಬ್ಬರೂ ಸೋಫಾದ ಮೇಲೆ ಅಕ್ಕಪಕ್ಕದಲ್ಲಿ ಕುಳಿತರು. ಪಾಲ್ ಮೇಜಿನ ಮೇಲಿದ್ದ

ತಿಂಡಿಯ ಪಟ್ಟಿಯನ್ನು ಕೈಗೆ ತೆಗೆದುಕೊಂಡು, "ಏನು ಆರ್ಡರ್ ಮಾಡೋಣ" ಎಂದನು.

"ನನಗೆ ಗೊತ್ತಿಲ್ಲ. ಇಲ್ಲಿ ಏನು ಚೆನ್ನಾಗಿರುತ್ತೆ."

"ಸರಿ. ನಾನೇ ಆರ್ಡರ್ ಮಾಡುತ್ತೇನೆ...." ಎಂದು ವೈಟರ್ ಕಡೆ ತಿರುಗಿ "ಬಿಸ್ಕ ಸೂಪು, ಬೇಯಿಸಿದ ತರಕಾರಿಯ ಸಲಾಡ್, ಡೆಸರ್ಟ್.... (ಹಣ್ಣುಗಳು) ಷಾಂಪೇನ್....ಸೊಗಸಾಗಿರಬೇಕು...." ಎಂದು ಆರ್ಡರ್ ಮಾಡಿದನು.

"ಸರಿ, ಮಿಸರ್ಸ್ ಪಾಲ್" ಎಂದ ವೈಟರ್.

ವೈಟರಿಗೆ ತನ್ನ ಪತಿಯ ಹೆಸರು ತಿಳಿದಿರುವುದನ್ನು ನೋಡಿ ಅವಳಿಗೆ ಸಂತೋಷವಾಯಿತು. ಕೊಠಡಿಯಲ್ಲಿ ಹತ್ತು ಕ್ಯಾಂಡಲ್‌ಗಳು ಬೆಳಗುತ್ತಿದ್ದವು. ಗೋಡೆಗಳ ಮೇಲಿದ್ದ ನಿಲುಗನ್ನಡಿಗಳಲ್ಲಿ ಸಾವಿರಾರು ದೀಪಗಳುರಿಯುತ್ತಿರುವಂತೆ ಕಂಡುಬಂದವು.

ಹೆನ್ರಿಯಟ್ಟಳು ಒಂದು ಗ್ಲಾಸ್ ಆದ ಮೇಲೆ ಒಂದು ಗ್ಲಾಸ್ ಕುಡಿಯಲಾರಂಭಿಸಿದಳು. ತಲೆ ತಿರುಗಿ ಬಂದಿತು. ಕಣ್ಣುಗಳು ಅಗಲವಾದವು. ಅಲ್ಲಿಯ ಗೋಪ್ಯವಾದ, ರಹಸ್ಯಮಯವಾದ ವಾತಾವರಣವನ್ನು ಕಂಡು ಹರ್ಷಗೊಂಡಳು. ನಾಲಿಗೆಯು ಸಡಿಲವಾಯಿತು. ಪಾಲ್‌ಗೆ ಹಿಂದಿನ ಸವಿನೆನಪುಗಳು ಬಂದು ಹೆನ್ರಿಯಟ್ಟಳ ತೊಡೆಗಳನ್ನು ಜಿಗುಟಿ ಕಪೋಲಗಳು, ಕೈಗಳನ್ನು ಪುನಃ ಪುನಃ ಚುಂಬಿಸಿದನು. ಇವರಿಬ್ಬರೂ ಕುಳಿತು ಕುಡಿಯುತ್ತಿರುವಾಗ ವೈಟರುಗಳು ಸದ್ದು ಮಾಡದೆ ಪ್ರವೇಶಿಸಿ ಷಾಂಪೇನ್ ಗ್ಲಾಸ್ ಖಾಲಿಯಾದಂತೆ ಪುನಃ ಪುನಃ ತರುತ್ತಿದ್ದರು.

ಊಟವನ್ನು ಮಾಡುತ್ತಿರುವಾಗ ಹೆನ್ರಿಯಟ್ಟಳು ಗಂಡನನ್ನು ನೋಡಿ, "ಪಾಲ್! ನಿಮ್ಮ ವಿಷಯವನ್ನೆಲ್ಲಾ ತಿಳಿದುಕೊಳ್ಳಬೇಕೆಂದು ಆಸೆಯಾಗಿದೆ. ನಿಜವನ್ನೇ ಹೇಳುತ್ತೀರಾ" ಎಂದು ಕೇಳಿದಳು.

"ಯಾಕೆ ಹಾಗೆ ಕೇಳುತ್ತೀ."

"ನಾನು ಈ ರೀತಿ ಕೇಳಬಾರದು....ಆದರೂ ಆಸೆಯಾಗಿದೆ."

"ಛೆ! ಅದಕ್ಕೇನು....ಏನು ಬೇಕಾದರೂ ಕೇಳು."

" ನನ್ನನ್ನು ಮದುವೆಯಾಗುವುದಕ್ಕೆ ಮೊದಲು ಯಾರನ್ನಾದರೂ ಪ್ರೀತಿಸುತ್ತಿದ್ದಿರಾ ?".

ಪಾಲನ ಮನಸ್ಸಿನಲ್ಲಿ ಹೇಳುವುದೇ ಬೇಡವೇ ಎಂದು ಆಂದೋಳನ ವೆದ್ದಿತು. ಉತ್ತರವನ್ನು ಹೇಳಲು ಹಿಂಜರಿದನು. ಹೇಳಿದರೆ ಹೇಗೋ ಎಂದು ಮನಸ್ಸಿಗೆ ತೋರಿತು.

" ದಯವಿಟ್ಟು ಹೇಳೀಂದ್ರೆ .... ಅನೇಕ ಹೆಂಗಸರನ್ನು ಪ್ರೀತಿಸುತ್ತಿದ್ದೀರಾ ?".

" ಕೆಲವರು .... "

" ಎಷ್ಟು ಮಂದಿ ? "

" ನನಗೆ ಗೊತ್ತಿಲ್ಲ ... ಅದೆಲ್ಲಾ ಯಾರಿಗೆ ಜ್ಞಾಪಕವಿರುತ್ತದೆ."

" ಅಂದರೆ ನೀವು ಲೆಕ್ಕವಿಡುವುದಕ್ಕೂ ಅಸಾಧ್ಯವಾದಷ್ಟು ? "

" ಛೇ! ಹಾಗೇನಿಲ್ಲ. "

" ಅಂದರೆ ತುಂಬಾ ಹೆಂಗಸರೇ ಅನ್ನಿ ! "

" ಹೌದು ".

" ಎಷ್ಟಿರಬಹುದು .... ಸುಮಾರು ...."

" ಜ್ಞಾಪಕವಿಲ್ಲವೇ ! ಕೆಲವು ಸಲ ಇಪ್ಪತ್ತು, ಮೂವತ್ತು. ಕೆಲವು ಸಲ ನಾಲ್ಕೋ ಐದೋ ಅಷ್ಟೆ."

" ಅಂದರೆ ಹತ್ತಿರ ಹತ್ತಿರ ನೂರು ಹೆಂಗಸರನ್ನು ಪ್ರೀತಿಸಿದ್ದೀರಾನ್ನಿ "

" ಅಷ್ಟಿರಬಹುದು."

" ಛಿ ! ಅಸಹ್ಯ !"

" ಇದರಲ್ಲೇನು ಅಸಹ್ಯ ? "

" ಆ ಹೆಂಗಸರುಗಳೆಲ್ಲಾ ಎಂಜಲೆಲೆ ಇದ್ದ ಹಾಗೆ. ಕಂಡಕಂಡ ಗಂಡಸ ರೊಡನೆ ಬೆತ್ತಲೆಯಾಗಿ ಯಾವ ರೀತಿ ... ನಿಜವಾಗಲೂ ನೆನಸಿಕೊಂಡರೇ ವಾಂತಿ ಬರುವ ಹಾಗೆ ಆಗುತ್ತದೆ. ನೂರಕ್ಕಿಂತ ಹೆಚ್ಚಾಗಿ !.... ಶುದ್ಧ ಹುಚ್ಚು ! "

ಅವಳು ಅಸಹ್ಯವೆಂದು ಹೇಳಿದ್ದನ್ನು ಕೇಳಿ ಅವನು ಆವಾಕ್ಕಾದನು. ಆದರೂ ಅನುಭವಸ್ಥರಾದ ಗಂಡಸರು ಏನೂ ವಿಷಯ ತಿಳಿಯದೆ ಹರಟುವ

ದನ್ನು, ಅವರ ಅಜ್ಞಾನವನ್ನು ಕಂಡು ಪರಿತಾಪಪಡುವಂತೆ "ಅದರಲ್ಲೇನಿದೆ? ನೂರು ಹೆಂಗಸರ ಸಹವಾಸ ಮಾಡುವುದು ಅಸಹ್ಯವಾದರೆ ಒಬ್ಬಳ ಸಹವಾಸ ಮಾಡುವುದೂ ಅಸಹ್ಯವೇ" ಎಂದನು.

"ಹಾಗೇನಲ್ಲ!".

"ಏಕೇಂತ ಗೊತ್ತಾಗಲಿಲ್ಲ!".

"ಒಬ್ಬ ಹೆಂಗಸನ್ನು ಪ್ರೀತಿಸುವುದರಲ್ಲಿ ಆನಂದವಿದೆ. ಅವಳು ಪ್ರೀತಿಸುತ್ತಾಳೆ. ಸರ್ವಸ್ವವೆಂದು ತಿಳಿದುಕೊಂಡಿರುತ್ತಾಳೆ. ನೂರು ಹೆಂಗಸರಲ್ಲಿ ಕಾಣುವುದು ಬರೀ ಕಾಮ. ಆ ಹೊಲಸು ಹೆಂಗಸರೊಡನೆ ಹೇಗೆ ಸಹವಾಸ ಮಾಡುತ್ತಾರೋ ಯೋಚನೆ ಮಾಡುವುದಕ್ಕೂ ಆಗೊಲ್ಲ."

"ಹೊಲಸು! ಅವರು ನಿಷ್ಕಲ್ಮಷರು."

"ಅವರ ವೃತ್ತಿಯೇ ಹಾಗಲ್ಲವೇ"

"ಅವರ ವೃತ್ತಿಯು ನಿಷ್ಕಲಂಕ ವೃತ್ತಿ."

"ಅರ್ಥವಿಲ್ಲದೆ ಮಾತನಾಡುತ್ತೀರ! ರಾತ್ರಿ ಸಿಕ್ಕಿದ ಗಂಡಸಿನ ಹತ್ತಿರ ಮಲಗಿಕೊಳ್ಳುತ್ತಾರೆ. ನೆನಸಿಕೊಂಡರೆ ಅಸಹ್ಯವಾಗಿ ಮೈ ಜುಂ ಅನ್ನುತ್ತದೆ. ಕುಲಹೀನರು."

"ಹಾಗೆ ನೋಡಲಿಕ್ಕೆ ಹೋದರೆ ನೀನು ಕುಡಿಯುತ್ತಿರುವ ಲೋಟದಲ್ಲಿ ಬೆಳಗಿನಿಂದ ಎಷ್ಟು ಜನರು ಕುಡಿದಿದ್ದಾರೆ. ಆ ಲೋಟವನ್ನು ಸರಿಯಾಗಿ ಕೂಡ ತೊಳೆದಿರುವುದಿಲ್ಲ."

"ಅದೇನೇ ಇರಲಿ, ನಿಮ್ಮನ್ನು ನೋಡಿದರೆ ಅಸಹ್ಯವಾಗುತ್ತದೆ."

"ಹಾಗಿದ್ದ ಪಕ್ಷದಲ್ಲಿ .... ಬೇರೆ ಹೆಂಗಸರ ಹತ್ತಿರ ಸಹವಾಸ ಮಾಡಿದ್ದೀರಾಂತ ಯಾಕೆ ಕೇಳಿದೆ?"

ಸ್ವಲ್ಪ ಹೊತ್ತು ಮೌನವಾಗಿದ್ದು ಹೆನ್ರಿಯಟ್ಟ "ನೀವು ನೋಡಿರುನವರೆಲ್ಲಾ ಹುಡುಗೀರಾ ನೂರು ಮಂದೀನೂ?" ಎಂದು ಕೇಳಿದಳು.

"ಛೆ! ಅದು ಹೇಗೆ ಸಾಧ್ಯ. ಕೆಲವರು ನಾಟಕದಲ್ಲಿ ಪಾತ್ರವಹಿಸುತ್ತಿದ್ದವರು. ಕೆಲವರು ವೃತ್ತಿಯಲ್ಲಿದ್ದವರು. ಮತ್ತೆ ಕೆಲವರು ಸೂಳೆಯರು. ...."

" ಎಷ್ಟು ಮಂದಿ ಸೂಳೆಯರು ? "

" ಆರು........ "

" ಆರೇನಾ ? "

" ಹೂಂ. "

" ನೋಡಲಿಕ್ಕೆ ಲಕ್ಷಣವಾಗಿದ್ದರಾ ? "

" ಖಂಡಿತವಾಗಿ. "

" ಇಲ್ಲ. "

" ನಿಮಗೆ ಯಾರು ಪ್ರಿಯವಾಗಿದ್ದರು ? ಹುಡಿಗಿಯರಾ ? ಸೂಳೆಯರಾ ? "

" ಸೂಳೆಯರು. "

" ಥೂ ! ನೀವು ನಿಜವಾಗಿ ಭ್ರಷ್ಟರು .. ಸೂಳೆಯರು .... ಏಕೆ ಪ್ರಿಯರು ? "

" ಯಾಕೆಂದರೆ ಕಸಬು ತಿಳಿಯದೆ ಇರುವವರಿಗಿಂತ ಕಸಬು ತಿಳಿದವರು ಎಷ್ಟೋ ಉತ್ತಮ ! "

" ಶುದ್ಧ ಹೊಲಸು ಕಾಣ್ರೀ. ನಿಮ್ಮನ್ನ ನೋಡಿದರೇ ಅಸಹ್ಯವಾಗುತ್ತದೆ ! ಬೇರೆ ಬೇರೆ ಹೆಂಗಸರ ಹತ್ತಿರ ಹೋದರೆ ನಿಮಗೆ ಹಿತವಾಗಿರುತ್ತಾ ? "

" ಹಾಗೇಂತಾನೆ ಇಟ್ಕೊಕೊ....ಒಂದು ವಿಷಯದಲ್ಲಿ ನಿಜವೇ. "

" ಬಹಳ ? "

" ಬಹಳ ! "

" ಇವರಲ್ಲಿ ಸಂತೋಷವಾಗುವಂತಹದೇನಿದೆ ? ಒಬ್ಬರಂತೆ ಇನ್ನೊಬ್ಬರು ಇರುವುದಿಲ್ಲವೆಂದಾ ! "

" ಹಾಗೇನಿಲ್ಲ. "

" ಆಶ್ಚರ್ಯ ! ಹಾಗಾದರೆ ಯಾವ ವಿಚಾರದಲ್ಲಿ ವ್ಯತ್ಯಾಸವಿರುತ್ತದೆ? "

" ಎಲ್ಲ ವಿಚಾರದಲ್ಲೂ. "

" ದೇಹದಾಕರವಾ ? "

" ಹೌದು. "

" ಮತ್ತಿನ್ನೇನು ? "

"ಹಾಗೆ ನೋಡಲಿಕ್ಕೆ ಹೋದರೆ ಆಲಂಗಿಸುವುದರಲ್ಲಿ ಮಾಡುವ ಪ್ರತಿಯೊಂದರಲ್ಲೂ."

" ಈ ರೀತಿ ಬದಲಾಯಿಸುತ್ತಿರುವುದು ಆಪ್ಯಾಯಮಾನವಾ ? "

" ಹಾದು. "

ಪಾಲನು ಸ್ವಲ್ಪಹೊತ್ತು ಯೋಚಿಸುತ್ತಾ ಕುಳಿತನು. ಹೆನ್ರಿಯಟ್ಟಾಳ ಧ್ವನಿ ಎಲ್ಲಿಂದಲೋ ಬಂದಂತಿತ್ತು.

" ಪುರುಷರಲ್ಲೂ ಇದೇರೀತಿ ವ್ಯತ್ಯಾಸವನ್ನು ಕಾಣಬಹುದಾ ? "

" ನನಗೆ ಗೊತ್ತಿಲ್ಲ. "

" ನಿಮಗೆ ಗೊತ್ತಿಲ್ಲವಾ ? "

" ಇಲ್ಲ. "

" ವ್ಯತ್ಯಾಸವಿದ್ದೇ ಇರಬೇಕು. "

" ಇರಬಹುದು. "

ಕೈಯಲ್ಲಿ ಷಾಂಪೇನ್ ಗ್ಲಾಸ್ ಹಿಡಿದು ಹೆನ್ರಿಯಟ್ಟಾಳು ಯೋಚಿಸುತ್ತಾ ಕುಳಿತಳು. ಅನೇಕ ಗ್ಲಾಸ್‌ಗಳನ್ನು ಕುಡಿದಿದ್ದುದರಿಂದ ಅವಳ ಕಣ್ಣುಗಳು ಹೊಳೆಯುತ್ತಿದ್ದವು.

ವೈಟರ್ ಹಣ್ಣುಗಳನ್ನು ತಂದಿಟ್ಟನು. ಹೆನ್ರಿಯಟ್ಟಳು ಮತ್ತೊಂದು ಗ್ಲಾಸ್ ಷಾಂಪೇನ್ ತರಲು ಹೇಳಿದಳು. ತಂದಿಟ್ಟ ಗ್ಲಾಸನ್ನು ಎರಡು ಬೆರಳುಗಳಲ್ಲಿ ಹಿಡಿದೆತ್ತಿ ಹಳದಿ ಬಣ್ಣದ ಷಾಂಪೇನನ್ನು ದೃಷ್ಟಿಸಿ ನೋಡಿ ತನ್ನಲ್ಲೇ " ವ್ಯತ್ಯಾಸ ... ಎಲ್ಲ ವಿಧದಲ್ಲೂ .... ನೂರಕ್ಕೆ ಹೆಚ್ಚಾಗಿ .... ಈಗ ಯಾಕೇಂತ ಗೊತ್ತಾಯಿತು " ಎಂದಳು.

ಅವಳ ಮುಖದಲ್ಲಿ ನಗೆ ಮೂಡಿದುದನ್ನು ನೋಡಿ ಪಾಲನ ಮುಖವು ಬೆಳಗಿಕೊಂಡಿತು



# ಸು ಸ್ವಾ ಗ ತ

ಬರೆದವರು : **ಅಪೂಲಿಯಸ್**

ಬಹಳ ಹಿಂದಿನ ಮಾತು ಗ್ರೀಸಿನಲ್ಲಿ ಒಬ್ಬನಿದ್ದ. ಅವನಿಗೆ ಮಹಾ ಕ್ಷುದ್ರಬುದ್ಧಿ. ಅವನ ಹೆಂಡತಿಯು ರತಿಯಂತೆ ರೂಪವತಿ. ಅವನಿಗೆ ಎಲ್ಲರ ಮೇಲೂ ಎಲ್ಲಿಲ್ಲದ ಅನುಮಾನ. ಸ್ನೇಹಿತರಾರಾದರೂ ತನ್ನ ಹೆಂಡತಿಯ ಮೇಲೆ ಕಣ್ಣು ಹಾಕಿಯಾರೂಂತ ಹೊರಗೆ ಹೋಗುವಾಗಲೆಲ್ಲಾ ಮನೆಗೆ ಬೀಗ ಹಾಕಿಕೊಂಡು ಹೋಗುತ್ತಿದ್ದನು. ಒಂದು ದಿವಸ ಬಹಳ ದೂರದಲ್ಲಿದ್ದ ಒಂದು ಊರಿಗೆ ಕೆಲಸದಮೇಲೆ ಹೋಗಬೇಕಾಗಿ ಬಂದಿತು. ಪ್ರಯಾಣ ಬೆಳಸುವುದಕ್ಕೆ ಮೊದಲು ಮನೆಯಲ್ಲಿ ಅಡಿಯಾಳಾಗಿದ್ದ ಮೈರ್ ಮೆಕ್ಸ್‌ನನ್ನು ಉದ್ದೇಶಿಸಿ 'ಲೇ! ಗುಲಾಮ್! ಹುಷಾರ್.' ಮನೆ ಕಡೆ ಸರಿಯಾಗಿ ನೋಡಿಕೋ. ಯಾರಾದರೂ ನನ್ನ ಹೆಂಡತಿಯ ಮೇಲೆ ಕಣ್ಣುಹಾಕಿಯಾರು. ರಸ್ತೆಯಲ್ಲಿ ಹೋಗುತ್ತಿರುವಾಗ ಅವಳುಟ್ಟ ಬಟ್ಟೆಗೆ ಬೆಟ್ಟನ ತುದಿಕೂಡ ಸೋಕಕೂಡದು ತಿಳಿಯಿತಾ? ಹಾಗೇನಾದರೂ ತಗಲಿದ್ದು ಗೊತ್ತಾದರೆ ನಿನ್ನನ್ನು ಜೀವಸಹಿತ ಬಿಡೊಲ್ಲ. ಕಾರಾಗೃಹದಲ್ಲಿ ಕೈಕಾಲಿಗೆ ಕೋಳ ತೊಡಿಸಿ ಕೆಡವುತ್ತೇನೆ. ನಾನಾರೂಂತ ಗೊತ್ತೂತಾನೆ?" ಎಂದು ಎಚ್ಚರಿಸಿ, ನಿರಾಲೋಚನೆಯಿಂದ ಪ್ರಯಾಣ ಬೆಳಸಿದನು.

ಮೈರ್‌ಮೆಕ್ಸಿಗೆ ಯಜಮಾನನ್ನು ಕಂಡರೆ ಸಿಂಹಸ್ವಪ್ನ. ಬೆಳಗಿನಿಂದ ಸಂಜೆಯವರಿವಿಗೂ ಮನೆಗೆ ಬೀಗಹಾಕಿ ಅವಳು ನೂಲುವಂತೆ ಕೂಡಿಸಿದನು. ಹೊರಗಡೆ ಹೋದಾಗ ಅವಳ ಲಂಗಕ್ಕೆ ಅಂಟಿಕೊಂಡಂತೆಯೇ ಹಿಂಬಾಲಿಸಿದನು.

ರಸ್ತೆಯಲ್ಲಿ ಹೋಗುವವರ ಕಣ್ಣನ್ನು ಮುಚ್ಚಲು ಸಾಧ್ಯವೇ? ಅವಳ ರೂಪ-ಲಾವಣ್ಯಗಳನ್ನು ನೋಡಿ ಮನದಲ್ಲೇ ಅವಳ ಸಂಗವನ್ನು ಬಯಸಿ

ದರು. ಫಿಲಿಪ್ಪಸ್‌ಗೆ ಇವಳ ಮೇಲೆ ಕಣ್ಣುಬಿತ್ತು. ಗುಲಾಮನು ಬಹು ನಿಷ್ಠನಾಗಿ ಕಾಯುತ್ತಿದ್ದುದರಿಂದ ಅವಳಿಗೆ ತನ್ನ ಪ್ರೀತಿಯನ್ನು ತಿಳಿಸಲೂ ಸಾಧ್ಯವಿರಲಿಲ್ಲ ಹೇಗಾದರೂ ಮಾಡಿ ಅವಳ ಪ್ರೀತಿಯನ್ನು ಸಂಪಾದಿಸಲೇ ಬೇಕೆಂದು ಹಟತೊಟ್ಟನು. ಮಾರನೆಯ ದಿವಸ ಗುಲಾಮನು ಮನೆಗೆ ಬೀಗಹಾಕಿ ಮುಂದೆ ಕಾಯುತ್ತಾ ಕುಳಿತಿದ್ದನ್ನು ನೋಡಿ ಹತ್ತಿರ ಬಂದು "ನಿನ್ನ ಯಜಮಾನತಿಯನ್ನು ಕಂಡು ನನಗೆ ಇಷ್ಟವಾಗಿದೆ. ಅವಳಿಗೆ ಈ ಸಮಾಚಾರವನ್ನು ತಿಳಿಸು. ನೀನು ಹೇದರ ಬೇಡ, ನೋಡು ! " ಎಂದು ದುಡ್ಡಿನ ಚೀಲವನ್ನು ಅವನ ಮುಂದೆ ಹಿಡಿದು ಅಲ್ಲಾಡಿಸಿ "ಅವಳಿಗೆ ತಿಳಿಸಿದರೆ ಇದು ನಿನಗೇನೆ !" ಎಂದು ಆಸೆ ತೋರಿಸಿದನು.

ಭೀತಿಯಿಂದ ಗುಲಾಮನ ಮೈಬೆವರಿತು. ಅಲ್ಲಿ ನಿಲ್ಲದೆ ಓಡಿಹೋದನು. ರಾತ್ರಿ ಮನೆಗೆ ಬಂದು ಮಲಗಿದಾಗ ಅವನಿಗೆ ನಿದ್ದೆಯೇ ಬರಲಿಲ್ಲ. ಒಂದು ಕಡೆ ದುಡ್ಡಿನ ಮೇಲೆ ಆಸೆ ಮತ್ತೊಂದು ಕಡೆ ಯಜಮಾನನು ಹೇಳಿದ ಮಾತು. ಮನಸ್ಸು ಯೋಚನೆಯಿಂದ ಹೊಯ್ದಾಡಿತು. ಕಡೆಗೂ ದುಡ್ಡೇ ಗೆದ್ದಿತು. ಬೆಳಗಾಗುತ್ತಿದ್ದಂತೆ ಯುವಕನ ಸಂದೇಶವನ್ನು ತಿಳಿಸಿದನು. ಅವಳಿಗೂ ಕುತೂಹಲ. ನಾಚುತ್ತಾ 'ಸರಿ' ಎಂದಳು. ಅಲ್ಲಿಂದ ಗುಲಾಮನು ನಾಗಾಲೋಟಕಿತ್ತು ಯುವಕನ ಹತ್ತಿರ ಹೋಗಿ ಯಜಮಾನತಿಯು ಒಪ್ಪಿರುವುದಾಗಿಯೂ ತಿಳಿಸಿದನು. ಯುವಕನು ತಕ್ಷಣವೇ ಅವನ ಕೈಯಲ್ಲಿ ಹಣವನ್ನಿಟ್ಟನು.

ರಾತ್ರಿಯಾದಂತೆ ಯುವಕನ ಮುಖಕಾಣದಂತೆ ಬಟ್ಟೆಯನ್ನು ಹೊದಿಸಿ, ವೈರ್ಮಿಕ್ಸ್ ಮನೆಗೆ ಕರೆತಂದು ಮಲಗುವ ಕೋಣೆಯೊಳಗೆ ಬಿಟ್ಟನು. ಮಧ್ಯರಾತ್ರಿಯಾದಂತೆ ಮನೆಯ ಬಾಗಿಲನ್ನು ಯಾರೋ ಜೋರಾಗಿ ಬಡಿದಂತೆ ಶಬ್ದ. ಬಂದವನು ಮತ್ತಾರೂ ಅಲ್ಲ ಗಂಡ ಯಾರೂ ಬಾಗಿಲು ತೆರೆಯದಿದ್ದುದನ್ನು ಕಂಡು ಕೋಪವೇ ಬಂದಿತು. ಗುಲಾಮನಿಗೆ ಹೆದರಿಕೆಯಿಂದ ಮೈಬೆವರಿತು. ಬೀಗದಕೈ ಹುಡುಕುತ್ತಿರುವುದಾಗಿ ಹೇಳಿದನು. ಯುವಕನು ಗಾಬರಿಯಿಂದ ಎದ್ದು ನಡುಮನೆಗೆ ಬಂದನು. ಬರುವಾಗ ಗಾಬರಿಯಲ್ಲಿ ಚಪ್ಪಲಿಯನ್ನು ಹಾಸಿಗೆಯ ಹತ್ತಿರವೇ ಬಿಟ್ಟಿದ್ದನು. ಗುಲಾಮನು ದೀಪವನ್ನು ಹತ್ತಿಸದೆ, ಕತ್ತಲಲ್ಲೇ ಬಾಗಿಲನ್ನು ತೆರೆದನು.

ಯುವಕನು ಇದೇ ಸಮಯವೆಂದು ಯಾರಿಗೂ ಕಾಣಿಸದೆ ಹೊರಗೆ ಪರಾರಿಯಾದ. ಯಜಮಾನನು ನೆಟ್ಟಗೆ ಮಡದಿಯ ಕೊಠಡಿಗೆ ಹೋಗಿ ಮಲಗಿದನು.

ಮೂರನೆಯ ದಿವಸ ಬೆಳಗ್ಗೆ ಯಜಮಾನನ ಕಣ್ಣಿಗೆ ಚಪ್ಪಲಿಗಳು ಕಾಣಿಸಿದವು. ಕಾರಣವೇನೆಂದು ಊಹಿಸಿ, ಚಪ್ಪಲಿಗಳೆರಡನ್ನೂ ಜೇಬಿನಲ್ಲಿ ತೂರಿಸಿಕೊಂಡು, ಗುಲಾಮನ ಕೈಗಳಿಗೆ ಕೋಳವನ್ನು ತೊಡಿಸಿ ಕಾರಾಗೃಹದಲ್ಲಿ ಹಾಕಲು ದರದರನೆ ಬೀದಿಯಲ್ಲಿ ಎಳೆದುಕೊಂಡು ಹೋದನು.

ಅಕಸ್ಮಾತ್ತಾಗಿ ಅದೇ ರಸ್ತೆಯಲ್ಲಿ ಫಿಲಿಸ್ಟ್ರಸ್ ಹೋಗುತ್ತಿದ್ದನು. ಅಳುತ್ತಾ ಹೋಗುತ್ತಿದ್ದ ಗುಲಾಮನನ್ನು ನೋಡಿ ಹಿಂದಿನ ದಿವಸ ಚಪ್ಪಲಿಯನ್ನು ಮರೆತು ಬಂದಿದ್ದು ಜ್ಞಾಪಕಕ್ಕೆ ಬಂದಿತು. ಗುಲಾಮನನ್ನು ನೋಡಿ ಗಟ್ಟಿಯಾಗಿ "ಲೇ ಕಳ್ಳ! ಸಿಕ್ಕಿಬಿದ್ದೆ! ನಿನ್ನ ಯಜಮಾನ ನಿನಗೆ ಸರಿಯಾದ ಶಿಕ್ಷೆ ಕೊಡುತ್ತಿದ್ದಾನೆ! ನಿನಗೆ ಹಾಗೇ ಆಗಬೇಕು! ನಿನ್ನೆ ಮಧ್ಯಾಹ್ನ ದೇವಸ್ಥಾನದ ಹತ್ತಿರ ಚಪ್ಪಲಿ ಕದ್ದುಕೊಂಡು ಹೋದವನು ನೀನೇ ತಾನೆ" ಎಂದು ಅರಚಿದನು.

ಸಭ್ಯನಂತೆ ಕಾಣುತ್ತಿದ್ದ ಫಿಲಿಸ್ಟ್ರಸ್ಸನು ಹೇಳುವುದು ನಿಜವಿರಬೇಕೆಂದು ಯಜಮಾನನು ನಂಬಿ ಗುಲಾಮನಿಗೆ ನಾಲ್ಕೇಟುಗಳನ್ನು ಬಿಗಿದು, "ನಿನ್ನ ಅದೃಷ್ಟ ಚೆನ್ನಾಗಿತ್ತು! ಕತ್ತಲೆ ಕೋಣೆಯಲ್ಲಿ ಕಾಲ ಕಳಿಯಬೇಕಾಗಿತ್ತು. ಇದನ್ನು ಅವರಿಗೆ ಕೊಟ್ಟು ಕ್ಷಮಾಪಣೆ ಬೇಡಿಕೊ" ಎಂದು ಜೇಬಿನಲ್ಲಿದ್ದ ಚಪ್ಪಲಿಗಳನ್ನು ಅವನ ಕೈಯಲ್ಲಿ ಕೊಟ್ಟು ಗುಲಾಮನ ಪರವಾಗಿ ಕ್ಷಮೆಯನ್ನು ಬೇಡಿದನು. ಯುವಕನು ಬಹು ರೀತಿಯಿಂದ ತಲೆಯನ್ನಲ್ಲಾಡಿಸಿ "ನನಗೆ ಅರ್ಥವಾಗುತ್ತದೆ. ಈಗಿನ ಕಾಲದಲ್ಲಿ ಗುಲಾಮರನ್ನು ನಂಬಬಾರದು" ಎಂದನು.

ಫಿಲಿಸ್ಟ್ರಸ್ ಹೇಳಿದುದು ಅಕ್ಷರಶಃ ನಿಜವೆಂದು ಹೇಳಿ, ಯಜಮಾನನು ಲಂಪಟನಂತೆ ಕಣ್ಣು ಹಾರಿಸಿ "ಊರು ಬಿಟ್ಟು ಬಹಳ ದಿನಗಳಾಗಿದ್ದವು. ನನ್ನ ಹೆಂಡತಿಯು ರತ್ನದಂತಹವಳು. ಮಹಾಪತಿವ್ರತೆ. ಎಷ್ಟು ದಿನ ಊರಿನಲ್ಲಿರಲಿಲ್ಲವೋ ಅಷ್ಟು ದಿವಸದ್ದೂ ಸಾಲ ತೀರಿಸಬೇಕು. ಹೋಗುತ್ತೇನೆ" ಎಂದನು. ಫಿಲಿಸ್ಟ್ರಸನು ಕೂಡ ಅವನಂತೆ ಅರ್ಥಗರ್ಭಿತವಾಗಿ ಕಣ್ಣು ಹೊಡೆದು, "ಒಬ್ಬಂಟಿಗಳಾಗಿ ಬಿಟ್ಟುಹೋದ ಹೆಂಡತಿಯು ಯಾವ ರೀತಿಗೂ ಚನ್ನ!" ಎಂದನು.

# ಕಡೆಗೂ ಸಿಕ್ಕೇಬಿದ್ದ!

ಬರೆದವರು : **ಗೈಡಿ ಮೂಪಸಾಂತ್**

ಹಸುಳೆಯಂತಿದ್ದ ಮಾರ್ಕಿಸಾ ಡಿ ರೆನೆಡಾನ್ ಪುಟನೆಗೆಯುವ ಚಂಡಿನಂತೆ ಕಿಟಕಿಯಲ್ಲೇ ತೂರಿ ಬಂದಳು. ಒಳಗೆ ಬಂದವಳೇ ಕಣ್ಣೀರು ಸುರಿಸುತ್ತಾ, ನಗುತ್ತಾ ಗೆಳತಿಯ ಕೈ ಹಿಡಿದು "ನೋಡೇ ಕಡೆಗೂ ಅವನು ಸಿಕ್ಕೇಹಾಕಿಕೊಂಡ! ಏನೋ ಒಂದು ಸಲ ನಾನು ಅವನಿಗೆ ತಿಳಿಯದಹಾಗೆ ಬೇರೆಯವನನ್ನು ಪ್ರೀತಿಸಿದೇಂತ ಗೋಳುಹೊಯ್ಕೋತಿದ್ದ. ಅವನು ಎಷ್ಟು ದ್ವೇಷಿಸುತ್ತಿದ್ದಾ ಗೊತ್ತಾ? ಹೇಗಾದರೂ ಮಾಡಿ ಅವನಿಗೆ ಸರಿಯಾಗಿ ಮಾಡಬೇಕೂಂತ ಇದ್ದೆ. ಇವತ್ತು ಸಿಕ್ಕಿಹಾಕಿಕೊಂಡಾ ಗೊತ್ತಾ? ಅಯ್ಯೋ ಹೇಳುವುದಕ್ಕೆ ಹೋದರೆ ನಗು ಬರುತ್ತಮ್ಮ! ಸಿಕ್ಕಿಹಾಕ್ಕೊಳ್ಳೋದಕ್ಕೆ ಏನು ಮಾಡಿದೆ ಗೊತ್ತಾ?"

ಬ್ಯಾರನೆಸ್ ಡಿ ಗ್ರ್ಯಾಂಗರಿ ಓದುತ್ತಿದ್ದ ಪುಸ್ತಕವನ್ನು ಸೋಫಾದ ಮೇಲೆ ಬಿಸಟು ಗೆಳತಿಯನ್ನು ನೋಡಿ ಕುತೂಹಲದಿಂದ, "ಏನು ಸಮಾಚಾರ?" ಎಂದಳು.

"ಲೇ! ಬಹಳ ತಮಾಷೆಯಾಗಿತ್ತು ಕಾಣೆ! ಸಧ್ಯ ನಾನು ಉಳಿದುಕೊಂಡೆ! ಉಳಿದುಕೊಂಡೆ!"

"ಹೇಗೆ? ಏನಾಯಿತು?"

"ಹೌದೇ! ಬಚಾವ್ ಆದೆ!"

"ಹೇಗೆ ಬಚಾವ್ ಆದೆ ಹೇಳಬಾರದಾ?"

"ನನ್ನ ಗಂಡನಿಂದ ಬಚಾವ್ ಆದೆ! ದಾಂಪತ್ಯ ವಿಚ್ಛೇದನವಾಯಿತು. ಇನ್ನುಮೇಲೆ ನಾನು ಸ್ವತಂತ್ರಳು. ನನ್ನ ಹಿಡಿಯುವವರು ಯಾರೂ ಇಲ್ಲ."

"ಹೇಗೆ ಸ್ವತಂತ್ರಳು....ಏನಾಯಿತು ಹೇಳಬಾರದಾ?"

" ಹೇಗೆಂದರೆ? ಚನ್ನಾಗಿ ಕೇಳ್ರಿ....ಇಬ್ಬರೂ ಬೇರೆ ಬೇರೆ ಆದೆವು. "

" ಬೇರೆ ಬೇರೆ ಆದಿರಿ? "

" ಹೂಂ! ನೀನು ಶುದ್ಧ ಪೆದ್ದು ಕಣೆ! ಮೂರು ಗಂಟೆ ಕಾಲದಲ್ಲಿ ವಿಚ್ಛೇದನವಾಗಿಲು ಸಾಧ್ಯವಾ? "

" ಅವನು ನನಗೆ ಮೋಸಮಾಡಿದಾಂತ, ದ್ರೋಹಮಾಡಿದಾಂತ ರುಜಾತಾಯಿತು. "

" ಹೇಗಾಯಿತು....ಮೊದಲಿನಿಂದ ಹೇಳು. ಹಿಂದೂ ಮುಂದೂ ಇಲ್ಲದೆ ಹೀಗೆ ಹೇಳಿದರೆ ಹೇಗೆ? "

" ಸಾಧ್ಯವಾಗುವ ಹಾಗೆ ಏನು ಮಾಡಿದೇನ್ನೋದನ್ನು ಕೇಳಿದರೆ ನೀನು ನನ್ನ ವಿಷಯದಲ್ಲಿ ಹೆಮ್ಮೆ ಪಡುತ್ತೀ. ಮನೆಯಲ್ಲಿ ನನ್ನ ಅವಸ್ಥೆ ಹೇಗಿತ್ತೂಂತ ನಿನಗೇ ಗೊತ್ತು. ರೌರವಾದಿ ನರಕ. ನಾನು ಹುಷಾರಾಗೇ ಇದ್ದೆ. ಅವನು ಆವೇಶ ಬಂದ ರಾಕ್ಷಸನ ಹಾಗೆ ಆಡುತ್ತಿದ್ದ. ಬೆಳಗ್ಗಿಂದ ಸಂಜೆಯುವರೆಗೂ ಸಿಡಿಮಿಡಿಗುಟ್ಟುತ್ತಿದ್ದ. ಅವನು ಆಡುತ್ತಿದ್ದ ಆಟವನ್ನು ನೋಡಿ ಹೆಚ್ಚು ದಿವಸ ಅವನೊಡನೆ ಬಾಳುವುದು ಸಾಧ್ಯವಿಲ್ಲಾಂತ ತೀರ್ಮಾನಕ್ಕೆ ಬಂದೆ. ಗಂಡಸು ವಿಚ್ಛೇದನ ಪಡೆಯುವಷ್ಟು ಜಾಗ್ರತೆಯಾಗಿ ಹೆಂಗಸಿಗೆ ಸಾಧ್ಯವಿಲ್ಲ. ದಾಂಪತ್ಯ ವಿಚ್ಛೇದನ ಮಾಡುವಂತೆ ನಡೆದುಕೊಂಡೆ. ಅವನಿಗೆ ಕೋಪ ಬರುವ ಹಾಗೆ, ಎರಡು ಬಾರಿಸುವ ಹಾಗೆ ಕೂಡ ನಡೆದುಕೊಂಡೆ. ಅವನು ಒಂದು ಸಲವಾದರೂ ಕೈ ಎತ್ತಿರಬೇಕಲ್ಲ! ಅವನದು ಮಹಾ ಕ್ಷುದ್ರಬುದ್ಧಿ. ನನಗೆ ಇಷ್ಟಬಂದ ಕಡೆ ಹೋಗ್ತೀನೆಂದರೆ ಬಿಡುತ್ತಿರಲಿಲ್ಲ. ತಾನು ಇಷ್ಟಪಟ್ಟ ಸ್ಥಳಕ್ಕೇ ನಾನು ಹೋಗಬೇಕು. ಹೇಳುವುದಕ್ಕೆ ಆಗುವುದಿಲ್ಲ ಅಷ್ಟು ಕಿರುಕುಳ ಕೊಡುತ್ತಿದ್ದ

" ಅವನು ಯಾರನ್ನಾದರೂ ಇಟ್ಟುಕೊಂಡಿದ್ದಾನೆಯೆ? ಎಂದು ವಿಚಾರಿಸಿದೆ. ಇಟ್ಟುಕೊಂಡಿರುವುದಾಗಿ ತಿಳಿದುಬಂದಿತು. ಯಾರ ಕಣ್ಣಿಗೂ ಬೀಳದಂತೆ ಅಲ್ಲಿಗೆ ಹೋಗುತ್ತಿದ್ದ. ಅವರಿಬ್ಬರೂ ಒಟ್ಟಿಗೆ ಇದ್ದಾಗ ಸಿಕ್ಕಿ ಹಾಕಿಕೊಳ್ಳುವ ಹಾಗೇ ಇರಲಿಲ್ಲ ಆಮೇಲೆ ಏನು ಮಾಡಿದೆ ಗೊತ್ತಾ?"

" ಏನು ಮಾಡಿದ್ಯೋ ಹೇಳುವುದಕ್ಕೆ ಸಾಧ್ಯವಿಲ್ಲವಮ್ಮಾ "

"ನಿನಗೆ ಯೋಚಿಸುವುದಕ್ಕೂ ಸಾಧ್ಯವಿಲ್ಲಾನ್ನು........ನನ್ನ ತಮ್ಮ ಜಾಕ್ವಿಸ್ ಇದ್ದಾನಲ್ಲ ಅವನಿಗೆ, ಅವಳ ಫೋಟೋ ತಂದು ಕೊಡುವ ಹಾಗೆ ಹೇಳಿದೆ."

"ನಿನ್ನ ಗಂಡ ಇಟ್ಟುಕೊಂಡಿರುವ ಹೆಂಗಸಿನ ಫೋಟೋನಾ ?"

"ಹೌದೆ! ಯಾಕೆ ಹಾಗೆ ಕೇಳ್ತೀ. ಅವನಿಗೆ ಸಾಯಂಕಾಲದ ಖರ್ಚಿಗೆ ದುಡ್ಡು ಕೊಟ್ಟು ಫೋಟೋ ತಂದು ಕೊಡೋದಕ್ಕೆ ಹೇಳಿದೆ. ಅವನ ಬುದ್ಧಿ ನಿನಗೆ ಗೊತ್ತೇ ಇದೆ. ಹೇಗಿದ್ದರೂ ಖರ್ಚಿಗೆ ದುಡ್ಡು ಕಸಿದುಕೊಂಡು ಹೋಗುತ್ತಿದ್ದ."

"ಅದು ಸರಿಯೆ. ನಿನ್ನ ತಮ್ಮ ಅವಳ ಮನೆಗೆ ಹೋಗದೆ, ಹಾಗೇ ಬೇಕಾದರೂ ಇನ್ನಾವುದಾದರೂ ರೀತಿಯಲ್ಲಿ ಅವಳ ಫೋಟೋವನ್ನು ತಂದು ಕೊಡುತ್ತಿದ್ದ.''

"ನಿನಗೆ ವಿಷಯ ಏನೂಂತ ಗೊತ್ತಿಲ್ಲ. ಜಾಕ್ವಿಸ್ ಅಲ್ಲಿಗೆ ಹೋಗಿದ್ದಕ್ಕೆ ವ್ಯಥೆಯೇನೂ ಪಡಲಿಲ್ಲ. ನೋಡಲಿಕ್ಕೆ ಲಕ್ಷಣವಾಗಿದಾಳೆ ಕಣೆ! ಅವಳ ಮೈಕಟ್ಟು, ಮೊಲೆಗಳು, ಬಣ್ಣ, ಎತ್ತರ ಹೀಗೆ ಸಾವಿರ ಸಣ್ಣ ಸಣ್ಣ ವಿಷಯಗಳನ್ನು ಸೂಕ್ಷ್ಮವಾಗಿ ವಿಚಾರಿಸಿಕೊಂಡೆ. ಇವುಗಳೆಲ್ಲಾ ಬರೀ ಫೋಟೋ ನೋಡಿ ಹೇಳಲು ಸಾಧ್ಯವಾ ?....'ಈ ವಿಷಯವೆಲ್ಲಾ ನಿನಗೇಕೆ ಬೇಕಾಗಿತ್ತು ?'

"ಸುಮ್ಮಸುಮ್ಮನೆ ಮಧ್ಯೆ ಬಾಯಿ ಹಾಕದಿದ್ದರೆ ಎಲ್ಲಾ ತಾನಾಗಿ ನಿನಗೇ ಗೊತ್ತಾಗುತ್ತದೆ. ನನಗೆ ಬೇಕಾದ ವಿಚಾರಗಳನ್ನೆಲ್ಲಾ ಸಂಗ್ರಹಿಸಿ ಈ ವ್ಯವಹಾರಕ್ಕೆ ಏಜಂಟ್‌ಗಳಿರುತಾರಲ್ಲಾ! ಅಂಥವರಲ್ಲಿ ಒಬ್ಬನ ಹತ್ತಿರ ಹೋಗಿ, ಫೋಟೋವನ್ನು ತೋರಿಸಿ ಇದೇ ರೀತಿ ಇರುವ ಹೆಂಗಸೊಬ್ಬಳನ್ನು ಹುಡಕಿಕೊಡಿ. ಹತ್ತು ಸಾವಿರ ಫ್ರಾಂಕ್ ಖರ್ಚಾದರೂ ಚಿಂತೆಯಿಲ್ಲ. ಮೂರು ತಿಂಗಳಲ್ಲಿ ಹುಡಕಿಕೊಡಬೇಕು" ಎಂದೆ. ಅವನಿಗೆ ನಾನು ಯಾಕೆ ಹೀಗೆ ಕೇಳುತ್ತೇನೆಂದು ಆಶ್ಚರ್ಯ. ಅವನೂ 'ಅಂದರೆ ನಿಮಗೆ ಬಹಳ ಶೀಲವಂತ. ಒಳ್ಳೆಯ ಹೆಣ್ಣೇ ಬೇಕಾ ?' ಎಂದು ಕೇಳಿದ. " ಅವನು ಕೇಳಿದ ಪ್ರಶ್ನೆಗೆ ನಾಚಿಕೆಯಾಗಿ ಮುಖವು ಕೆಂಪಗಾಯಿತು. 'ಪ್ರಾಮಾಣಿಕಳಾಗಿರ

ಬೇಕು ಅಷ್ಟೆ!' ಎಂದೆ. ಅವನು 'ಅವನ ನಹತೆ ?' ಎಂದು ಕೇಳಿದ. ಅದಕ್ಕೆ ನಾನು 'ಆವಶ್ಯಕವಿಲ್ಲ' ಎಂದು ತಲೆಯನ್ನಾಲ್ಲಾಡಿಸಿದೆ ಅಷ್ಟೆ. ಅವನಿಗೆ ನನ್ನ ಮೇಲೆ ಏನಾದರೂ ಅನುಮಾನ ಬರಬಹುದೂಂತ 'ಮತ್ತೆ ಯಾರೂ ಅಲ್ಲ ನನ್ನ ಗಂಡನಿಗೆ ಪ್ರೆಸೆಂಟ್ ಮಾಡಬೇಕೂಂತ ಇದ್ದೇನೆ.' ಎಂದೆ.

"ಅವನು ಗಟ್ಟಿಯಾಗಿ ನಕ್ಕ. ನನಗೆ ಕೋಪ ಬಂದುದನ್ನು ನೋಡಿ ಸುಮ್ಮನಾಗಿ 'ಒಂದು ವಾರದಲ್ಲಿ ಹುಡುಕಿಕೊಡುತ್ತೇನೆ. ಆಮೇಲೆ ಹಣವನ್ನು ಕೊಡಿ. ಈಗಲೇ ಬೇಡ. ಇದು ನಿಮ್ಮ ಯಜಮಾನರು ಇಟ್ಕೊಕೊಂಡಿರುವವಳ ಫೋಟೋ ತಾನೆ ?"

"ಹೌದು."

"ಲಕ್ಷಣವಾಗಿದ್ದಾಳೆ. ಅಷ್ಟೇನು ದಪ್ಪನಾಗಿಲ್ಲ. ಅವಳು ಯಾವ ಸೆಂಟನ್ನು (ಸುಗಂಧ ದ್ರವ್ಯ) ಉಪಯೋಗಿಸುತ್ತಾಳೆ ?"

"ಸೆಂಟು ?"

ನನಗೆ ಅರ್ಥವಾಗಲಿಲ್ಲ.

ಅವನು ನಕ್ಕು 'ಹೆಂಗಸರು ಉಪಯೋಗಿಸುವ ಸೆಂಟಿನ ವಾಸನೆ ಬಂದಾಗಲೆಲ್ಲಾ ಅವರೊಡನೆ ಸುಖವಾಗಿ ಕಾಲಕಳೆದಿದ್ದೆಲ್ಲಾ ನೆನಪಿಗೆ ಬರುತ್ತದೆ. ಅವಳ ಜೊತೆ ಊಟಮಾಡಿದಾಗ ಏನು ಏನು ತಿಂಡಿ ತಿನ್ನುತ್ತಿದ್ದ, ಅದೇ ಆಹಾರಗಳನ್ನು ತಯಾರುಮಾಡಬೇಕು. ಹಾಗೆ ಮಾಡಿದರೆ ಸಿಕ್ಕಿಹಾಕಿಕೊಳ್ಳುತ್ತಾರೆ' ಎಂದ. ಅವನು ಅಸಾಧ್ಯ ಬುದ್ಧಿವಂತನೇ! ನಾನು ಹಿಗ್ಗಿ ಮನೆಗೆ ಹಿಂತಿರುಗಿದೆ.

"ಮೂರು ದಿವಸಗಳಲ್ಲಿ ಎತ್ತರವಾದ ಹೆಂಗಸೊಬ್ಬಳು ಮನೆಗೆ ಬಂದಳು ಬಹಳ ಚೆನ್ನಾಗಿದ್ದಳು. ಅವಳ ಕಣ್ಣುಗಳು, ನಡೆಯುವ ಭಂಗಿ ಎಲ್ಲವನ್ನೂ ನೋಡಿದ ತಕ್ಷಣವೇ ಅವಳ ಕಸುಬೇನೆಂದು ಗೊತ್ತಾಯಿತು. ಆದರೆ ನನ್ನ ಹತ್ತಿರ ಬಹಳ ವಿನಯ, ಗೌರವಗಳಿಂದ ನಡೆದುಕೊಂಡಳು. ಅವಳು ಯಾರೋ ಗೊತ್ತಿಲ್ಲದಿದ್ದರಿಂದ 'ಮೆಡಮಾಸ್ಸೈಲ್....' ಎಂದು ಗೌರವ ಸೂಚಿತವಾಗಿ ಉದ್ದೇಶಿಸಿ ಮಾತನಾಡಿದೆ. ಅವಳು 'ತಕ್ಷಣ ಅಮ್ಮಾವ್ರೇ! ದಯವಿಟ್ಟು ನನ್ನನ್ನು 'ರೋಜಾ' ಎಂದು ಕರೆಯಿರಿ' ಎಂದಳು.

''ನಾನು, "ಇಲ್ಲಿಗೇಕೆ ಬಂದಿದ್ದೀ ಗೊತ್ತಾ?" ಎಂದು ಕೇಳಿದೆ.

''ಊಹಿಸಬಲ್ಲೆ, ಅಮ್ಮಾವ್ರೆ"

''ಒಳ್ಳೆಯದು, ಇದರಿಂದ ನಿನಗೆ ತೊಂದರೆ ಏನೂ ಇಲ್ಲವಷ್ಟೆ ?"

''ಏನಿಲ್ಲ. ಇಷ್ಟರವರೆವಿಗೂ ಎಂಟು ದಾಂಪತ್ಯ ವಿಚ್ಛೇದನಗಳಿಗೆ ಸಹಾಯಮಾಡಿದ್ದೇನೆ."

''ಹಾಗಾ ! ಒಳ್ಳೆಯದು ! ತುಂಬಾ ದಿವಸಗಳು ಆಗುತ್ತದಾ ?"

''ನಿಮ್ಮ ಯಜಮಾನರ ಮನೋಭಾವವನ್ನು ಅನುಸರಿಸುತ್ತದೆ. ಅವರನ್ನು ನೋಡಿದ ತಕ್ಷಣ ಎಷ್ಟು ದಿನಗಳಲ್ಲಿ ಸಾಧ್ಯವೆಂದು ಹೇಳಬಲ್ಲೆ.''

''ಇನ್ನೇನು ಬರುವ ಹೊತ್ತಾಯಿತು. ಅವರು ನೋಡುವುದಕ್ಕೆ ಅಷ್ಟೇನೂ ಚನ್ನಾಗಿಲ್ಲ."

''ಚಿಂತೆಯಿಲ್ಲ. ಬೇಕಾದಷ್ಟು ಇನ್ನೂ ಕುರೂಪಿಗಳೊಡನೆ ಸಮಭಾಗಿಯಾಗಿದ್ದೇನೆ. ಅವರು ಯಾವ ಸೆಂಟನ್ನು ಉಪಯೋಗಿಸುತ್ತಾರೆ ಪತ್ತೆ ಹಚ್ಚಿದಿರಾ?"

''ಗೊತ್ತು, ರೋಜಾ ! ವರ್‌ಬೇನಾ"

''ಒಳ್ಳೆಯದೇ ಆಯಿತು ಬಿಡಿ ! ನನಗೂ ಅದೇ ಇಷ್ಟ. ಯಾವಾಗಲೂ ನಾನೂ ಅದನ್ನೇ ಉಪಯೋಗಿಸುವುದು. ಅಲ್ಲದೆ ಒಳಲಂಗ, ನೈಟ್‌ಡ್ರೆಸ್ ಎಲ್ಲ ರೇಷ್ಮೆಯದಾ ?"

''ಲೇಸ್ ಹಾಕಿದ ಕ್ಯಾಂಬ್ರಿಕ್"

''ಅವಳು ಶ್ರೀಮಂತಳೇ ಆಗಿರಬೇಕು. ಈಗ ಸಿಲ್ಕು ಸರ್ವೇ ಸಾಧಾರಣವಾಗಿದೆ."

''ನೀನು ಹೇಳುವುದು ದಿಟವೇ !"

''ನಿಮ್ಮಲ್ಲಿ ಕೆಲಸಮಾಡಲು ಬಂದಿದ್ದೇನೆ. ಕೆಲಸಗಾರರು ಯಾವ ರೀತಿ ಇರುತ್ತಾರೋ ಹಾಗೆಯೇ ನಾನೂ ಇರುತ್ತೇನೆ.'' ಎಂದು ತನ್ನ ವೃತ್ತಿಯ ಮೊದಲಿಂದ ಅದು ಎಂಬಂತೆ ಅಚ್ಚುಕಟ್ಟಾಗಿ ಕೆಲಸಮಾಡಲು ಪ್ರಾರಂಭಿಸಿದಳು.

"ಅವಳು ಬಂದ ಒಂದು ಗಂಟೆಯನಂತರ ನನ್ನ ಯಜಮಾನ ಮನೆಗೆ ಬಂದ. ಅವಳು ಅವನ ಕಡೆ ಒಂದು ಸಲ ಕೂಡ ಕತ್ತೆತ್ತಿ ನೋಡಲಿಲ್ಲ. ಸೆಂಟಿನ ವಾಸನೆ ಘಂ ಎಂದು ಸೂಸುತ್ತಿತ್ತು. ಅವಳು ಕೊಠಡಿಯಿಂದ ಹೊರಗೆ ಹೋದ ಐದು ನಿಮಿಷಗಳಲ್ಲಿ ನನ್ನ ಯಜಮಾನ "ಆ ಹುಡುಗಿ ಯಾರು?" ಎಂದು ಕೇಳಿದ.

"ಅವಳಾ ! ಹೊಸದಾಗಿ ಕೆಲಸಕ್ಕೆ ಬಂದಿದ್ದಾಳೆ"

"ಎಲ್ಲಿ ಸಿಕ್ಕಿದಳು ಅವಳು ?"

"ಬ್ಯಾರನೆಸ್ ಗ್ಯಾಂಗರಿ, ಒಳ್ಳೆಯವಳೆಂದು ಪತ್ರ ಬರೆದು ಕಳುಹಿಸಿದ್ದಾಳೆ."

"ನೋಡಲಿಕ್ಕೆ ಲಕ್ಷಣವಾಗಿದ್ದಾಳೆ"

"ಹೌದಾ ?"

"ಈ ಕೆಲಸಕ್ಕೆ ಇಷ್ಟು ಚನ್ನಾಗಿರುವವಳು....!"

ಅವನ ಮಾತನ್ನು ಕೇಳಿ ನಗುವೂ ಬಂದಿತು, ಸಂತೋಷವೂ ಆಯಿತು.

ಸ್ವಲ್ಪ ಹೊತ್ತಾದಮೇಲೆ 'ನಾನೊಬ್ಬಳೇ ಇರುವಾಗ ರೋಜಾ' ಎರಡು ಮೂರು ದಿನಗಳಲ್ಲೇ ಬುಟ್ಟೀಲಿ ಹಾಕ್ಕೋಬಹುದು' ಎಂದಳು.

"ಆಗಲೇ ಪ್ರಾರಂಭಿಸಿದೆಯಾ ?"

"ಇಲ್ಲ ನನ್ನ ಹೆಸರನ್ನು ಕೇಳಿದರು ಅಷ್ಟೆ. ಯಾಕೆ ಗೊತ್ತಾ? ನನ್ನ ಧ್ವನಿಯೂ ಅವರು ಇಟ್ಟುಕೊಂಡಿರುವವಳ ಧ್ವನಿ ಇದ್ದ ಹಾಗಿದೆಯೋನೊ ?" ಎಂದು ಪರೀಕ್ಷಿಸಲು.

"ಆದಷ್ಟು ಬೇಗ ನಿನ್ನ ಕೆಲಸವನ್ನು ಪ್ರಾರಂಭಿಸು."

"ನೀವೇನೂ ಯೋಚನೆಮಾಡಬೇಡಿ ಅಮ್ಮಾ ! ನನ್ನ ಮೇಲೆ ಆಸೆ ಬರುವ ಹಾಗೆ ಇನ್ನೂ ಸ್ವಲ್ಪ ಕಾಲ ಅವನನ್ನು ಆದಷ್ಟು ದೂರದಲ್ಲೇ ಇಟ್ಟಿರುತ್ತೇನೆ."

ಅವಳು ಬಂದ ಒಂದು ವಾರದಲ್ಲಿ ನಮ್ಮ ಯಜಮಾನ ಮನೆಯನ್ನು ಬಿಟ್ಟೇ ಕದಲಲಿಲ್ಲ. ಮನೆಯಲ್ಲೇ ,ಬಾಲಸುಟ್ಟ ಬೆಕ್ಕಿನ ಹಾಗೆ ಅಲ್ಲಿಂದಿಲ್ಲಿಗೆ

ತಳಾಯಿಸುತ್ತಿದ್ದ. ಅಷ್ಟೇ ಅಲ್ಲ. ನಾನು ಇಷ್ಟ ಬಂದ ಕಡೆ ಹೊರಗೆ ಹೋಗುವುದಕ್ಕೆ ಅನುಮತಿಯನ್ನೂ ಕೊಟ್ಟ. ನಾನೂ ಕೂಡ ಬೇಕೆಂತಲೇ ಬೆಳಗ್ಗೆ ಮನೆ ಬಿಟ್ಟು ಸಾಯಂಕಾಲವೇ ಮನೆಯನ್ನು ಸೇರುತ್ತಿದ್ದೆ.

ಒಂಭತ್ತು ದಿನಗಳಾದಮೇಲೆ ರೋಜಾ "ಇವತ್ತು ಬೆಳಗ್ಗೆ ಜರಗಿತು" ಎಂದಳು.

"ನನಗೆ ಆಶ್ಚರ್ಯವಾಯಿತು. 'ಎಲ್ಲಾ ಸರಿಯಾಗಿ ನೆನಸಿಕೊಂಡಂತೆಯೇ ಆಯಿತಾ?'' ಎಂದು ಕೇಳಿದೆ.

"ಸಂದೇಹವೇ ಇಲ್ಲ. ಮೂರು ದಿನಗಳಿಂದ ಒಂದೇ ಸಮನಾಗಿ ಒತ್ತಾಯಪಡಿಸುತ್ತಿದ್ದಾರೆ. ನಾವಿಬ್ಬರೂ ಯಾವತ್ತು ಸಿಕ್ಕಿಹಾಕಿಕೊಳ್ಳಬೇಕು ಹೇಳಿ?"

"ಗುರುವಾರ ಆಗಬಹುದಾ?"

"ಅಷ್ಟರವರಿಗೂ ಅವರಿಗೆ ಇನ್ನೂ ಹೆಚ್ಚು ಆಸೆ ಬರುವ ಹಾಗೆ ಮಾಡುತ್ತೇನೆ. ಅವರಿಗೆ ಅನುಮಾನ ಬರದ ಹಾಗೆ ಹುಷಾರಾಗಿದ್ದೇನೆ."

"ಏನೂ ಹೆಚ್ಚು ಕಡಮೆ ಆಗುವುದಿಲ್ಲ ತಾನೆ?"

"ಎಷ್ಟು ಹೊತ್ತಿಗೆ, ಎಲ್ಲಿ ಸಿಕ್ಕಿ ಹಾಕಿಕೊಳ್ಳಬೇಕು ಹೇಳಿ"

"ಸಾಯಂಕಾಲ ಐದು ಗಂಟೆಗೆ"

"ಹಾಗೇ ಆಗಲಿ—ಎಲ್ಲಿ?"

"ನನ್ನ ಮಲಗುವ ಕೊಠಡಿಯಲ್ಲಿ"

"ನಿಮ್ಮ ಮಲಗುವ ಕೊಠಡಿಯಲ್ಲಾ?"

"ಹೌದು"

ಆಮೇಲೆ ಏನು ಮಾಡಿದೆ ಗೊತ್ತಾ? ಅಪ್ಪ-ಅಮ್ಮ, ಅಧ್ಯಕ್ಷರಾದ ನನ್ನ ಚಿಕ್ಕಪ್ಪ ಓರ್‌ವೆರ್ಲಿ, ನನ್ನ ಗಂಡನ ಮಿತ್ರರಾದ ನ್ಯಾಯಾಧೀಶ, ರಿಪ್ಲೆಟ್‌ರವರಿಗೆಲ್ಲಾ ನಾನು ಏನು ತೋರಿಸುತ್ತೇನೆಂದು ಹೇಳಲಿಲ್ಲ, ಶಬ್ದ ಮಾಡದೆ ನನ್ನ ಮಲಗುವ ಕೊಠಡಿಯ ಹತ್ತಿರ ಕರೆದುಕೊಂಡು ಹೋದೆ. ಐದು ಗಂಟೆ ಹೊಡೆಯುವವರೆಗೂ ನನ್ನ ಗುಂಡಿಗೆ ಹೇಗೆ ಹೊಡೆದು ಕೊಳ್ಳು

ತ್ತಿತ್ತು ಗೊತ್ತಾ? ಮನೆ ಆಳನ್ನು ಇನ್ನೂ ಒಬ್ಬ ಸಾಕ್ಷಿ ಇರಲೀಂತ ಮಹಡಿ ಮೇಲೆ ಇರುವ ಹಾಗೆ ಹೇಳಿದ್ದೆ. ಮನೆ ಗಡಿಯಾರ ಐದು ಗಂಟೆ ಹೊಡೆಯು ತ್ತಿದ್ದ ಹಾಗೆ ರೂಮಿನ ಬಾಗಿಲನ್ನು ದಬ್ಬಿ ಹಾರಾಗಿ ತೆಗೆದೆ. ಅವನು ಅಲ್ಲೇ ಕಾರ್ಯದಲ್ಲಿ ನಿರತನಾಗಿದ್ದ. ನೋಡುವುದಕ್ಕೆ ಹೇಗಿತ್ತು ಗೊತ್ತಾ? ಕತ್ತೆ! ತಿರುಗಿ ನೋಡಿದಾ ಕಣೆ! ತಮಾಷೆಯಾಗಿತ್ತು ಅವನ ಮುಖ! ನಾನು ಹೊಟ್ಟೆ ಹುಣ್ಣು ಆಗುವ ಹಾಗೆ ನಕ್ಕೆ. ಪಪ್ಪ ಮೊದಲೇ ಮುಂಗೋಪಿ. ಹೋಗಿದ್ದ ಬೆನ್ನಿನ ಮೇಲೆ ನಾಲ್ಕು ಝಾಡಿಸಿ ಬಂದರು. ಜವಾನನು ಓಡಿ ಬಂದು ನಮ್ಮೆಲ್ಲರ ಮುಂದೆ ಅವನಿಗೆ ಷರಾಯಿ ಹಾಕಿ, ಗುಂಡಿಗಳನ್ನೂ ಹಾಕಿದ ನಮ್ಮ ಎದುರಿಗೇ. ಹೋಗಮ್ಮ! ನೆನಸಿಕೊಂಡರೆ ಈಗಲೂ ನಗು ಬರುತ್ತೆ! ರೋಜಾ ಚೆನ್ನಾಗಿ ನಾಟಕ ಮಾಡಿದಳು. ಬಹಳ ಅವ ಮಾನವಾಗಿ, ನೊಂದವಳಂತೆ ಹೋ ಅಂತ ಅತ್ತಳು ಅವಳು ಬಹಳ ಒಳ್ಳೆ ಹುಡುಗಿ ಕಣೆ. ನಿನಗೆ ಯಾವಾಗಲಾದರೂ ಬೇಕಾದರೆ ಹೇಳು, ಕಳುಹಿಸಿ ಕೊಡುತ್ತೇನೆ.

"ಅಲ್ಲಿಂದ ನೆಟ್ಟಗೆ ನಿನ್ನ ಹತ್ತಿರವೇ ಹೇಳೋದಕ್ಕೆ ಬರುತ್ತಿದ್ದೇನೆ. ಸಧ್ಯಕ್ಕೆ ವಿಚ್ಛೇದನ ಆದ ಹಾಗೇಂತ ಇಟ್ಟುಕೊ." ಎಂದು ಕುಣಿದಾಡಿದಳು.

ಬಾರನೆಸ್ ಅಸಮಾಧಾನವನ್ನು ಸೂಚಿಸುತ್ತಾ ಗಂಭೀರವಾಗಿ "ಅಲ್ಲ ಕಣೆ! ಎಲ್ಲಾ ಸರಿಯೇ. ನಿನ್ನ ಮೇಲೆ ನನಗೆ ಎಷ್ಟು ಕೋಪ ಬಂದಿದೆ ಗೊತ್ತಾ? ನನ್ನನ್ನ ಯಾಕೆ ಕರೆಯಲಿಲ್ಲ?"



# ಬೇಸ್ತುಬಿದ್ದ ಬ್ರಾಹ್ಮಣ

## ತಂತ್ರಾಖ್ಯಾಯಿಕಾದಿಂದ

ಭರತ ಖಂಡದ ಒಂದು ಹಳ್ಳಿಯಲ್ಲಿ ಬ್ರಾಹ್ಮಣನೊಬ್ಬನಿದ್ದನು. ದೇವಾಲಯದ ದೀಪಗಳ ಜ್ಯೋತಿಯನ್ನು ಬೆಳಗಿಸುವುದು ಅವನ ವೃತ್ತಿ. ಶ್ರೋತ್ರಿಯ ಬ್ರಾಹ್ಮಣನಾಗಿದ್ದುದರಿಂದ ಇಂಥಹ ತುಚ್ಛವಾದ ಕೆಲಸವನ್ನು ಮಾಡುವುದರಿಂದ ಜನಗಳ ದೃಷ್ಟಿಯಲ್ಲಿ ತಾನು ಕಡಿಮೆಯಾಗಬಹುದೆಂದು ಯೋಚಿಸಿ, ಪಕ್ಕದ ಹಳ್ಳಿಗೆ ಹೋಗಿ, ದೇವಸ್ಥಾನದ ದೀಪಗಳನ್ನು ಹತ್ತಿಸಲು ಅಡಿಯಾಳೊಬ್ಬಳನ್ನು ಕೊಡಬೇಕೆಂದು ಊರಿನ ಶ್ರೀಮಂತನನ್ನು ಕೇಳಿದನು. ಶ್ರೀಮಂತನು ದೇವರ ಕಾರ್ಯವು ಪುಣ್ಯಕೆಲಸವೆಂದು, ತನ್ನ ಹತ್ತಿರ ಕೆಲಸದಲ್ಲಿದ್ದ ಒಬ್ಬಳನ್ನು ಕಳುಹಿಸಿ 'ಇವಳು ಬಹಳ ನಿಧಾನಸ್ಥೆ. ಆದರೆ ಮೈ ಮುರಿಯುವಂತೆ ಕೆಲಸ ಮಾಡುತ್ತಾಳೆ. ದೇವರ ದೀಪಗಳನ್ನು ಹಚ್ಚುವುದಕ್ಕೂ ಬರುತ್ತದೆ' ಎಂದನು.

ಅಡಿಯಾಳಿಗೆ ಇನ್ನೂ ಹರೆಯದ ವಯಸ್ಸು. ಬ್ರಾಹ್ಮಣನ ಮನಸ್ಸಿನಲ್ಲಿ ಮಲಿನ ವಿಚಾರಗಳು ತಲೆದೋರಿದವು. 'ಇವಳು ದೇವಸ್ಥಾನದಲ್ಲಿ ಜ್ಯೋತಿ ಬೆಳಗುವುದನ್ನು ಮಾತ್ರವಲ್ಲ, ಇದರ ಜೊತೆಗೆ ಪ್ರೇಮ ಜ್ಯೋತಿಯನ್ನು ಬೆಳಗುವುದನ್ನು ಹೇಳಿಕೊಟ್ಟಲ್ಲಿ ಎರಡೊಂದು ಕೆಲಸ, ಸ್ವಾಮಿಕಾರ್ಯ, ಸ್ವಕಾರ್ಯ ಆಗುತ್ತದೆ' ಎಂದುಕೊಂಡನು.

ಈ ರೀತಿ ಯೋಚಿಸಿಕೊಂಡು ಹೋಗುತ್ತಿರುವಾಗ ರಸ್ತೆಯಲ್ಲಿ ಒಬ್ಬ ಯುವಕನು ಇಬ್ಬರನ್ನೂ ನೋಡಿದನು. ಅವನು ಕಡು ಬಡವ ಕೂಲಿ ಮಾಡಿ ಜೀವಿಸುತ್ತಿದ್ದನು. ಹೆಂಡತಿಯನ್ನು ಹಣ ಕೊಟ್ಟು ಪಡೆಯುವಷ್ಟು ಶಕ್ತನಾಗಿರಲಿಲ್ಲ. ಹಣವಿಲ್ಲದೆ ಅಸಾಧ್ಯವಾದುದನ್ನು ಯುಕ್ತಿಯಿಂದಲೇ ಆಗಾಗ ಸಾಧಿಸಿ ಸಂತಸಗೊಳ್ಳುತ್ತಿದ್ದನು. ಹುಡುಗಿಯೊಬ್ಬಳು ಬ್ರಾಹ್ಮಣನನ್ನು ಹಿಂಬಾಲಿಸಿ ಹೋಗುತ್ತಿರುವುದನ್ನು ನೋಡಿ ಹಾರಿಸಿಕೊಂಡು

ಹೋದರೇನು ? ಛೆ ! ಹಾಗೆ ಮಾಡುವುದು ಮಹಾ ಪಾಪ ! ಬ್ರಾಹ್ಮಣನ ಸ್ವತ್ತನ್ನು ಅಪಹರಿಸಿದರೆ ಕಠಿಣ ಶಿಕ್ಷೆಯನ್ನು ವಿಧಿಸುತ್ತಾರೆ. ಯುಕ್ತಿಯಿಂದ ಅವನೇ ಅವಳನ್ನು ನನಗೆ ಒಪ್ಪಿಸುವ ಹಾಗೆ ಮಾಡಬೇಕು ಎಂದುಕೊಂಡ. ಬ್ರಾಹ್ಮಣನು ಸ್ವಲ್ಪ ದೂರ ಹೋದಂತೆ ಅವನ ಎದುರಿಗೆ ರೈತನ ವೇಷವನ್ನು ಹಾಕಿಕೊಂಡು ಹೋಗಿ,

"ಬ್ರಾಹ್ಮಣೋತ್ತಮನೇ ! ಈ ಕ್ಷುದ್ರ ಜಾತಿಯ ಹೆಂಗಸನ್ನು ಪವಿತ್ರ ದೇವಾಲಯದ ದೀಪವನ್ನು ಬೆಳಗಲು ಸಹಾಯಕ್ಕಾಗಿ ಕರೆದುಕೊಂಡು ಹೋಗುತ್ತಿದ್ದೀರಿ. ನಿಮಗೆ ತಿಳಿಯದೆಂದು ಕಾಣಿಸುತ್ತದೆ. ಇವಳು ವೇಶ್ಯೆ. ನನಗೆ ಚನ್ನಾಗಿ ಗೊತ್ತು. ಅಲ್ಲದೆ ಒಂದು ನಾಣ್ನುಡಿಯಿದೆ.

"ಬೆಲೆವೆಣ್ಣು, ಚೋರರು,
ಗಲ್ಲಿಗೇರಿಸುವವ, ಹಾಗೂ ಅಡಿಯಾಳು
ಹೊಲೆಯ, ಭ್ರಷ್ಟಗೊಳಿಸುವರು
ಅಧೋಗತಿಗಿಳಿಸುವರು ನಿನ್ನ" ಎಂದನು.

ಬ್ರಾಹ್ಮಣನಿಗೆ ಕೋಪ ಬಂದಿತು. ಹುಡುಗಿಯು ಕನ್ಯೆಯೆಂದೇ ಸಾಧಿಸಿದನು. ಯುವಕನು ವಿನಯದಿಂದ ನಮಸ್ಕರಿಸಿ ಅಲ್ಲಿಂದ ಹೊರಟು ಹೋದನು. ಸ್ವಲ್ಪ ದೂರ ಹೋದಂತೆ ಕುಂಬಾರನ ವೇಷವನ್ನು ಹಾಕಿಕೊಂಡು ಬ್ರಾಹ್ಮಣನ ಎದುರಾಗಿ ಬಂದು,

"ಪೂಜ್ಯ ಬ್ರಾಹ್ಮಣನೇ ! ಈ ವೇಶ್ಯೆಯನ್ನು ಪವಿತ್ರ ದೇವಸ್ಥಾನಕ್ಕೆ ಕೆಲಸಕ್ಕಾಗಿ ಕರೆದುಕೊಂಡು ಹೋಗುವುದು ನನಗೆ ಸರಿತೋರುತ್ತಿಲ್ಲ, ಏಕೆಂದರೆ

ಮನಬಿಚ್ಚಿ ಮುಟ್ಟಬಾರದು ಮನುಜನ, ಪ್ರಾಣಿಗಳ
ಎಲ್ಲಕ್ಕೂ ಮಿಗಿಲಾಗಿ ತನ್ನ ದೇಹವ ಮಾರುವವಳ
ಮಾಡಿದರೀ ರೀತಿ ಉಪವಾಸವಿರಬೇಕು
ಪರಿತಪಿಸಬೇಕು ಪರಿಶುದ್ಧನಾಗಲು ಜನ್ಮಜನ್ಮಕ್ಕೂ" ಎಂದನು.

ಬ್ರಾಹ್ಮಣನಿಗೆ ಆಶ್ಚರ್ಯವಾಯಿತು. ಕೋಪವೂ ಬಂದಿತು. ಕುಂಬಾರನು ನಮಸ್ಕಾರಮಾಡಿ ನಿಲ್ಲದೆ ಹೊರಟು ಹೋದನು.

ಬ್ರಾಹ್ಮಣ ಮತ್ತು ಹುಡುಗಿ ಊರ ಹೆಬ್ಬಾಗಿಲನ್ನು ತಲುಪುತ್ತಿದ್ದಂತೆ ಯುವಕನು ಕುರಿಕಾಯುವವನ ವೇಷವನ್ನು ಹಾಕಿಕೊಂಡು ಎದುರಾಗಿ ಬಂದು

"ದ್ವಿಜೋತ್ತಮನೇ! ಕೈಹಿಡಿದುಕೊಂಡು ಹೋಗುತ್ತಿರುವ ಸ್ತ್ರೀ ಯಾರೆಂದು ನಿನಗೆ ಗೊತ್ತಿಲ್ಲವೇ? ಆಕೆ ವೇಶ್ಯೆ. ದೇವಸ್ಥಾನಕ್ಕೆ ಇವಳನ್ನು ಕರೆದುಕೊಂಡು ಹೋಗಿ ಆ ಸ್ಥಳವನ್ನು ಅಪವಿತ್ರವಾಗಿ ಮಾಡುವುದು ನಿನಗೆ ತಕ್ಕದ್ದಲ್ಲ, ನೆನಪಿರಲಿ, ಸತ್ಕುಲ ಪ್ರಸೂತ ಬ್ರಾಹ್ಮಣ!

ಅರಿಯದೆ ಮೋಹ್ ಕಾಮದಾಸೆಗೆ ಬಲಿಯಾಗಿ
ಬೆಳೆವೆಣ್ಣ ಸಂಗ ಸೇರಿದಲಿ
ದೇಹವನು ಪ್ರಾಯಶ್ಚಿತ್ತದಲಿ ತೊಳೆಯಬೇಕು ಖಂಡಿತವಾಗಿ"

ಎಂದನು.

ಬ್ರಾಹ್ಮಣನು ತಲೆಯಲ್ಲಾಡಿಸಿ, ಈ ಹೆಂಗಸು ನಿಜವಾಗಿ ವೇಶ್ಯೆಯೇ ಇರಬೇಕು. ಇಲ್ಲದಿದ್ದರೆ ರಸ್ತೆಯಲ್ಲಿ ಬರುವಾಗ ರೈತ, ಕುಂಬಾರ, ಈಗ ಈ ಕುರುಬ ಹೀಗೇಕೆ ಹೇಳುತ್ತಿದ್ದರು? ಎಂದು ಕುರುಬನ ವೇಷ ಧರಿಸಿದ ಯುವಕನನ್ನು ನೋಡಿ " ಈ ಹುಡುಗಿಯನ್ನು ನೀನೇ ಕರೆದುಕೊಂಡು ಹೋಗು" ಎಂದು ಹುಡುಗಿಯ ಕಡೆ ತಿರುಗಿ "ನನ್ನನ್ನು ನೋಡಿದೆನೆಂಬುದನ್ನು ಮರೆತು ಬಿಡು" ಎಂದನು.

ತಲೆಯನ್ನು ತಗ್ಗಿಸಿ, ಹುಡುಗಿ, ಯುವಕನ ಕೈಹಿಡಿದು ನಡೆದು ಹೋದಳು.



# ಸರಿಯಾದ ಪ್ರಮಾಣ!

ಬರೆದವರು : **ಶೈಕ್ಸಾಡಿ**

ಬಹಳ ಹಿಂದಿನ ಮಾತು. ಒಬ್ಬ ವಜೀರನಿದ್ದ. ಅವನಿಗೆ ಜಿನಿ ಮೂರು ವರಗಳನ್ನು ಕೊಟ್ಟನು. ಅಪೂರ್ವವಾದ ವರಗಳನ್ನು ಪಡೆದು ವಜೀರನು ಹಿಗ್ಗಿ ಯಾವ ಯಾವುದನ್ನು ಕೇಳಿದರೆ ಒಳ್ಳೆಯದೆಂದು ಹೆಂಡತಿ ಯೊಡನೆ ವಿಚಾರಮಾಡಲು ಬೇಗ ಬೇಗ ಹೆಜ್ಜೆಗಳನ್ನಿಟ್ಟು ಮನೆಗೆ ಬಂದು "ಲೇ ನೀನು ಯಾವಾಗಲೂ ಅದು ಬೇಕು, ಇದು ಬೇಕು, ಎಂದು ಕೇಳು ತ್ತಲೇ ಇರುತ್ತೀಯಲ್ಲಾ, ಈಗ ಮೂರು ವರಗಳನ್ನು ಪಡೆದು ಬಂದಿದ್ದೇನೆ. ನಾನು ಒಂದು ಕೇಳುವುದು, ಅದಕ್ಕೆ ನೀನು ಇಲ್ಲದ ಕೊಂಕು ಹೇಳುವುದು, ಅವಕ್ಕೆ ತಕರಾರೇ ಬೇಡಾಂತ ನಿನ್ನನ್ನೇ ಕೇಳೋಣವೆಂದು ಬಂದಿದ್ದೇನೆ. ಏನು ಕೇಳಬೇಕು ಹೇಳು." ಎಂದನು.

ವಜೀರನ ಹೆಂಡತಿ ಇನ್ನೂ ಚಿಕ್ಕ ಪ್ರಾಯದವಳು. ಅತಿ ಕಾಮಿ. ಅವಳ ದೃಷ್ಟಿಯಲ್ಲಿ ಇತರ ಪುರುಷರಿಗಿರುವ ಪ್ರಮಾಣದಷ್ಟು ತನ್ನ ಗಂಡನಿ ಗಿಲ್ಲವೆಂದು ತಿಳಿದುಕೊಂಡಿದ್ದಳು.

ಅವಳು "ರೀ, ನನಗೋಸ್ಕರ ಕೇಳೀಂದ್ರೆ ಕೋಪಮಾಡಿಕೊಳ್ಳಬೇಡಿ. ಅಲ್ಲಾ ಪುರುಷರಿಗೆ ದಯಪಾಲಿಸಿರುವಷ್ಟು ದೊಡ್ಡದಾಗಿ ನಿಮಗೆ ಕೊಟ್ಟಿಲ್ಲ. ಬೇರೆ ಎಲ್ಲಾರಿಗಿಂತ ಬಹಳ ದೊಡ್ಡದಾಗಿರುವಂತೆ ಕೇಳಿ" ಎಂದಳು.

ಅವಳಾಡಿದ ಮಾತನ್ನು ಕೇಳಿ ವಜೀರನಿಗೆ ಕೋಪವೇ ಬಂದಿತು. ಆದರೂ ಅವಳು ಹೇಳಿದ ರೀತಿಯೇ ಅಕ್ಷರಶಃ ಕೇಳಿದನು.

ಆಕಾಶದಲ್ಲಿ ಸಿಡಿಲೊಂದು ಬಡಿದು ವಜೀರನಿಗಿಷ್ಟವಿಲ್ಲದಿದ್ದರೂ ಅವನ ಹೆಂಡತಿಯ ಆಸೆಯು ಪೂರ್ಣವಾಯಿತು ಜಿನಿಗಳು ರಾಕ್ಷಸವಂಶದವರೆಂದು ವಜೀರನ ಹೆಂಡತಿಗೆ ಗೊತ್ತಿರಲಿಲ್ಲ. ವಜೀರನು ಭಾರಕ್ಕೆ ನೆಲದ ಮೇಲೆ

ಧೊಪ್ಪೆಂದು ಬಿದ್ದು ಬಿಟ್ಟನು. ಏಳಲಿಕ್ಕೆ ಕೂಡ ಆಗಲಿಲ್ಲ. "ಛೇ ... ನೀನು ಆಸೆ ಪಟ್ಟದಕ್ಕೆ ಆದ ಗತಿ ನೋಡು" ಎಂದನು.

ಹೆಂಡತಿಯು "ಈಗ ನಮ್ಮ ಗತಿಯೇನು"? ಎಂದು ಗಾಬರಿಯಾದಳು. ಮನಸ್ಸನ್ನು ಸಮಾಧಾನಕ್ಕೆ ತಂದುಕೊಂಡು "ರೀ, ಹಾಳಾದ್ದು ಹೋಗೋ ಹಾಗೆ ಹೇಳಿ" ಎಂದಳು.

ವಜೀರನು ಎರಡನೆವರವನ್ನು ಹಾಗೆಯೇ ಕೇಳಿದನು. ಕೆಲವೇ ಕ್ಷಣಗಳಲ್ಲಿ ವರಕೊಟ್ಟ ಸ್ಥಳದಲ್ಲಿ ಏನೂ ಇರಲಿಲ್ಲ. ವಜೀರನು ಮೂರ್ಛೆ ಹೋದ. ಹೆಂಡತಿಯು ಒಳಗೆ ಓಡಿಹೋಗಿ ತಣ್ಣೀರನ್ನು ತಂದು ತಲೆಗೆ ತಟ್ಟಿ ಎಬ್ಬಿಸಿದಳು. ವಜೀರನಿಗೆ ತಡೆಯಲಾರದಷ್ಟು ಕೋಪ ಬಂದಿತು. ಹೆಂಡತಿಗೆ ದಿಕ್ಕೇ ತೋಚದ ಹಾಗಾಯಿತು.

"ರೀ ! ಮೊದಲು ಎರಡು ವರಗಳು ಕೇಳುವುದಕ್ಕೆ ಮುಂಚೆ ಹೇಗಿತ್ತೋ ಹಾಗೆ ಮಾಡುವುದಕ್ಕೆ ಹೇಳೀಂದ್ರೆ. ನಿಮ್ಮ ದಮ್ಮಯ್ಯ ಅಂತೀನಿ" ಎಂದಳು.

ಈ ರೀತಿ ಜಿನಿಯ ಮೂರು ವರಗಳೂ ಹೆಂಡತಿಯ ಮೂರ್ಖತನಕ್ಕೆ ಮಣ್ಣು ಪಾಲಾದುದನ್ನು ಕಂಡು ಮಹಾ ಕೋಪವೇ ಬಂದಿತ್ತು ವಜೀರ ಸಾಹೇಬನಿಗೆ.



# ಒಣ ಜಂಭ

ಬರೆದವರು : **ಕೆವಿಲಿಯರ್ ಡಿ ನಾರ್ಸಿಯಟ್**

ರಾಬರ್ಟ್ ಡಿ ಸೈಂಟ್ ಪಾಲ್ ಕುದುರೆ ಪಡೆಯಲ್ಲಿ ಕ್ಯಾಪ್ಟನ್. ಪ್ಯಾರಿಸ್ ಮತ್ತು ಸುತ್ತಮುತ್ತಲ ಪ್ರದೇಶದಲ್ಲೇ ರೂಪವತಿಯಾದ ಯುವತಿ ಎನಿಸಿಕೊಂಡವಳನ್ನು ನೋಡಿ ಮುಗ್ಧನಾದನು. ಅವಳ ಹೆಸರು ನ್ಯಾನ್ಸಿ. ಮುದ್ದಾದ ಮುಖ. ಮಾಟವಾದ ದೇಹ. ಬಿಂಕದ ನಡಿಗೆ. ಯಾವ ಯುವಕನಿಗಾದರೂ ತಲೆಕೆಡುವಂತಿತ್ತು. ಅವಳಿಗೋ ಮಹಾ ಜಂಭ. ಎಲ್ಲಿಲ್ಲದ ಅಹಂಕಾರ. ಅಂತಸ್ತು, ಯುದ್ಧದಲ್ಲಿ ವೀರಾವೇಶದಿಂದ ಗೆದ್ದು ಪ್ರಶಸ್ತಿ ಪಡೆದವನೇ ತನ್ನ ಪ್ರೇಮಕ್ಕೆ ಅರ್ಹನು ಎಂದು ತಿಳಿದಿದ್ದಳು. ಪಾಲ್ ಅವಳ ಒಲುವನ್ನು ಸಂಪಾದಿಸಲು ಶತ ಪ್ರಯತ್ನ ಪಟ್ಟನು. ಅವಳು ಹರೆಯದ ಹುಡುಗನ ಕಡೆ ಕಣ್ಣೆತ್ತಿ ಕೂಡ ನೋಡಲಿಲ್ಲ. ಒಂದು ದಿನ ರಾಬರ್ಟ್ "ನಾನ್ಸಿ, ನಿನ್ನನ್ನು ಕಂಡರೆ ನನಗೆ ಎಷ್ಟು ಪ್ರೀತಿ ಗೊತ್ತಾ?" ಎಂದು ಕೇಳಿದನು.

ಹುಡುಗಿಯು ಬಿಂಕದಿಂದ "ನನಗೆ ವಿಪರೀತ ಕೆಲಸ. ಇಲ್ಲದಿದ್ದರೆ ಈ ವಿಷಯವಾಗಿ ಯೋಚಿಸಬಹುದಾಗಿತ್ತು. ಅಲ್ಲದೆ ನಿನಗೆ ಎಷ್ಟು ಮಹಾ ವಯಸ್ಸು? ಇನ್ನೂ ಮೀಸೆ ಗಡ್ಡ ಕೂಡ ಬಂದಿಲ್ಲ!" ಎಂದಳು.

"ನಿನ್ನ ಮನಸ್ಸು ಕಲ್ಲು ನಾನ್ಸಿ. ನಾಳೆ ಬೆಳಿಗ್ಗೆ ಸೈನ್ಯದ ಜೊತೆ ಯುದ್ಧಭೂಮಿಗೆ ಹೋಗುತ್ತಿದ್ದೇನೆ. ಯಾರಿಗೆ ಗೊತ್ತು ನಾನು ಸತ್ತರೂ ಸಾಯಬಹುದು."

"ಪಾಪ! ಪಾಪ! ಹೋಗಲಿ ಒಂದು ಕರಾರು. ಯುದ್ಧಭೂಮಿಗೆ ಹೋದಾಗ ನೀನು ಗಡ್ಡ ಮೀಸೆಯನ್ನು ಬೋಳಿಸೊಲ್ಲಾಂತ ಮಾತು ಕೊಡ ಬೇಕು. ಹಾಗೆ ನೀನು ಮಾಡದರೆ, ನೀನು ಹಿಂತಿರುಗಿ ಬರುವುದರಲ್ಲಿ ನಾನು

ಬೇರೆಯುವನನ್ನು ಪ್ರೀತಿಸದೆ ಇದ್ದ ಪಕ್ಷಕ್ಕೆ ನಿನ್ನ ಹಳೇಂತ ತಿಳಿದುಕೊ. ನೀನೂ ಕೂಡ ನೋಡುವುದಕ್ಕೆ ಆಗ ಲಕ್ಷಣವಾಗಿ ಕಾಣಿಸುತ್ತಿ!" ಎಂದಳು.

ಪಾಲ್ "ಹಾಗೆ ಆಗಲಿ ಖಂಡಿತ ನಾನು ಗಡ್ಡವನ್ನೂ ಬೋಳಿಸುವುದಿಲ್ಲ ಮೀಸೆಯನ್ನೂ ಬೋಳಿಸುವುದಿಲ್ಲ. ನೀನು ನನ್ನನ್ನು ಪ್ರೀತಿಸುತ್ತೀಂತ ಮಾತು ಕೊಟ್ಟರೆ ಸಾಕು. ಅದಕ್ಕೆ ಸಾಕ್ಷಿಯಾಗಿ ಮುಂಗಡವಾಗಿ ನನಗೆ ಏನಾದರೂ ಕೊಡುತ್ತೀಯಾ?" ಎಂದು ಕೇಳಿದನು.

ಅವಳು "ಸಾಧ್ಯವೇ ಇಲ್ಲ ನಿನ್ನ ಮುಖದಲ್ಲಿ ಮೀಸೇನೂ ಇಲ್ಲ ಗಡ್ಡವೂ ಇಲ್ಲ ನೀನು ಮಾತು ಕೊಟ್ಟಂತೆ ನಡೆದು ಕೊಂಡರೆ, ನೀನು ನನ್ನ ವಿಷಯವಾಗಿ ಏನೇನು ಕನಸು ಹೆಣೆಯುತ್ತೀಯೋ ಅದಕ್ಕೂ ಹೆಚ್ಚಿಗೆ ನನ್ನಿಂದ ಪಡೆಯುಬಲ್ಲೆ" ಎಂದಳು.

ಕ್ಯಾಪ್ಟನ್ನಿಗೂ ಅವಳು ಹಾಸ್ಯ ಮಾಡುತ್ತಿದ್ದಾಳೇಂತ ಚನ್ನಾಗಿ ಗೊತ್ತಿತ್ತು. 'ಆಗಲಿ' ಎಂದು ಹುರುಪಿನಿಂದಲೇ ಹೇಳಿದನು.

ಕ್ಯಾಪ್ಟನ್ ಗೆಳೆಯರನ್ನು ಕೇಳಬೇಕೆ? ನಿತ್ಯ ಆವನ ಪ್ರಣಯದ ವಿಚಾರವಾಗಿ ಲೇವಡಿ ಮಾಡುತ್ತಿದ್ದರು. ರಾಬರ್ಟ್ ತನ್ನ ಇನಿಯಳಿಗೆ ಒಂದು ಓಲೆಯನ್ನೂ ಬರೆಯಲಿಲ್ಲ. ಎರಡು ತಿಂಗಳಲ್ಲಿ ಘೋರವಾದ ಕದನ ವಾಯಿತು. ಇಪ್ಪತ್ತು ಆಫೀಸರುಗಳು, ಕಡೆಯ ಪಕ್ಷ ಮೂವತ್ತು ಪಡೆ ಗಳು ರಾಬರ್ಟ್ ಇದ್ದ ವಿಭಾಗದಲ್ಲಿ ಮಡಿದರು.

ನಾನ್ಸಿಗೆ, ಪತ್ರ ಒಂದೂ ಬಾರದೆ ಇದ್ದುದರಿಂದ ಬಹುಶಃ ಸೈಂಟ್ ಪಾಲ್ ಯುದ್ಧದಲ್ಲಿ ಸತ್ತು ಹೋಗಿರಬಹುದೆಂದು ಬೇರೊಬ್ಬನನ್ನು ಪ್ರೀತಿಸ ತೊಡಗಿದಳು. ಸ್ವಲ್ಪ ದಿನಗಳಲ್ಲಿ ಅನೇಕರು ಅವಳೊಡನೆ ಸಂತೋಷದಿಂದ ಕಾಲವನ್ನು ಕಳೆದರು. ಆಗಾಗ ನಾನ್ಸಿ "ರಾಬರ್ಟ್, ನೀನು ಕಾಗದವನ್ನೇಕೆ ಬರೆಯಲಿಲ್ಲ. ನಿನಗಾಗಿ ಅರಳಿದ ಹೂವನ್ನು ಬೇರೊಬ್ಬನು ಅನುಭವಿಸು ವಂತಾಯಿತು" ಎಂದು ಮರುಗಿದಳು.

ಛಳಿಗಾಲ ಬಂದಿತು. ಸೈಂಟ್ ಪಾಲ್ ಜಯಭೇರಿಯೊಡನೆ ಪ್ಯಾರಿಸ್ಸಿಗೆ ಹಿಂತಿರುಗಿದನು. ಎಲ್ಲರೂ ಅವನನ್ನು ಹೊಗಳುವವರೆ. ಎಲ್ಲರ ಬಾಯಲ್ಲೂ ಅವನ ಸಾಹಸ ಕೃತ್ಯಗಳೇ! ಈಗ ಅವನಿಗೆ ಉದ್ದವಾದ ಗಡ್ಡವು ಬೆಳೆದಿತ್ತು.

ಫ್ರಾನ್ಸಿನ ಇತಿಹಾಸದಲ್ಲಿ ಹಾಗೂ ನಾನ್ಸಿಯ ಮಲಗುವ ಕೋಣೆಗೆ ಸ್ವತಃ ಸಿದ್ಧವಾದ ಸ್ಥಾನವನ್ನೂ, ಹಕ್ಕನ್ನೂ ಪಡೆದಿದ್ದನು.

ಸೈಂಟ್ ಪಾಲನ ನೀಳವಾದ ದಾಡಿಯನ್ನು ನೋಡಿ ನಾನ್ಸಿ, ಹೆಣ್ಣು ಹುಲಿಯಂತಲ್ಲ ಕುರಿಮರಿಯಂತೆ ಆದಳು. ಅವಳ ಅಹಂಕಾರ, ಒಣ ಜಂಭ ಎಲ್ಲಿಯೋ ತೂರಿ ಹೋಯಿತು. ವಿಜಯಿಯಾಗಿ ಬಂದ ರಾಬರ್ಟ್‌ನನ್ನು ನೋಡಿ ಮುಗಳ್ನಗೆ ನಕ್ಕು "ಮಾತು ಕೊಟ್ಟ ಹಾಗೇ ನೀನು ನಡೆದು ಕೊಂಡಿದ್ದೀ. ಈಗ ನೋಡಲು ಎಷ್ಟು ಚನ್ನಾಗಿದ್ದೀಯಾ ಗೊತ್ತಾ? ನನ್ನ ದೇಹ, ಹೃದಯ, ಸಕಲವನ್ನೂ ನಿನಗೆ ಅರ್ಪಿಸುತ್ತೇನೆ. ಅದಕ್ಕೂ ಹೆಚ್ಚು ಏನು ಬೇಕಾದರೂ ತೆಗೆದುಕೊ" ಎಂದಳು.

ಇದೆಲ್ಲಾ ಬರಿಯ ಬೂಟಾಟಿಕೆಯೆಂದು ಅವನಿಗೂ ಗೊತ್ತು. ತನ್ನಂತೆ ಗಡ್ಡವಿರುವ ಹಲವಾರು ಮಂದಿ ಆಗಲೇ ಅವಳೊಡನೆ ಸಹಭಾಗಿಗಳಾದ್ದ ರಿಂದೂ ಅವನಿಗೆ ಗೊತ್ತು. ಮೌನವಾಗಿಯೇ ಇದ್ದನು.

ಪ್ರಿಯತಮನು ಯಾವರೀತಿಯ ಉದ್ವೇಗವನ್ನೂ ತೋರಿಸದಿದ್ದುದನ್ನು ಕಂಡು ನಾನ್ಸಿ ಮೂರ್ಛೆ ಹೋದವಳಂತೆ ನಟಿಸಿ ಕಣ್ಣೀರು ಸುರಿಸುತ್ತಾ, (ಸ್ತ್ರೀಯರಿಗೆ ಕಣ್ಣೀರು ಮಹಾ ಅಸ್ತ್ರ–ತಮ್ಮ ಅಪರಾಧ ಬಯಲಾದಾಗ ಮತ್ತಷ್ಟು ಹೆಚ್ಚು) "ನಾನು ಅಡ್ಡದಾರಿ ಹಿಡಿದೆ. ತಪ್ಪು .... ಒಪ್ಪಿಕೊಳ್ಳು ತ್ತೇನೆ. ನೀನು ಹೋದಮೇಲೆ ಬೇರೆಯವನನ್ನು ಇಟ್ಟು ಕೊಂಡಿದ್ದೆ.... ದಯವಿಟ್ಟು ಕ್ಷಮಿಸು. ಇನ್ನು ಮೇಲೆ ನಿನನ್ನು ಮೋಸಗೊಳಿಸುವುದಿಲ್ಲ. ನನ್ನಾಣೆಗೂ ದ್ರೋಹಮಾಡುವುದಿಲ್ಲ" ಎಂದು ಗೋಳಿಟ್ಟಳು.

"ಇಷ್ಟೆಲ್ಲಾ ಯಾಕೆ ಹೇಳುತ್ತಿ?" ಎಂದು ಅವಳು ಕೇಳಿದ್ದರಲ್ಲಿ ಹೊಸ ದೇನನ್ನೂ ಕಾಣದೆ "ನೋಡು ! ನನ್ನ ಗಡ್ಡ ಮೀಸೆ ಕೂಡ ಕೃತಕ" ಎಂದು ಮುಖಕ್ಕೆ ಕಟ್ಟಿಕೊಂಡಿದ್ದ ಗಡ್ಡ ಮೀಸೆಗಳನ್ನು ಕಿತ್ತೊಗೆದು ಅಲ್ಲಿಂದ ನಡೆದನು.



# ಗಂಡನಿಗೇ ಗುಗ್ಗು ಹಿಡಿಸಿದ....!

ಬರೆದವರು : **ಮಸೂಷಿಯೋ ಸಲರ್ನಿಟಾನೋ**

ವೆನಿಸ್ಸಿನ ಕ್ಯಾಪ್ಟನ್ ಆನ್ಟೋನಿಯೋ ಒಂದು ದಿವಸ ಕಾಲುವೆಯ ಪಕ್ಕದಲ್ಲಿದ್ದ ರಸ್ತೆಯಲ್ಲಿ ಗೆಳೆಯನೊಂದಿಗೆ ಹರಟೆ ಹೊಡೆಯುತ್ತಾ ಹೋಗುತ್ತಿದ್ದನು. ಆಜಾನುಬಾಹು. ದೃಢಕಾಯಿ. ಸ್ಫುರದ್ರೂಪಿ. ಸಮುದ್ರದ ಮೇಲೆ ಹಡಗಿನಲ್ಲಿ ಪ್ರಯಾಣ ಬೆಳೆಸುವುದು ಅವನಿಗೆ ಅತ್ಯಂತ ಪ್ರಿಯವಾದ ಹವ್ಯಾಸವಾಗಿತ್ತು. ಮಾತನಾಡುತ್ತ ಹೋಗುತ್ತಿದ್ದಂತೆ ಮನಸ್ಸನ್ನು ಆಕರ್ಷಿಸುವಂಥ ಹೆಂಗಸೊಬ್ಬಳು ಅವರ ಎದುರಿಗೆ ಬಂದಳು ಅವಳನ್ನು ನೋಡಿ ಕ್ಯಾಪ್ಟನ್ ನಸು ನಕ್ಕು, ಗೆಳೆಯನ ಕಡೆ ತಿರುಗಿ " ನೋಡೋ ಹೇಗಿದ್ದಾಳೆ! ಹೇಗಾದರೂ ಮಾಡಿ ಅವಳನ್ನ ಹಿಡಿಕೋಬೇಕು" ಎಂದನು.

"ಆನ್ಟೋನಿಯೋ ! ನಿನಗೆ ಸ್ವಲ್ಪ ಕೂಡ ನಾಚಿಕೆ-ಹೇಸಿಗೆಯೇ ಇಲ್ಲ. ಕಂಡ ಕಂಡ ಹೆಣ್ಣಿನ ಮೇಲೆಲ್ಲಾ ಕಣ್ಣು ಹಾಕುತ್ತಿ. ಯಾರೂ, ಏನೂಂತ ಕೂಡ ನೋಡೊಲ್ಲ. ಅವಳು ಯಾರು ಗೊತ್ತಾ ? ಹಡಗಿನಲ್ಲಿ ಕೆಲಸ ಮಾಡುತ್ತಾನಲ್ಲಾ ಮಾರ್ಕೋ, ಅವನ ಹೆಂಡತಿ ಕಣೋ !"

"ಹೌದಾ ! ಆದರೇನು ಬಿಡೋ ! ಹೇಗಾದರೂ ಸರಿ ಅವಳನ್ನು ಹಿಡಕೋತೀನಿ."

"ನಿನಗೆ ಹುಚ್ಚು ಕಣೋ! ಮಾರ್ಕೋ ಎಂಥವನೂಂತ ನಿನಗೆ ಗೊತ್ತಿಲ್ಲಾಂತ ಕಾಣಿಸುತ್ತೆ. ಬಹಳ ಅನುಮಾನ ಪ್ರಕೃತಿಯ ಮನುಷ್ಯ"

"ಕಡು ಮೂರ್ಖನೂ ಹೌದು"

"ಅವಳನ್ನು ದೇವತೆ ಎಂದೇ ಆರಾಧಿಸುತ್ತಾನೆ"

"ನಾನೂ ಅಷ್ಟೆ !"

"ಮನೆಗೆ ಬೀಗಹಾಕಿ ಭದ್ರವಾಗಿಟ್ಟಿದ್ದಾನೆ"

"ಬೀಗ ರಿಪೇರಿ ಮಾಡುವವರೂ ಇದ್ದಾರೆ. ಪ್ರೇಮಕ್ಕೆ ಇಂಥ ನಿರ್ಬಂಧ....

"ಆಂಟೋನಿಯೊ...."

"ಏನು ?"

"ಅವಳನ್ನು ಹಿಡಿದುಕೊಳ್ಳೋಕೆ ಸಾಧ್ಯವೇ ಇಲ್ಲ ಕಣೋ !"

"ಮನಸ್ಸು ಮಾಡಿದರೆ ಅಸಾಧ್ಯವೆನ್ನುವುದೇ ಇಲ್ಲ" ಎಂದು ಪುನಃ ಹೆಂಗಸನ್ನು ನೋಡಿನಕ್ಕ.

"ಬಾಜಿ ಕಟ್ಟುತ್ತೀಯಾ ?"

"ಓಹೋ....ರೆಡಿ ಅದಕ್ಕೇನು !"

"ಏನು....ಅಷ್ಟು ಖಂಡಿತವಾಗಿ ಹೇಳುತ್ತೀಯಾ ?

"ಹ್ಞೂ"

"ಏನು ಬಾಜಿ?"

"ಬರುವ ಶನಿವಾರ ರಾತ್ರಿ ನಿನಗೂ, ನನ್ನ ಸ್ನೇಹಿತರು, ಎಲ್ಲರಿಗೂ ಕಾಲುವೆ ಪಕ್ಕದಲ್ಲಿರುವ ಹೋಟೇಲಿನಲ್ಲಿ ಭಾರಿ ಊಟ ಹಾಕಿಸುತ್ತೇನೆ"

"ಅಷ್ಟೇನಾ....?"

"ಅಷ್ಟೆ !.... ಯಾಕೇಂತಿ?....ನನಗೇ ಅವಳನ್ನು ಹಿಡಿದುಕೊಳ್ಳೋ ನಂಬಿಕೆ ಇಲ್ಲ !"

ಆಂಟೋನಿಯೊವಿಗೆ ಪರಿಚಯಸ್ಥಳಾದ ಘಾಟಿ ಮುದುಕಿಯೊಬ್ಬಳಿದ್ದಳು. ಯುವಕ, ಯುವತಿಯರ ಮಧ್ಯೆ ಮಧ್ಯಸ್ಥಿಕೆ ನಡೆಸುವುದು, ಪ್ರಣಯಿಗಳ ಪತ್ರಗಳನ್ನು ಯಾರ ಕಣ್ಣಿಗೂ ಬೀಳದಂತೆ ತೆಗೆದುಕೊಂಡು ಹೋಗಿ ಕೊಡುವುದು, ಇಬ್ಬರೂ ಒಂದೆಡೆ ಸೇರುವಂತೆ ಏರ್ಪಡಿಸುವುದೂ ಅವಳ ವೃತ್ತಿಯಾಗಿತ್ತು. ಮಹಾನಿಪುಣೆ. ಕೆಲಸವನ್ನು ನಾಜೂಕಾಗಿ ಚಾಕಚಕ್ಯತೆಯಿಂದ ನಿರ್ವಹಿಸುತ್ತಿದ್ದಳು. ಅವಳಿಗೆ ಅಸಾಧ್ಯ ಎನ್ನುವ ಮಾತೇ ಇರ

ಲಿಲ್ಲ. ಏನಾದರೂ ಕೆಲಸ ಹೇಳಿದರೆ ಖಾತ್ರಿಯಾಗಿ ಮಾಡೇ ಬಿಡುತ್ತಿದ್ದಳು. ಅಂಟೋನಿಯೋ, ತನ್ನ ಹತ್ತಿರವಿದ್ದ ಹಣವನ್ನೆಲ್ಲಾ ತೆಗೆದುಕೊಂಡು ಅವಳ ಹತ್ತಿರ ಹೋಗಿ, "ಅಜ್ಜಿ, ನಿನ್ನಿಂದ ಒಂದು ಕೆಲಸವಾಗ ಬೇಕಾಗಿದೆ. ನನ್ನ ಹತ್ತಿರ ಕೆಲಸ ಮಾಡುತ್ತಾನಲ್ಲ ಮಾರ್ಕ್ಯೋ ಅವನ ಹೆಂಡತಿ ನಿನಗೆ ಗೊತ್ತು ತಾನೆ? ಅವಳ ಹತ್ತಿರ ಹೋಗಿ 'ನಿನ್ನ ಕಾಲುವೆ ಪಕ್ಕದಲ್ಲಿ ನೋಡಿ ನಕ್ಕನಲ್ಲ ಅವನು ನಿನ್ನನ್ನು ಬಹಳ ಪ್ರೀತಿಸುತ್ತಾನೆ....' ನಿನಗೇ ಗೊತ್ತಲ್ಲ ಅಜ್ಜಿ!.... ನಿನಗೆ ಹೇಳಿಕೊಡಬೇಕಾ?....ಉಪ್ಪು ಖಾರ ಸೇರಿಸಿ ಎಲ್ಲಾ ಹೇಳು." ಎಂದನು. ಮುದುಕಿಯು ಹಲ್ಲುಗಳಿಲ್ಲದ ಬಾಯನ್ನು ಊರಗಲ ಬಿಟ್ಟು ನಕ್ಕು ತಲೆ ತೂಗಿದಳು. ಅನ್ಟೋನಿಯೋ ಅವಳಿಗೆ ಹೇಳು. ಅವಳ ಗಂಡನಿಗೆ ಗೊತ್ತಾಗದಂತೆ, ಯಾವ ರೀತಿ ತೊಂದರೆಯೂ ಆಗದ ಹಾಗೆ ನಾನು ನೋಡಿ ಕೋಳ್ತೀನೀಂತ. ಅವಳು ಹಾಗೇ ಹೀಗೆ ಸುತ್ತಿಸುತ್ತಿ ಮಾತನಾಡುವುದಕ್ಕೆ ಬಿಡದೆ ಉಂಟು ಅಥವ ಇಲ್ಲ ಅನ್ನುವುದನ್ನು ತಿಳಿಸುವುದಕ್ಕೆ ಹೇಳು, ಗೊತ್ತಾಯಿತಾ?" ಎಂದನು.

ಮುದುಕಿಯು 'ಸರಿ' ಎಂದಳು. ಅನ್ಟೋನಿಯೋ ಅವಳ ಕೈಲಿ ಚಿನ್ನದ ನಾಣ್ಯಗಳಿದ್ದ ಚೀಲವನ್ನು ಕೊಟ್ಟನು. ಮುದುಕಿಯು ತೆಗೆದು ಕೊಂಡು ಹೋಗುತ್ತಿದ್ದಂತೆ, "ಅಜ್ಜೀ! ಇಷ್ಟೇ ಕೊಡೋದೂಂತ ತಿಳಿದು ಕೋಬೇಡ ಅವಳು ಏನು ಹೇಳುತ್ತಾಳೋ, ತಿಳಿಸಿದಲ್ಲಿ ಇನ್ನೂ ದುಡ್ಡು ಕೊಡುತ್ತೇನೆ" ಎಂದನು.

ಮುದುಕಿಯು ಕೆಲಸವನ್ನು ಸಾಧಿಸಲು ಹೊರಟಳು. ಅನ್ಟೋನಿಯೋಗೆ ಏನಾಗುತ್ತದೋ ಎಂದು ಮನಸ್ಸು ಹೊಯ್ದಾಡಿತು. ಮಾರನೆಯ ದಿವಸ ಮುದುಕಿಯು ಅವನ ಹತ್ತಿರ ಬಂದು "ಅವಳಿಗೇನೋ ಇಷ್ಟವಿದೆಯಂತಪ್ಪ. ಆದರೆ ಗಂಡನಿಗೆ ಬಹಳ ಹೆದರುತ್ತಾಳೆ. ಅವನು ತುಂಬಾ ಕೆಟ್ಟವನಂತೆ" ಎಂದಳು. ಅನ್ಟೋನಿಯೋ "ಇಷ್ಟೇ ತಾನೆ! ಅವನ ವಿಷಯವಾಗಿ ಅವಳು ಯೋಚನೆ ಮಾಡುವುದೇ ಬೇಕಾಗಿಲ್ಲ. ಅವನು ತೆಪ್ಪಗಿರೋ ಹಾಗೆ ಮಾಡುವ ಭಾರ ನನ್ನದೂಂತ ಹೇಳು" ಎಂದು ಉಳಿದ ಹಣವನ್ನು ಕೊಟ್ಟನು.

ಅನ್ಟೋನಿಯೋಗೆ ಖುಷಿ ಯಾಗಿ ತನ್ನಲ್ಲೇ ಹಾಡಿಕೊಳ್ಳುತ್ತಾ




ಮಾರ್ಕೋವನ್ನು ಹುಡುಕಿಕೊಂಡು ಹೊ... ಹಿಡಿಯುವ ದೋಣಿಯಲ್ಲಿದ್ದನು.

"ಮಾರ್ಕೊ ಹೇಗಿದ್ದೀ?" ಎಂದು ಕೇಳಿದ ಆನ್ಟೋನಿಯೋ.

"ಕ್ಯಾಪ್ಟನ್ ಆಂಟೋನಿಯೋ! ಒಳ್ಳೆಯ ಸಮಯಕ್ಕೇ ಬಂದಿರಿ."

''ಒಳ್ಳೇ ಸಮಯಕ್ಕೆ ಬಂದೇಂತಾನೇ ಇಟ್ಟುಕೋ. ನಿನ್ನಿಂದ ಒಂದು ಸಹಾಯವಾಗಬೇಕಾಗಿದೆಯಲ್ಲ!"

''ಅದೇಕ್ಕೇನು ಸಾರ್! ನಿಮಗೆ ಇಲ್ಲಾಂತೇನಾ? ಇದಕ್ಕೆ ಇಷ್ಟು ಕೇಳಿಕೋಬೇಕಾ? ಹೇಳಿ ಏನಾಗಬೇಕು."

"ಇವತ್ತು ಒಬ್ಬಳನ್ನು ನೋಡುವುದಕ್ಕೆ ಹೋಗುತ್ತಿದ್ದೇನೆ."

"ನೀವು ಅಸಾಧ್ಯರು ಸಾರ್! 

''ನೋಡು, ಹೋಗುವುದಕ್ಕೆ ದೋಣಿಬೇಕಾಗಿದೆ. ನನ್ನ ಹತ್ತಿರ ದುಡ್ಡಿಲ್ಲ. ಗೊಂಡೋಲ ( ವಿಹಾರ ದೋಣಿ ) ವನ್ನು ಬಾಡಿಗೆ ತೆಗೆದು ಕೊಳ್ಳಲು ಸಾಧ್ಯವಿಲ್ಲ. ನಿನ್ನ ದೋಣಿಯನ್ನು ಕೊಟ್ಟಿರುತ್ತೀಯಾ? ಆದರೆ ಒಂದು. ದೋಣಿಯನ್ನು ನೀನೇ ನಡಿಸಬೇಕು.

"ಸಂತೋಷವಾಗಿ, ಎಲ್ಲಿ ಬಂದಿರಬೇಕು ಹೇಳಿ".

''ಇಲ್ಲೇ....ಸೂರ್ಯ ಮುಳುಗಿದ ಮೇಲೆ".

ಸಂಜೆ ಇಳಿಗತ್ತಲಾದಂತೆ ಆನ್ಟೋನಿಯೋ ದೋಣಿಯಲ್ಲಿ ಕುಳಿತನು. ಮಾರ್ಕೋ ದೋಣಿಯನ್ನು ಮಂದಗಮನದಲ್ಲಿ ನಡೆಸತೊಡಗಿದನು. ಆನ್ಟೋನಿಯು ಮುಕ್ತಕಂಠದಿಂದ ಪ್ರಣಯ ಗೀತೆಗಳನ್ನು ಹಾಡಿದನು. ಅಶ್ಲೀಲ ಕಥೆಗಳು, ಹಾಸ್ಯ ಪ್ರಚೋದಕ ಕಥೆಗಳನ್ನೂ ಹೇಳಿದನು. ಇಬ್ಬರೂ ಗಹ ಗಹಿಸಿ ನಕ್ಕರು. ಕಡಲ ತಂಪಾದ ಗಾಳಿ ಮನಸ್ಸಿಗೆ ಉಲ್ಲಾಸವನ್ನು ತರುತ್ತಿತ್ತು. ಕ್ಯಾಪ್ಟನ್ "ಮಾರ್ಕೋ ಆ ಮನೆ ಮುಂದೆ ನಿಲ್ಲಿಸು" ಎಂದು ಹೇಳುತ್ತಲೂ, ಮಾರ್ಕೋ ದೋಣಿಯನ್ನು ನಿಲ್ಲಿಸಿದನು. ಆಂಟೋನಿಯೋ ಅನುಮಾನ ಬಾರದ ರೀತಿ ಅನೇಕ ಮನೆಗಳ ಮುಂಬಾಗಿಲುಗಳಲ್ಲಿ ಪ್ರವೇಸಿಶಿ, ಹಿಂಬಾಗಗಳಲ್ಲಿ ಹಾಯ್ದು ಹೋದನು. (ಆ ಮನೆಗಳಲ್ಲಿ ಈ ರೀತಿ ಪ್ರವೇಶ

ಮಾಡಲು ಮೊದಲೇ ಸ್ವಲ್ಪ ಹಣವನ್ನು ಕೊಟ್ಟಿದ್ದನು). ಕಡೆಗೆ ಮಾರ್ಕೊ ಮನೆಯ ಬಾಗಿಲ ಮುಂದೆ ನಿಂತು ಮೆಲ್ಲಗೆ ಬಾಗಿಲನ್ನು ತಟ್ಟಿದನು. ಯುವತಿಯು ಅವನನ್ನು ಬಾಹುಗಳಿಂದ ಬಿಗಿದಪ್ಪಿ ಸ್ವಾಗತಿಸಿದಳು. ಇಬ್ಬರೂ ಹರ್ಷೋನ್ಮತ್ತರಾಗಿ ಕಾಲ ಕಳೆದನಂತರ ಆನ್ಟೋನಿಯೋ ಹೋದ ದಾರಿಯಲ್ಲೇ ಹಿಂತಿರುಗಿದನು.

ಮಾರ್ಕೊ, "ಕ್ಯಾಪ್ಟನ್! ಸದ್ಯಕ್ಕೆ ಬಂದೇ ಬಿಟ್ಟಿರಲ್ಲ. ಇಲ್ಲಿ ಕೂತು ಕೂತು, ನೀವು ಯಾವ ರೀತಿ ಉಲ್ಲಾಸ ಕ್ರೀಡೆಯಲ್ಲಿ ಕಾಲ ಕಳೆಯುತ್ತಿದ್ದೀರೆಂಬುದನ್ನು ಯೋಚಿಸುತ್ತಿದ್ದಂತೆ, ನನ್ನ ಹೆಂಡತಿಯ ಹತ್ತಿರ ಏಕೆ ಹೋಗಬಾರದೆಂದು ಯೋಚಿಸಿದೆ. ಆದರೆ, ನಾನು ಆ ಕಡೆ ಹೋಗಿ, ನೀವು ಅಷ್ಟರಲ್ಲೇ ಹಿಂತಿರುಗಿ ಬಂದರೆ, ಡೋಣಿಯನ್ನು ಕಾಣದೆ ತೊಂದರೆ ಪಡಬಹುದೂಂತ ಸುಮ್ಮನಾದೆ." ಎಂದನು.

ಮಾರ್ಕೊ ಆಡಿದ ಮಾತುಗಳನ್ನು ಕೇಳಿ ಕ್ಯಾಪ್ಟನ್ನಿನ ಮುಖವು ಅರಕ್ತವಾಗಿ ಭೀತಿಯಿಂದ ಬಿಳಚಿಕೊಂಡಿತು. ತನ್ನ ಮನಸ್ಸಿನಲ್ಲಾದ ಉದ್ವೇಗವನ್ನು ತಡೆದು " ಏನಂದೆ ? ಮೊದಲೇತಿಳಿಸಿದ್ದರೆ, ನಿನ್ನನ್ನೂ ಹೋಗುವುದಕ್ಕೆ ಹೇಳುತ್ತಿದ್ದೆನಲ್ಲಾ !" ಎಂದನು.

"ನನಗೆ ಮದುವೆಯಾಗಿರುವುದು ನಿಮಗೆ ಗೊತ್ತಿಲ್ಲವಾ? ನನ್ನ ಹೆಂಡತಿ ಹೇಗಿದ್ದಾಳೆ ಗೊತ್ತಾ ? ರತಿ....ರಂಭೆ ...ಊರ್ವಶಿ....ಎಲ್ಲಾರನ್ನೂ ಅವಳ ಮುಂದೆ ನೀವಾಳಿಸಿ ಹಾಕಬೇಕು. ಝಳಝಳಾಂತ ಗುಲಾಬಿ ಹೂವಿನ ಹಾಗೆ ನೋಡಿದವರಿಗೆಲ್ಲಾ ಅವಳ ಮೇಲೆ ಆಸೆ ಬರುವ ಹಾಗಿದ್ದಾಳೆ. ಅಷ್ಟು ಚನ್ನಾಗಿ ಮೈ ತುಂಬಿಕೊಂಡು....!"

"ಅದೃಷ್ಟಶಾಲಿ ಕಣೋ ನೀನು ! ಆದರೆ ಒಂದು ವಿಷಯವನ್ನು ಹೇಳುತ್ತೇನೆ. ಹೆಂಡತಿ ರತ್ನದ ಹಾಗೆ ಇದ್ದರೂ, ನಿತ್ಯ ಒಬ್ಬಳನ್ನೇ ನೋಡಿ ನೋಡಿ ಯಾರಿಗಾದರೂ ಬೇಸರ ಬರುತ್ತದೆ. ಆಗಾಗ ಬೇರೆ ರುಚಿ ನೋಡುತ್ತಿದ್ದರೆ ಆಗ ಹೆಂಡತಿಯನ್ನು ಕಂಡರೆ ದ್ವೇಷ ಬರುವುದಿಲ್ಲ. ಮದುವೆ ಆಗಿರಲಿ ಆಗಿಲ್ಲದೆ ಇರಲಿ ನನ್ನ-ನಿನ್ನಂತಹ ಕಟ್ಟು ಮಸ್ತಾಗಿರುವವರಿಗೆ ಹೊಸದನ್ನು ಹುಡುಕಿಕೊಂಡು ಹೋಗುವುದರಲ್ಲೇ ಮಜಾ. ಹಳೆಯದು ಎಷ್ಟಾದರೂ

ಜಳಸಿದ್ದೆ ! ಮನುಷ್ಯನ ಸ್ವಭಾವವೇ ಹಾಗೆ ಅನ್ನು. ನಾನಾ ರೀತಿಯದನ್ನು ನೋಡಬೇಕೂಂತ ಮನಸ್ಸು ಹಾತೊರೆಯುತ್ತದೆ. ನನಗೊಂದು ಯೋಚನೆ ಹೊಳೆಯಿತು. ನಾಳೆ ಸಾಯಂಕಾಲ ನಾನು ನೀನೂ ಇಲ್ಲಿಗೆ ಬರುತ್ತೇವಲ್ಲ. ಆಗ ಅವಳನ್ನು ಈ ಡೋಣಿಯಲ್ಲಿ ಕೂಡಿಸಿಕೊಂಡು ಹೋಗೋಣ. ಇಬ್ಬರೂ ದಿಲ್ ಭರ್ ಮಜಾ ಮಾಡಬಹುದು. ಏನು ಹೇಳುತ್ತಿ" ಎಂದನು.

ಅವನ ಮಾತನ್ನು ಕೇಳಿ ಮಾರ್ಕ್ಕೋ ಹಿಗ್ಗಿ, "ಸರಿ ಸಾರ್" ಎಂದನು.

ಮಾರ್ಕ್ಕೋಗೆ ಎಲ್ಲಿಲ್ಲದ ಉತ್ಸಾಹ ಸಾಯಂಕಾಲದ ಹೊತ್ತಿಗೆ ಡೋಣಿಯಲ್ಲಿದ್ದ ಕೊಠಡಿಗೆ ರತ್ನಕಂಬಳಿಯನ್ನು ಹಾಸಿ, ಗೋಪ್ಯವಾಗಿರುವುದಕ್ಕೆ ಕಿಟಕಿಗಳಿಗೆಲ್ಲಾ ಪರೆದೆಗಳನ್ನು ಕಟ್ಟಿ, ಕೊಠಡಿಯನ್ನು ಸುಂದರವಾಗಿ ಅಲಂಕರಿಸಿದನು. ದೋಣಿ ಅದೇ ಸ್ಥಳದಲ್ಲಿ ಬಂದು ನಿಂತಿತು. ಆನ್ಟೋನಿಯೊ ದೋಣಿಯಿಂದ ಕೆಳಗಿಳಿದು ಹಿಂದಿನ ದಿನದಂತೆ ಅನೇಕ ಮನೆಗಳ ಮುಂಭಾಗಗಳನ್ನು ಪ್ರವೇಶಿಸಿ ಮಾರ್ಕ್ಕೊವಿನ ಮನೆಗೆ ಬಂದು, ಯುವತಿಯ ಮುಖಕ್ಕೆ ಬುರಕಿ ಹಾಕಿ, ದೋಣಿಯಿದ್ದೆಡೆ ಕೈಹಿಡಿದು ಕರೆತಂದನು. ಡೋಣಿಯು ಮುಂದಗತಿಯಲ್ಲಿ ಚಲಿಸುತ್ತಿದ್ದಂತೆ ಪ್ರೇಮಿಗಳಿಬ್ಬರೂ ಸಂತೋಷವಾಗಿ ಕಾಲವನ್ನು ಕಳೆದರು.

ಸ್ವಲ್ಪ ಹೊತ್ತಾದ ನಂತರ ಆಂಟೋನಿಯೋ ಹೊರಗೆ ಬಂದು, ಮಾರ್ಕ್ಕೊ ಭುಜದ ಮೇಲೆ ಕೈ ಇಟ್ಟು "ನೀನು ಒಳಗೆ ಹೋಗು. ಹೇಗಿದ್ದಾಳೆಗೊತ್ತಾ, ಗುಲಾಬ್ ಜಾಮೂರ್ ! ನಿನಗೋಸ್ಕರವೇ ಕಾದಿದ್ದಾಳೆ. ಒಂದು ವಿಷಯ. ಅವಳ ಮುಖವನ್ನು ನಾನೂ ನೋಡಿಲ್ಲ. ನೆನ್ನೆ ನಿನ್ನ ಹೆಂಡತಿ ವಿಷಯವಾಗಿ ಹೇಳುತ್ತಿದ್ದೆಯಲ್ಲ? ಇವಳೂ ಅಷ್ಟೇ ಚನ್ನಾಗಿದ್ದಾಳೆ. ಇನ್ನೂ ಮಹಾನಿಸ್ಸೀಮಳು. ನೋಡು! ಈಗಲೇ ಎಚ್ಚರಿಸುತ್ತೇನೆ, ಅವಳನ್ನು ಮಾತನಾಡಿಸಲು ಹೋಗಬೇಡ. ಮುಖವನ್ನು ನೋಡಲು ಬುರುಕಿ ಎತ್ತಿದೆಯೋ ನನ್ನ ನಿನ್ನ ಗತಿ ಮುಗೀತೂಂತನೇ ತಿಳಿದುಕೊ. ಅವಳು ನಮ್ಮಿಬ್ಬರನ್ನೂ ಪ್ರೀತಿಸುತ್ತಾಳೆ...." ಎಂದನು.

"ಇಬ್ಬರನ್ನೂ?"

ಆಂಟೋನಿಯೊ ಕಿವಿಯಲ್ಲಿ ಮೆಲ್ಲಗೆ

"ಅವಳು ಯಾರೂಂತ ತಿಳಿಯದಿದ್ದರೇ ಒಳ್ಳೆಯದು. ಅವಳು ಡಾಗೆ (ವೆನಿಸ್ಸಿನ ಆಗರ್ಭ ಶ್ರೀಮಂತ ನಗರಪಿತೃಗಳಲ್ಲಿ ಒಬ್ಬ) ಮಗಳು. ಅವಳಪ್ಪ ನಿಗೆ ತಿಳಿದು ಕೋಪ ಬಂದರೆ ಏನಾಗುತ್ತದೆ ನಮ್ಮಗತೀಂತ ಹೇಳಲೇ ಬೇಕಾಗಿಲ್ಲ. ಅಂಥಾ ಕೆಲಸವನ್ನು ಮಾತ್ರ ಮಾಡಬೇಡ. ತಿಳಿಯಿತಾ? ಬೇಗ ಕೆಲಸ ಮುಗಿಸಿಕೊಂಡು ಬಾ."

ಅಂಜುತ್ತಾ, ಹೆದರುತ್ತಾ ಮಾರ್ಕೊ ಒಳಗೆ ಹೋಗಿ ಐದೇ ನಿಮಿಷ ಗಳಲ್ಲಿ ಹಿಂತಿರುಗಿ ಬಂದು "ಕ್ಯಾಪ್ಟರ್ ಸಾರ್! ಫಸ್ಟ್‌ಕ್ಲಾಸ್! ನನ್ನ ಹೆಂಡತಿಯ ಹಾಗೇ ಇರೋದು ಮಾತ್ರವಲ್ಲ, ಅವಳನ್ನೂ ಮೀರಿಸುತ್ತಾಳೆ.... ನೀವು ಮಾಡಿದ ಉಪಕಾರಕ್ಕೆ...." ಎಂದನು.

ಆನ್ಟೋನಿಯೋ "ಛೇ! ಛೇ! ಇದೇನು ಮಹಾ! ಏನೂ ಬೇಡ" ಎಂದನು.

"ನನ್ನ ಮನಸ್ಸು ಕೇಳೊಲ್ಲ. ಖಂಡಿತವಾಗಿ ನಿಮಗೆ ಏನಾದರೂ ಕೊಟ್ಟೇ ಕೊಡಬೇಕು. ಆಗಲೇ ನನ್ನ ಮನಸ್ಸಿಗೂ ಸಮಾಧಾನ. ಅವಳು ಸಾಧಾರಣ ಹುಡಗೀನಾ? ವೆನಿಸ್ಸಿನ ಶ್ರೀಮಂತ ಕುಲೀನ ವಂಶ ದವಳು. ಅಂಥಹವಳನ್ನ....

"ಹಾಗಾದರೆ ಬರುವ ಶನಿವಾರ ನನ್ನ ಸ್ನೇಹಿತರುಗಳಿಗೆ ಭೋಜನ ಸತ್ಕಾರ ಏರ್ಪಡಿಸುವುದಾಗಿ ಮಾತುಕೊಟ್ಟಿದ್ದೇನೆ. ಈಗ ನನ್ನ ಹತ್ತಿರ ದುಡ್ಡಿಲ್ಲ. ಏನು ಮಾಡಲೀಂತ ಯೋಚನೆಯಾಗಿತ್ತು. ನೀನು ಸಾಲ ಕೊಟ್ಟಿ ದ್ದರೆ...."

"ಸಾಲ! ಇದೇನು ಸಾರ್ ಹೀಗೆ ಹೇಳುತ್ತೀರಿ ನಿಮಗೆ ಸಾಲನಾ? ಅವತ್ತಿನ ಖರ್ಚೆಲ್ಲಾ ನನ್ನದೇಂತ ತಿಳಿದು ಕೊಳ್ಳಿ....ಬರುವ ಶನಿವಾರ ನೀವೂ ನಿಮ್ಮ ಸ್ನೇಹಿತರು ಎಲ್ಲರೂ ನಾಲೆ ಪಕ್ಕದಲ್ಲಿರುವ ಹೊಟೇಲಿನಲ್ಲಿ ಊಟಕ್ಕೆ ಖಂಡಿತವಾಗಿ ಬನ್ನಿ....ಮರೆಯಬೇಡಿ....'



# ನೀಲ ವರ್ಣದ ರಾಜದಂಡ

## ಸ್ಪೈನಿನ ಜಾನಪದ ಕಥೆ

ಒಂದಾನೊಂದು ಕಾಲದಲ್ಲಿ ಒಬ್ಬ ರಾಜನಿದ್ದನು. ಅವನು ಬುದ್ಧಿವಂತಳಾದವಳನ್ನೇ ಮದುವೆಯಾಗುತ್ತೇನೆಂದು ಪ್ರತಿಜ್ಞೆ ಮಾಡಿದನು. ದೂರ ದೂರ ದೇಶಗಳಲ್ಲೆಲ್ಲಾ ಹುಡುಕಿದನು. ಯಾರೂ ಸಿಕ್ಕದೆ ಕಡೆಗೆ ಮದುವೆಯಾಗುವ ಯೋಚನೆಯನ್ನೂ ಬಿಟ್ಟು ಬಿಟ್ಟಿದ್ದನು. ಹೀಗಿರುವಾಗ ಒಂದು ದಿವಸ ರಸ್ತೆಯಲ್ಲಿ ಹೋಗುತ್ತಿರಬೇಕಾದರೆ, ಸುಂದರಳಾದ ಹುಡುಗಿಯೊಬ್ಬಳು ಮಹಡಿ ಮೇಲಿನ ವರಾಂಡದಲ್ಲಿದ್ದ ರೋಜಗಿಡಗಳಿಗೆ ನೀರು ಹಾಕುತ್ತಿದ್ದುದನ್ನು ನೋಡಿದನು. ಕುದುರೆಯನ್ನು ನಿಲ್ಲಿಸಿ

ರೋಜಾಕ್ಕೆ ನೀರೆರೆಯುವ ಸೊಬಗಿನ ಗಿಣಿಯೇ
ರೋಜಾಕ್ಕೆ ರೇಕುಗಳೆಷ್ಟು ಅರುಹುವೆಯಾ ?

ಹುಡುಗಿಯ ಹೆಸರು ಮಾರ್‌ಕ್ವಿಲ. ರಾಜನು ಈ ರೀತಿ ಒಗಟಿ ಕೇಳಿದಾಂತ ಹೆದರಲಿಲ್ಲ. ಚಟ್ಟೆಂದು

ಲೇಖನಿಯ ಚಾಲಿಸುವವನೇ ಮಸಿಯಲಿ ಬರಿಯುವನೇ ?
ಹೇಳು, ಬಾನಿನಲಿ ಮಿರಗುವ ನಕ್ಷತ್ರಗಳೆನಿತು ?

ರಾತ್ರಿ ಮಲಗಿದಾಗ ರಾಜನ ಕಣ್ಣು ಮುಂದೆ ಮಾರ್‌ಕ್ವಿಲಾ. ಅವಳಿಲ್ಲದೆ ತನ್ನ ಜೀವನವು ಬರಿದು ಎಂದು ನಿರ್ಧಾರಕ್ಕೆ ಬಂದನು. ಅವಳು ತನ್ನನ್ನು ಮದುವೆ ಆಗುವುದಿಲ್ಲವೆಂದು ಗೊತ್ತಿತ್ತು. ಅವಳಿಗಿಂತ ತಾನು ಚತುರನೆಂದು ತೋರಿಸುವವರೆಗೂ ಅವಳು ಮದುವೆಯಾಗಲಾರಳು ಎಂದು ಕೊಂಡು ಮಾರನೆಯ ದಿವಸ ಲೇಸು ಮಾರುವ ಮುದುಕಿಯ ಹಾಗೆ ವೇಷ ಹಾಕಿಕೊಂಡು ಮಾರ್‌ಕ್ವಿಲಾ ಮನೆಗೆ ಬಂದು ಬಾಗಿಲನ್ನು ತಟ್ಟಿದನು.

ಮಾರ್ಕ್ವಿಲಾ ಬಾಗಿಲನ್ನು ತೆರೆದಳು. ಮುದುಕಿಯು ತಂದಿದ್ದ ಲೇಸನ್ನು ನೋಡಿ "ಇದರ ಬೆಲೆ ಏನು" ಎಂದು ಕೇಳಿದಳು.

ವೇಷ ಬದಲಾಯಿಸಿಕೊಂಡು ಬಂದ ರಾಜನು "ಚಿನ್ನವನ್ನು ಕೊಟ್ಟರೂ ಈ ಲೇಸನ್ನು ಕೊಡುವುದಿಲ್ಲ. ನೋಡುವುದಕ್ಕೆ ನೀನು ಮುದ್ದಾಗಿದ್ದೀಯ! ನನ್ನ ಕೆನ್ನೆಗೊಂದು ಮುತ್ತು ಕೊಟ್ಟರೆ ಕೊಡುತ್ತೀನಮ್ಮಾ. ರತಿ ಹಾಗಿದ್ದೀ ನೀನು" ಎಂದನು. ಮಾರ್ಕ್ವಿಲಾ ನಗುತ್ತಾ ಕೆನ್ನೆಗಳೆರಡನ್ನೂ ಚುಂಬಿಸಿದಳು. ರಾಜನು ಲೇಸನ್ನು ಕೊಟ್ಟನು.

ಮರುದಿವಸ ರಾಜನು ಅವಳ ಮನೆಯ ಮುಂದೆ ಬಂದು, ರೋಜಾ ಗಿಡಗಳಿಗೆ ನೀರೆರೆಯುತ್ತಿದ್ದ ಸುಂದರಿಯನ್ನು ಕತ್ತೆತ್ತಿ ನೋಡಿ,

ಚಾರುವದನೆ ! ಹೇಳು ಲೇಸು ಮಾರಿದವಳ ಚುಂಬನವೆನಿತು ?
ಅಪ್ರಿಯವೋ ಮೇಣ್ ಪರಮ ಸುಖವ ತಂದಿತೋ ?

ಮಾರ್ಕ್ವಿಲಾಗೆ ವೇಷಮರಿಸಿ ಬಂದವನು ರಾಜನೇ ಎಂದು ಗೊತ್ತಾಗಿ ಒಳಗೆ ಓಡಿ ಹೋಗಿ ಬಾಗಿಲನ್ನು ಹಾಕಿಕೊಂಡಳು. ಮನೆಯ ಮುಂದೆ ಎಷ್ಟು ಠಳಾಯಿಸಿದರೂ ಅವಳು ಹೊರಗೇ ಬರಲಿಲ್ಲ. ಒಂದು ವಾರದಲ್ಲಿ ರಾಜನು ರೋಗಗ್ರಸ್ಥನಾಗಿ ಹಾಸಿಗೆ ಹಿಡಿದನು. ರೋಗದ ಕಾರಣವನ್ನು ತಿಳಿಯದೆ ನಾನಾ ದೇಶಗಳಿಂದ ಉತ್ತಮ ವೈದ್ಯರುಗಳನ್ನು ಕರೆ ಕಳುಹಿಸಲಾಗಿದೆಯೆಂದು ಸುದ್ದಿಯು ಹರಡಿತು. ಮಾರ್ಕ್ವಿಲಾ ಗ್ರೀಕ ವೈದ್ಯನಂತೆ ವೇಷವನ್ನು ಮರಿಸಿಕೊಂಡು ನೆಟ್ಟಗೆ ಅರಮನೆಗೆ ನಡೆದು, ತಾನು ರಾಜನ ಖಾಯಿಲೆಯನ್ನು ವಾಸಿಮಾಡುವುದಾಗಿ ಹೇಳಿ, ರಾಜನನ್ನು ಪರೀಕ್ಷಿಸುವಾಗ ಇತರರಾರೂ ಇರಕೂಡದೆಂದು ಅಜ್ಞಾಪಿಸಿದಳು. ಇಬ್ಬರೇ ಕೊಠಡಿಯಲ್ಲಿದ್ದಾಗ, ರಾಜನಿಗೆ ಸಂಪೂರ್ಣವಾಗಿ ಬಟ್ಟೆಗಳನ್ನು ಬಿಚ್ಚುವಂತೆ ಹೇಳಿ, ವೈದ್ಯನಂತೆ ಕೂಲಂಕೂಷವಾಗಿ ಪರೀಕ್ಷಿಸಿದಾಗ ಅವನಿಗೆ ಏನು ರೋಗವೆಂದು ತಿಳಿಯಿತು.

ಮಾರ್ಕ್ವಿಲಾ ಸ್ವಲ್ಪ ಹೊತ್ತು ಮೌನವಾಗಿದ್ದು, "ಬಹಳ ದಿನಗಳಿಂದ ಒಬ್ಬ ಹೆಂಗಸಿನ ಸಲುವಾಗಿ ನೀವು ರೋಗಗ್ರಸ್ಥರಾಗಿದ್ದೀರ" ಎಂದಳು.

ರಾಜನು ತಲೆಯನ್ನು ಅಲ್ಲಾಡಿಸಿ 'ಹೌದು' ನಿತ್ಯ ರೋಜಾಗಿಡಗಳಿಗೆ

ನೀರು ಹಾಕುವ ಸುಂದರಿಯೊಬ್ಬಳನ್ನು ಪ್ರೀತಿಸುತ್ತೇನೆ. ನನ್ನ ಖಾಯಿಲೆಗೆ ಮದ್ದೇನಾದರೂ ಇದೆಯಾ?" ಎಂದು ಕೇಳಿದನು.

ಮಾರ್ಕ್ವಿಲಾ ಇದೆಯೆಂದು ರಾಜದಂಡವನ್ನು ಕೈಲಿ ಹಿಡಿದು ಅದಕ್ಕೆ ನೀಲಿಯ ಬಣ್ಣವನ್ನು ಬಳಿದಳು. ಇದಕ್ಕೆ ಸಾಧಾರಣ ಜನರಲ್ಲಿ ಬೇರೆ ಬೇರೆ ಹೆಸರುಗಳಿವೆ. "ನಿತ್ಯ ಸ್ವಲ್ಪ ವ್ಯಾಯಾಮಮಾಡಿ, ಆಹಾರವನ್ನು ತೆಗೆದು ಕೊಂಡರೆ ಖಂಡಿತವಾಗಿ ಗುಣವಾಗುತ್ತದೆ" ಎಂದು ಆಶ್ವಾಸನೆಯನ್ನಿತ್ತಳು ಮಾರ್ಕ್ವಿಲಾ.

ಮಾರನೆಯ ದಿವಸವೇ ರಾಜನು ಕುದುರೆ ಮೇಲೆ ಏರುವಷ್ಟು ಶಕ್ತನಾಗಿ ನೆಟ್ಟಗೆ ಮಾರ್ಕ್ವಿಲಾ ಮನೆಯ ಮುಂದೆ ಬಂದನು. ಮಾರ್ಕ್ವಿಲಾ ರೋಜಾ ಗಿಡಗಳಿಗೆ ನೀರೆರೆಯುತ್ತಿದ್ದಳು.

ರಾಜನು ನಗುತ್ತಾ,

ಚಾರುವದನೆ ಹೇಳು ಲೇಸುಮಾರಿವಳ ಚುಂಬನವೆನಿತು?<br>
ಅಪ್ರಿಯವೋ, ಮೇಣ್ ಪರಮ ಸುಖವ ತಂದಿತೋ?

ಎಂದು ಒಗಟೆಯನ್ನು ಪುನಃ ಕೇಳಿದನು.

ಕಿರೀಟವೂ ಇದೆ, ರಾಜದಂಡವೂ ಇದೆ ದೊರೆಗೆ<br>
ಥಳಥಳಿಸುವುದು ಸುವರ್ಣಮುಕುಟ ಕಾಂತಿಯುತವದು<br>
ನೀಲರಾಜದಂಡ.

ರಾಜನಿಗೆ ವೈದ್ಯನಾರೆಂದು ಅರ್ಥವಾಯಿತು. ಹುಡುಗಿಯು ಮಹಾ ಚದುರೆಯೆಂದು ತಲೆ ತೂಗಿ, ಜೇಬಿನಿಂದ ಚಿನ್ನದ ಬಳೆಯನ್ನು ತೆಗೆದು, "ಇದರಲ್ಲಿ ಬರೆದಿರುವುದೇನಿದೆಯೋ ಓದು" ಎಂದನು.

ಮಹಾ ಚದುರೆ, ಭೀರು ವೈದ್ಯಳಿಗಿರುವುದೊಂದೇ ದಾರಿ<br>
ರೋಗಿಯ ಕೈ ಹಿಡಿದು ಬಾಯ ಮುಚ್ಚಿಸು ಮನವೊಲಿದು.

ಒಬ್ಬರನ್ನೊಬ್ಬರು ನೋಡಿ ನಸು ನಕ್ಕರು. ರಾಜ ಮತ್ತು ಮಾರ್ಕ್ವಿಲಾ ಮದುವೆಯಾಗಿ ಸುಖವಾಗಿದ್ದರು.



# ವಾದ್ಯದ ಪೆಟ್ಟಿಗೆಯಲ್ಲಿ ಹೆಂಡತಿ!

ಬರೆದವರು : **ಆಂಟೋನ್ ಚೆಕೋವ್**

ಸಂಗೀತಗಾರ ಸ್ಮಿಚಿಕೋವ್, ಹಳ್ಳಿಯಲ್ಲಿದ್ದ. ರಾಜಕುಮಾರ ಬಿಬ್ಲೋವಿನ ವಿಲ್ಲಾ (ಸೌಧ-ಬಂಗಲೆ) ವಿನ ಕಡೆ ನಡೆದು ಹೋಗುತ್ತಿದ್ದನು. ಆವತ್ತು ರಾತ್ರಿ ಬಿಬ್ಲೋವ್ ಮನೆಯಲ್ಲಿ ಮಗಳ ಮದುವೆಗಾಗಿ ನಿಶ್ಚಿತಾರ್ಥ ಸಮಾರಂಭ. ನೃತ್ಯ, ಸಂಗೀತ, ಭಾರಿ ಭೋಜನ ಎಲ್ಲವನ್ನೂ ಏರ್ಪಡಿಸಿದ್ದರು. ಸ್ಮಿಚಿಕೋವನು ಬೆನ್ನ ಮೇಲೊಂದು ಡಬಲ್ ಬೇಸ್ (ಪಿಟೀಲಿನಂತಿರುವ ದೊಡ್ಡ ವಾದ್ಯ) ಚರ್ಮದ ಪೆಟ್ಟಿಗೆಯನ್ನು ಹೊತ್ತಿದ್ದನು. ರಸ್ತೆಯ ಪಕ್ಕದಲ್ಲಿ ಶೀತಲವಾದ ನದಿಯು ಗಂಭೀರವಾಗಿ ಹರಿಯುತ್ತಿತ್ತು.

ಸ್ನಾನವನ್ನೇಕೆ ಮಾಡಬಾರದು ಎಂದು ಅವನ ಮನಸ್ಸಿಗೆ ಬಂದಿತು. ಡಬಲ್ ಬೇಸ್ ಪೆಟ್ಟಿಗೆಯನ್ನು ಕೆಳಗಿರಿಸಿ, ಬಟ್ಟೆಗಳನ್ನು ಬಿಚ್ಚಿ ನೀರಿನಲ್ಲಿ ಧುಮುಕಿದನು. ನೀರು ತಣ್ಣಗೆ ಆಹ್ಲಾದಕರವಾಗಿತ್ತು. ನೂರು ಮಾರು ಈಜುತ್ತಾ ಹೋದನು ಹತ್ತಿರದಲ್ಲೇ ಸುಂದರಿಯೊಬ್ಬಳು ಮೀನು ಹಿಡಿಯುತ್ತಾ ಕುಳಿತಿದ್ದಳು. ಅವಳನ್ನು ನೋಡುತ್ತಿದ್ದಂತೆ ಸ್ಮೃತಿ ಪಥದಲ್ಲಿ ಕಳೆದ ದಿನಗಳ ಚಿತ್ರಗಳು, ತನ್ನ ಬಾಲ್ಯ, ಬಾಳಿನ ಗೆಳೆಯರು, ಯೌವ್ವನ ಮುಟ್ಟಿದಂತೆ ಪ್ರೇಮವು ಅಂಕುರಿಸಿದ್ದು, ತಾನು ಪುನಃ ಹೆಂಗಸನ್ನು ಪ್ರೀತಿಸುವುದೂ ಇಲ್ಲ, ನಂಬುವುದೂ ಇಲ್ಲವೆಂದು ಮಾಡಿದ ಪ್ರತಿಜ್ಞೆ, (ಅವನ ಹೆಂಡತಿ ಓಡಿಹೋಗಿದ್ದಳು.) ಸೇಡು ತೀರಿಸಿ ಕೊಳ್ಳಲು, ಮತ್ತು ಮನಸ್ಸಿನಲ್ಲುಂಟಾದ ಆಂದೋಳನವನ್ನು ಮರೆಯಲು ಲಂಪಟಜೀವನವನ್ನು ನಡೆಸುತ್ತಿದ್ದುದು ಎಲ್ಲವೂ ಸ್ಮೃತಿ ಪಥದಲ್ಲಿ ಸರಿದುವು.

ಬಾಳೆಂದರೇನು? ಬಾಳಿನಲ್ಲಿ ಏನಾದರೊಂದು ಅರ್ಥವಿದೆಯೇ? ಏತಕ್ಕಾಗಿ ಬದುಕಿದ್ದೇವೆ? ಜೀವಸೃಷ್ಟಿಯು ಎತ್ತ ಕಡೆ ಧಾವಿಸುತ್ತಿದೆ?

ಇವೆಲ್ಲಾ ಬರಿಯ ಕನಸಲ್ಲವೇ ಮಿಥ್ಯ ...ಮಿಥ್ಯ ... ಮುಂತಾದ ಹಲವಾರು ಪ್ರಶ್ನೆಗಳು ಅವನ ಮನಸ್ಸನ್ನು ಕಾಡಿದ್ದವು.

ಕುಳಿತ್ತಿದ್ದ ಬಾಲೆಯನ್ನು ತುಂಬುಗಣ್ಣಿನಿಂದ ನೋಡುತ್ತ ನಿಂತನು. ಅವಳು ನಿದ್ರಿಸುತ್ತಿದ್ದಳು. (ತಿಳಿದು ಕೊಳ್ಳಲು ಹೆಚ್ಚು ಕಾಲ ಬೇಕಾಗಲಿಲ್ಲ) ನಿಟ್ಟುಸಿರು ಬಿಟ್ಟು, ಹೊತ್ತಾಯಿತೆಂದು ಹಿಂತಿರುಗಿದನು.

ಹಿಂತಿರುಗಿ ಹೋಗುತ್ತಿದ್ದಂತೆ ಪುನಃ ಸುಂದರ ಬಾಲೆಯನ್ನು ನೋಡಬೇಕೆಂದು ಬಯಕೆಯಾಯಿತು. ಯಾವನೋ ಪುರುಷನು ಅವಳನ್ನು ಕಂಡು ಮೆಚ್ಚಿದ್ದಾನೆಂದು ಎದ್ದ ಮೇಲೆ ತಿಳಿದುಕೊಳ್ಳಲೆಂದು ದಂಡೆಯ ಮೇಲೆ ಏರಿ, ಅಲ್ಲೇ ಬಿಟ್ಟಿದ್ದ ಕಾಡು ಹೂಗಳನ್ನು ಕಿತ್ತು ಗೊಂಚಲು ಮಾಡಿ ಮೀನಿನ ಗಾಳಕ್ಕೆ ಸಿಕ್ಕಿಸಿ ಅಲ್ಲಿಂದ ಹೊರಟನು.

ಅವನ ಪ್ರಣಯವು ಅಲ್ಲಿಗೇ ಅವಸಾನವಾಗಲಿಲ್ಲ ಕತೆಗಾರನ ಕಲ್ಪನೆಗೂ ಮೀರಿ ಘಟನೆಗಳು ಕ್ಷಿಪ್ರದಲ್ಲೇ ನಡೆದವು. ಮೀನು ಹಿಡಿಯಲು ಕುಳಿತ ಕನ್ಯೆಯ ಜೀವನವು ಬೇರೊಂದು ದಾರಿಯನ್ನು ಹಿಡಿಯಿತು.

ಸ್ಮಿಚಿಕೋವ್ ಹಿಂತಿರುಗಿ ಸ್ವಸ್ಥಾನಕ್ಕೆ ಬಂದು ನೋಡಿದಾಗ ಬಿಚ್ಚಿಟ್ಟಿದ್ದ ಬಟ್ಟೆಗಳೆಲ್ಲಾ ಮಾಯವಾಗಿದ್ದವು. ಕೇವಲ ಡಬಲ್ ಬೇಸ್ ಪೆಟ್ಟಿಗೆ ಮತ್ತು ಟಾಪ್ ಹ್ಯಾಟ್ (ಎತ್ತರವಾದ ಟೋಪಿ) ಮಾತ್ರ ಇದ್ದವು. ಕಳ್ಳರಾರೋ ಅಪಹರಿಸಿಕೊಂಡು ಹೋಗಿದ್ದರು. 'ಬಟ್ಟೆ ಹೋದರೆ ಚಿಂತೆಯಿಲ್ಲ. ಅದು ನಶ್ವರ. ಸ್ವಲ್ಪ ದಿನಗಳಾದ ಮೇಲೆ ಜೀರ್ಣವಾಗುತ್ತಿದ್ದವು. ಷರಾಯಿಯ ಜೇಬಿನಲ್ಲಿ ರಾಳ (ಡಬಲ್ ಬೇಸ್ ನಾರಿಗೆ ಹಚ್ಚುವ ವಸ್ತು) ಕೂಡ ಕದ್ದು ಹೋಗಿದ್ದಾರೆ. ಬೆತ್ತಲೆಯಾಗಿ ಅವರ ಮನೆಗೆ ಹೋಗುವುದಾದರೂ ಹೇಗೆ? ಅಲ್ಲಿಗೆ ಅನೇಕರು ಬಂದಿರುತ್ತಾರೆ' ಎಂದು ಡಬಲ್ ಬೇಸಿನ ಪೆಟ್ಟಿಗೆಯ ಮೇಲೆ ಯೋಚಿಸುತ್ತಾ ಕುಳಿತನು.

ಯೋಚಿಸುತ್ತಿದ್ದಂತೆ ಹತ್ತಿರದಲ್ಲೇ ಸೇತುವೆಯೊಂದು ಇರುವುದು ಜ್ಞಾಪಕಕ್ಕೆ ಬಂದಿತು. ರಾತ್ರಿಯನ್ನು ಅಲ್ಲೇ ಕಳೆದು ಬೆಳಗ್ಗೆ ಹತ್ತಿರದಲ್ಲಿರುವ ಮನೆಗೆ ಹೋದರಾಯಿತೆಂದುಕೊಂಡು, ಎದ್ದು ತಲೆಗೆ ಟೋಪಿಯನ್ನು ಧರಿಸಿ, ಬೆನ್ನಿನ ಮೇಲೆ ಪೆಟ್ಟಿಗೆಯನ್ನು ಹೊತ್ತು, ಸೇತುವೆಯ ಕಡೆ ಬೆತ್ತಲೆ

ಯಾಗಿಯೇ ನಡೆದು ಹೋಗುತ್ತಿರುವಾಗ ಆವನು ಪ್ರಾಚೀನ ದೇವಪುರುಷ ನಂತೆ ಕಾಣಿಸುತ್ತಿದ್ದನು.

ಓದುಗರೆ ! ಕಥಾನಾಯಕನು ಸೇತುವೆಯ ಕೆಳಗೆ ಕುಳಿತು ಯೋಚಿಸುತ್ತಿರುವ ಆವನನ್ನು ಅಲ್ಲಿಯೇ ಬಿಟ್ಟು ಮೀನು ಹಿಡಿಯಲು ಕುಳಿತಿದ್ದ ಮನಮೋಹಕ ಸುಂದರಿಯು ಏನು ಮಾಡಿದಳೆಂದು ನೋಡೋಣ. ಅವಳು ಸ್ವಲ್ಪ ಹೊತ್ತಾಗುತ್ತಲೂ ಎಚ್ಚೆತ್ತಳು. ಕೋಲಿಗೆ ಕಟ್ಟಿದ್ದ ದಾರವು ನೀರಿನ ಒಳಗೆ ಹೋಗಿದ್ದನ್ನು ನೋಡಿ ಅಲ್ಲಾಡಿಸಿದಳು. ಮೇಲೆತ್ತಲು ಹೋದಾಗ ಕೆಳಗೇ ಸಿಕ್ಕಿಹಾಕಿಕೊಂಡಿತು. ತರುಣಿಯು ಪುಳಕಿತಳಾದಳು. ಭಾರೀ ಮೀನೆ ಸಿಕ್ಕಿಬಿದ್ದಿರಬೇಕು. ಈ ರೀತಿ ದಿನವೆಲ್ಲಾ ಎಳೆದರೂ ಪ್ರಯೋಜನವಿಲ್ಲವೆಂದು ಉಟ್ಟಿದ್ದ ಲಂಗ, ಬ್ಲೌಸ್, ಬೂಡ್ಸು ಎಲ್ಲವನ್ನೂ ಬಿಚ್ಚಿ ನೀರಿನಲ್ಲಿ ಇಳಿದಳು. ಐದು ನಿಮಿಷಗಳು ನೀರಿನಲ್ಲೇ ದಾರವನ್ನು ಹಿಡಿದು ಎಳೆದಾಗ ಕೈಗೆ ಭಾರವಾದ ಹೂವಿನ ಬೊಂತೆ ಸಿಕ್ಕಿತು. ಸಂತೋಷದಿಂದ ಅದನ್ನು ಹಿಡಿದು ಮೇಲಕ್ಕೆ ಬಂದಳು. ದುರದೃಷ್ಟಕ್ಕೆ ಅವಳ ಬಟ್ಟೆಗಳನ್ನೆಲ್ಲಾ ಯಾರೋ ಎತ್ತಿಕೊಂಡು ಹೋಗಿದ್ದರು. ಕೇವಲ ಮೀನು ಹಿಡಿಯಲು ಗಾಳಕ್ಕೆ ಸಿಕ್ಕಿಸುವ ಹುಳಗಳ ಪಾತ್ರೆಯು ಮಾತ್ರ ಇತ್ತು.

ಯುವತಿಯು ಅಲ್ಲೇ ಆಳುತ್ತಾ ಕುಳಿತಳು. ಅಶ್ರುಧಾರೆಯು ಒಂದೇ ಸಮನಾಗಿ ತಡೆಯದೆ ಕಪೋಲಗಳ ಮೇಲೆ ಹರಿಯಿತು. ಕತ್ತಲಾಗುವವರೆಗೂ ಕಾದಿದ್ದರೆ ಆಗಾಫಿಯಾ ಮನೆಯವರೆಗೂ ನಡೆದುಹೋಗಿ ಅಲ್ಲಿಂದ ಬಟ್ಟೆಗಳನ್ನು ತರಿಸಿಕೊಂಡರಾಯಿತೆಂದು ಎತ್ತರವಾದ ಹುಲ್ಲುಗಳ ನಡುವೆ ಬಗ್ಗಿ ಸೇತುವೆಯ ಕಡೆ ನಡೆದಳು. ತಲೆಗೆ ಟೋಪಿಯನ್ನು ಧರಿಸಿ ಬೆತ್ತಲೆಯಾಗಿ ಕುಳಿತಿದ್ದ ವಿಶಾಲವಾದ ಎದೆಯುಳ್ಳ ಪುರುಷನನ್ನು ನೋಡಿ ಮೂರ್ಛೆಯೇ ಹೋದಳು.

ಸ್ಮಿಚಿಕೋವಿಗೂ ಅವಳನ್ನು ಕಂಡು ಭಯವೇ ಆಯಿತು. ಯಾವುದೋ ಜಲದೇವತೆಯೆಂದೇ ಬಗೆದನು.

ಈ ನದಿಯಲ್ಲಿ ಜಲದೇವತೆಯಿದೆಯೇ ? ನನ್ನನ್ನು ಮುಗ್ಧಗೊಳಿಸಲು ಸ್ತ್ರೀರೂಪದಲ್ಲಿ ಬಂದಿರುವಳೇ ? ಅಥವ ನಿಜವಾಗಿಯೂ ಹೆಂಗಸಿರಬಹುದೇ?

ಸೇತುವೆಯ ಕೆಳಗೆ ಈ ಪರಿಸ್ಥಿತಿಯಲ್ಲಿ ಏಕೆ ಬಂದಿದ್ದಾಳೆ ? ಜಲದೇವತೆಗಳು ಸ್ತ್ರೀರೂಪವನ್ನು ಧರಿಸುವರೆಂದು ಕೇಳಿದ್ದೇನೆ, ಎಂದು ಮನಸ್ಸಿನಲ್ಲಿ ಸ್ಮಿಚಿಕೋವ್ ತರ್ಕಮಾಡುತ್ತಿದ್ದಂತೆ ಯುವತಿಯು ಎಚ್ಚೆತ್ತು,

"ದಯವಿಟ್ಟು ನನ್ನನ್ನು ಕೊಲ್ಲಬೇಡ. ನಾನು ಪ್ರಿನ್ಸ್ ಬಿಬುಲೋವರ ಮಗಳು. ನಿನಗೆ ಕೇಳಿದಷ್ಟು ಹಣವನ್ನು ಕೊಡುತ್ತೇನೆ. ಕಳ್ಳರು ದಡದ ಮೇಲೆ ಇಟ್ಟಿದ್ದ ಬಟ್ಟೆಗಳನ್ನೆಲ್ಲಾ ಎತ್ತಿಕ್ಕೊಂಡು ಹೋಗಿದ್ದಾರೆ ಬೂಡ್ಸ್ ಕೂಡ ಬಿಟ್ಟಿಲ್ಲ" ಎಂದಳು.

"ಅಮ್ಮಾವರೇ ಹೆದರಬೇಡಿ, ನನ್ನ ಅವಸ್ಥೆಯೂ ನಿಮ್ಮಂತೆಯೇ ಆಗಿದೆ. ನನ್ನ ಬಟ್ಟೆಗಳನ್ನೆಲ್ಲಾ ಕಳ್ಳರು ಎತ್ತಿಕೊಂಡು ಹೋಗಿದ್ದಾರೆ. ಅಷ್ಟೇ ಅಲ್ಲ ಷರಾಯಿ ಜೇಬಿನಲ್ಲಿಟ್ಟಿದ್ದ ರೋಸಿ (ರಾಳ) ಕೂಡ ಹೋಯಿತು."

ಸಾಧಾರಣವಾಗಿ ಡಬಲ್ ಬೇಸ್ ಮತ್ತು ಟ್ರಾಂಬೋರ್ನ್ ಬಾರಿಸುವವರಿಗೆ ತಾಳ್ಮೆಯಿರುವುದಿಲ್ಲ. ಆದರೆ ಸ್ಮಿಚಿಕೋವ್ ಎಲ್ಲರಂತಲ್ಲ. 'ನಾನು ಹೀಗಿರುವುದನ್ನು ನೋಡಿದರೆ ನಿಮಗೆ ನಾಚಿಕೆಯಾಗಬಹುದು. ಏನು ಮಾಡಲಿ, ಇಲ್ಲಿಂದ ನಾನು ಹೋಗುವ ಹಾಗೆಯೇ ಇಲ್ಲ. ನಾನು ಹೇಳಿದ ಹಾಗೆ ಮಾಡುತ್ತೀರಾ ? ಈ ಡಬಲ್ ಪೆಟ್ಟಿಗೆಯಲ್ಲಿ ನೀವು ನನ್ನನ್ನು ನೋಡುವ ಹಾಗಿರುವುದಿಲ್ಲ," ಎಂದು ಡಬಲ್ ಬೇಸಿನ ಪೆಟ್ಟಿಗೆಯ ಮುಚ್ಚಳವನ್ನು ತೆಗೆದು, ವಾದ್ಯವನ್ನು ಹೊರಗಿಟ್ಟು, "ಯೋಚನೆಮಾಡದೆ ಇದರಲ್ಲಿ ಮುದರಿಕೊಂಡು ಆರಾಮವಾಗಿ ಮಲಗಿ ಕೊಳ್ಳಿ" ಎಂದನು. ತರುಣಿಯು ಪೆಟ್ಟಿಗೆಯಲ್ಲಿ ಮಲಗಿದಳು. ಸ್ಮಿಚಿಕೋವ್ ಮುಚ್ಚಳವನ್ನು ಮುಚ್ಚಿ ಭದ್ರವಾಗಿ ಬೆಲ್ಟನ್ನು ಹಾಕಿ,

''ನೋಡಿದಿರಾ ಈಗ ನಾನು ನಿಮಗೆ ಕಾಣಿಸುವುದಿಲ್ಲ. ಕತ್ತಲಾಗುವವರೆಗೂ ಮಲಗಿರಿ, ಆಮೇಲೆ ನಿಮ್ಮನ್ನು ತಮ್ಮ ತಂದೆ–ತಾಯಿಗಳ ಮನೆಗೆ ಕರೆದುಕೊಂಡು ಹೋಗುತ್ತೇನೆ. ಹಿಂತಿರುಗಿ ಬಂದು ನನ್ನ ಡಬಲ್ ಬೇಸ್ ತೆಗೆದುಕೊಂಡು ಹೋದರಾಯಿತು" ಎಂದು ಆಶ್ವಾಸನವಿತ್ತ ಸ್ಮಿಚಿಕೋವ್.

ಕತ್ತಲಾಗುತ್ತಲೂ ಪೆಟ್ಟಿಗೆಯನ್ನು ಹೊತ್ತು ಬಿಬುಲೋವ್ ವಿಲ್ಲಾ

ಕಡೆ ನಡೆದನು. ನಡೆಯುತ್ತಿರುವಾಗ ಮಧ್ಯದಾರಿಯಲ್ಲಿ ಯಾವುದಾದರೂ ಮನೆ ಸಿಕ್ಕಿದಲ್ಲಿ ಬಟ್ಟೆಗಳನ್ನು ಎರವಾಗಿ ತೆಗೆದುಕೊಳ್ಳಬೇಕೆಂದುಕೊಂಡನು.

ರಾಜಕುಮಾರಿಯ ಮದುವೆಯ ನಿಶ್ಚಿತಾರ್ಥದ ಶುಭದಿವಸ ವಾದ್ಯವನ್ನು ನುಡಿಸಲು ಹೋಗುತ್ತಿರುವುದರಿಂದ ದೇವರು ಪ್ರಸನ್ನನಾಗಿ, ನನ್ನ ಪರಿಸ್ಥಿತಿಯನ್ನು ಅರಿತೇ ಈ ಸುಂದರಿಯನ್ನು ದಯಪಾಲಿಸಿರಬೇಕು ಎಂದು ಕೊಂಡನು.

ಕತ್ತಲಲ್ಲಿ ಯಾರೋ ಇಬ್ಬರು ನಡೆದು ಹೋಗುತ್ತಿದ್ದರು. ಅವರ ಕೈಯಲ್ಲಿ ಗಂಟುಗಳನ್ನು ಹಿಡಿದಿದ್ದರು. "ಅವರು ಕಳ್ಳರಿರಬಹುದೇ ? ಪ್ರಾಯಶಃ ನಮ್ಮ ಬಟ್ಟೆಗಳನ್ನೇ ತೆಗೆದುಕೊಂಡು ಹೋಗುತ್ತಿರಬೇಕು ಎಂದು ಕೊಂಡು ಪೆಟ್ಟಿಗೆಯನ್ನು ನೆಲದ ಮೇಲೆ ಇಟ್ಟು "ಕಳ್ಳರೇ ! ನಿಲ್ಲಿ ! ನಿಲ್ಲಿ! ಎಂದು ಅಟ್ಟಿಸಿಕೊಂಡು ಓಡಿದನು.

ಬೆತ್ತಲೆಯಾಗಿ ತಲೆಯ ಮೇಲೆ ಟೋಪಿಯನ್ನು ಇಟ್ಟು ಕೊಂಡು ಓಡಿ ಬರುತ್ತಿರುವ ಆಸಾಮಿಯನ್ನು ನೋಡಿ ಅವರು ನಾಗಾಲೋಟ ಕಿತ್ತರು. ತರುಣಿಗೆ ಕ್ಷೀಣವಾಗಿ ಕೇಳಿಸಿದ್ದು, "ಕಳ್ಳರೇ....ನಿಲ್ಲಿ" ಓಡಿಹೋಗುವ ಶಬ್ದ, ಅಷ್ಟೆ.

ಸ್ಮಿಚಿಕೋವ್ ಅವರನ್ನು ಹಿಡಿಯಲು ಹಳ್ಳ ಕೊಳ್ಳ, ಗದ್ದೆಗಳನ್ನು ದಾಟಿ ಒಂದೇ ಉಸಿರಿನಿಂದ ಅಟ್ಟಿಸಿಕೊಂಡು ಬಹು ದೂರ ಓಡಿದನು. ಈ ರೀತಿ ಓಡಿ ಹೋದ ಸ್ವಲ್ಪ ಹೊತ್ತಿನಲ್ಲಿ ಸ್ಮಿಚಿಕೋವನ ಸಂಗಡಿಗರಾದ ಕೊಳಲು ಬಾರಿಸುವ ಜುಕೋವ್ ಮತ್ತು ಕ್ಲಾರಿಯೋನೆಟ್ ಬಾರಿಸುವ ರಜಮಾಕ್ಯೆರ್ಕಿ ಇಬ್ಬರೂ ಅದೇ ರಸ್ತೆಯಲ್ಲಿ ನಡೆದು ಬಂದರು. ಕತ್ತಲಲ್ಲಿ ಇಬ್ಬರೂ ಡಬಲ್ ಬೇಸ್ ಪೆಟ್ಟಿಗೆಯನ್ನು ಎಡವಿದರು. ರಸ್ತೆಯಲ್ಲಿ ವಾದ್ಯವು ಬಿದ್ದಿರುವುದನ್ನು ಕಂಡು ಆಶ್ಚರ್ಯವಾಯಿತು.

ಜುಕೊವ್ "ಲೋ ಇದು ಸ್ಮಿಚಿಕೋವ್ ಡಬಲ್ ಬೇಸ್ ಕಣೋ ಇಲ್ಲಿ ಹೇಗೆ ಬಂತು ?" ಎಂದನು.

ರಜಮಾಕ್ಯೆರ್ಕೆ "ಎಲ್ಲೋ ಚನ್ನಾಗಿ ಕುಡಿದಿರಬೇಕು. ಅಥವ ಕಳ್ಳರು ಮೇಲೆ ಬಿದ್ದಿರಬೇಕು. ಹೇಗಾದರೂ ಆಗಲಿ ಇದು ಇಲ್ಲೇ ಇರುವುದು ಒಳ್ಳೆಯದಲ್ಲ. ತೆಗೆದುಕೊಂಡು ಹೋಗೋಣ" ಎಂದನು.

ಜುಕೋವ್ ಪೆಟ್ಟಿಗೆಯನ್ನು ಬೆನ್ನಿನ ಮೇಲೆ ಏರಿಸಿಕೊಂಡು ಸ್ವಲ್ಪ ದೂರ ಹೋಗುತ್ತಲೂ "ಹೆಣಭಾರವಾಗಿದೆ. ಇಷ್ಟು ಭಾರವಾಗಿರುವ ವಾದ್ಯವನ್ನು ಈ ಪ್ರಪಂಚದಲ್ಲಿರೋ ಐಶ್ವರ್ಯವನ್ನೆಲ್ಲಾ ಕೊಡುತ್ತೇನೆ ಎಂದರೂ ಬಾರಿಸುವುದಿಲ್ಲ" ಎಂದನು.

ಸಂಗೀತಗಾರರು ಬಿಬ್ಲೋವಿನ ವಿಲ್ಲಾವನ್ನು ತಲಪಿ, ಸಂಗೀತಗಾರರಿಗೆ ನಿಯಮಿತವಾದ ಸ್ಥಳದಲ್ಲಿ ಡಬಲ್ ಬೇಸನ್ನು ಇಟ್ಟು, ಕುಡಿಯಲು ಬಾರ್ ಕಡೆಗೆ ನಡೆದರು.

ಮಂದಿರದಂತೆ ವಿಶಾಲವಾದ ನಡುಮನೆಯಲ್ಲಿದ್ದ ತೂಗುದೀಪಗಳು, ಮತ್ತು ಇತರ ದೀಪಗಳನ್ನು ಹಚ್ಚಲಾಯಿತು. ಅತಿ ಸುಂದರನಾಗಿದ್ದ ಮದುವೆಯ ಗಂಡು ಲೆಕಿಚ್ ಮತ್ತು ಸೈನ್ಯ ಪಡೆಯ ಸಾಗಣಿಕೆಯ ಇಲಾಖೆಯಲ್ಲಿ ಕೆಲಸಮಾಡುತ್ತಿದ್ದ ಅಪೋಲೋವಿನಂತೆ ರೂಪವಂತನಾಗಿದ್ದ ಮಿತ್ರ, ಇಬ್ಬರೂ ನಡುಮನೆಗೆ ಬಂದು ಕೌಂಟ್ ಶಿಖಲೋವಿನೊಂದಿಗೆ ಮಾತನಾಡುತ್ತಾ ನಿಂತರು. ಅದೂ ಇದೂ ಮಾತನಾಡುತ್ತಿರುವಾಗ ಆರ್ಕೆಸ್ಟ್ರಾ ವಿಚಾರವೂ ಬಂದಿತು.

ಲೆಕಿಚ್ "ಕೌಂಟ್ ಶಿಖಲೋವ್! ಆರ್ಕೆಸ್ಟ್ರಾ ಅಂದರೆ ಜ್ಞಾಪಕಕ್ಕೆ ಬರುತ್ತದೆ. ವೆನಿಸ್ಸಿಗೆ ಹೋಗಿದ್ದಾಗ ಅಲ್ಲಿ ಒಬ್ಬ ಸಂಗೀತಗಾರನು ಪಿಟೀಲು ಎಷ್ಟು ಮಧುರವಾಗಿ ನುಡಿಸಬಹುದೋ ಅಷ್ಟೇ ಮಧುರವಾಗಿ ಡಬಲ್ ಬೇಸಿನಲ್ಲೂ ನುಡಿಸುತ್ತಿದ್ದ. ಕೇಳಿದಾಗ ಮೈ ಜುಂ ಅನ್ನುವಷ್ಟು ಸಂತೋಷವಾಯಿತು. ಅವನು ಸ್ಟ್ರಾವುಸ್‌ವಾಲ್ಟ್ಸ ಬಾರಿಸಿದ. ಅದನ್ನು ನೀವು ಕೇಳಬೇಕಾಗಿತ್ತು" ಎಂದನು.

"ಡಬಲ್ ಬೇಸಿನಲ್ಲಿ ಬಾರಿಸೋಣಾಂದರೆ ಏನು ? ನಂಬುವುದಕ್ಕೇ ಆಗುವುದಿಲ್ಲ!" ಎಂದನು ಕೌಂಟ್.

"ಖಂಡಿತವಾಗಿ, ನನಗೆ ಕೆಲವು ಹಾಡುಗಳನ್ನು ಬಾರಿಸಲು ಕಲಿಸಿಕೊಟ್ಟಿದ್ದಾನೆ. ಅದೂ ಲಿಸ್ಟರ್ ರ್‍ಯಾಪ್ಸೊಡಿ".

ನೀನು ಎಲ್ಲೋ ಗೇಲಿ ಮಾಡುತ್ತೀ ಅಷ್ಟೆ! ರ್‍ಯಾಪ್ಸೋಡಿ ಬಾರಿಸೋಣಾಂದರೆ ಏನು ?"

"ನಿಮಗೆ ನಂಬಿಕೆಯಿಲ್ಲವಾ? ಸುಳ್ಳೋ ನಿಜವೋ ಎಂದು ನಿಮಗೇ ಬಾರಿಸಿ ತೋರಿಸುತ್ತೇನೆ. ವಾದ್ಯಗಳು ಇಟ್ಟಿದ್ದಾರಲ್ಲಾ ಅಲ್ಲಿ ಹೋಗೋಣ ಬನ್ನಿ" ಎಂದ ಮದುವೆ ಗಂಡು.

ಮೂವರೂ ವಾದ್ಯಗಳಿಟ್ಟಿದ್ದ ಕಡೆ ನಡೆದು, ಡಬಲ್ ಬೇಸ್ ಪೆಟ್ಟಿಗೆಯ ಮುಚ್ಚಳವನ್ನು ತೆಗೆದು ನೋಡಿದಾಗ........

ಮುಂದೇನಾಯಿತು ಎಂಬುದನ್ನು ನೀವೇ ಊಹಿಸಿ ಕೊಳ್ಳಿ........

ಇತ್ತ ಸ್ಮಿಚಕೋವಿಗೇನಾಯಿತೋ ನೋಡೋಣ. ಓಡಿ ಓಡಿ ಸುಸ್ತಾಗಿ ಪೆಚ್ಚುಮೋರೆ ಹಾಕಿಕೊಂಡು ಪೆಟ್ಟಿಗೆಯಿದ್ದೆಡೆಗೆ ಹಿಂತಿರುಗಿ ಬಂದನು. ಪೆಟ್ಟಿಗೆಯೂ ನಾಪತ್ತೆಯಾಗಿತ್ತು. ರಸ್ತೆಯಲ್ಲಿ ಆ ಕಡೆ ಈ ಕಡೆ ಹತ್ತಾರು ಬಾರಿ ಸುತ್ತಿ ನೋಡಿದನು. ಎಲ್ಲೂ ಕಾಣಿಸಲಿಲ್ಲ. ಪೆಟ್ಟಿಗೆಯನ್ನು ಇಲ್ಲೇ ಇಟ್ಟಿದ್ದೆನೋ ಬೇರೆ ಇನ್ನೆಲ್ಲಾದರೂ ಇಟ್ಟಿದ್ದೆನೋ ಎಂದು ಮನಸ್ಸಿಗೆ ಅನುಮಾನ ಬಂದಾಗ ಮೈತಣ್ಣಗಾಯಿತು. ಯುವತಿಯು ಪೆಟ್ಟಿಗೆಯೊಳಗೆ ಉಸಿರು ಕಟ್ಟಿ ಸತ್ತು ಹೋಗಿದ್ದರೆ, 'ಕೊಲೆಗಾರ! ಕೊಲೆಗಾರ!' ಎಂದು ಕೊಂಡನು.

ರಾತ್ರಿಯೆಲ್ಲಾ ನಡೆದು ಸೇತುವೆಯನ್ನು ಸೇರಿ, ಬೆಳಗ್ಗೆ ಹುಡುಕಿದ ರಾಯಿತೆಂದು ಕೊಂಡನು.

ಬೆಳಗಾಯಿತು.

ರಾತ್ರಿಯೂ ಆಯಿತು.

ಅಲ್ಲಿಯೇ ಉಳಿದನು. ತಲೆಯಮೇಲೆ ಹಾಕಿಕೊಂಡಿದ್ದ ಟೋಪಿಯನ್ನೂ ತೆಗೆದು ಕೂದಲನ್ನು ಹಿಡಿದು ಎಳೆದುಕೊಂಡ. 'ಅವಳನ್ನು ಹುಡುಕಲೇ ಬೇಕು' ಎಂದು ಮನಸ್ಸು ಮಾಡಿಕೊಂಡನು.

ಇಂದಿಗೂ ಆ ಭಾಗದಲ್ಲಿರುವ ರೈತರು, ರಾತ್ರಿ ಒಬ್ಬನು ನಗ್ನನಾಗಿ ಉದ್ದವಾದ ಗಡ್ಡವನ್ನು ಬಿಟ್ಟುಕೊಂಡು ಓಡಾಡುತ್ತಿರುವುದನ್ನು ನೋಡಿರುವುದಾಗಿ ಹೇಳುತ್ತಾರೆ. ಆಗಾಗ ಡಬಲ್ ಬೇಸ್ ತಂತಿ ಮೀಟುವ ನಾದವೂ ಕೇಳಿ ಬರುತ್ತದಂತೆ.



# ರೂಪವತಿಯಾದ ಎಮ್ಮ ಎಮ್ಮಿಯೆ!

ಬರೆದವರು : **ಇನ್‌ಕಾರ್ಡ್**

ಛಾರ್ಲ್ಸ ವರ್ಣ ದೊರೆಯ ಮಗಳು ಎಮ್ಮ ಅತ್ಯಂತ ಸುಂದರಿ. ಅವಳಷ್ಟು ಮನಮೋಹಕ ರೂಪವಿದ್ದವರು ಮತ್ತಾರೂ ಇರಲಿಲ್ಲವೆಂದು ತಿಳಿದು ಬಂದಿದೆ. ಒಂದು ಸಲ ಅವಳಿಗೆ ಲ್ಯಾಟಿನ್ ಭಾಷೆಯನ್ನು ಕಲಿಯಬೇಕೆಂದು ಅಭಿಲಾಷೆಯಾಯಿತು. ತಂದೆಗೆ ತನ್ನ ಇಷ್ಟವನ್ನು ಹೇಳಿದಳು. ಅವಳಿಗೆ ಲ್ಯಾಟಿನ್ ಕಲಿಯಲು ಇಷ್ಟವಾಗಿದ್ದುದಕ್ಕಿಂತ ಲ್ಯಾಟಿನ್ ಕಲಿಸುವ ವಿದ್ವಾಂಸ ಎರ್ಬಿಹಾರ್ಡ್ಟ ಬೇಕಿತ್ತು. ತಂದೆಗೆ ಮಗಳನ್ನು ಕಂಡರೆ ಬಹಳ ಪ್ರೀತಿ. ಮಗಳಿಗೆ ಇದ್ದಕ್ಕಿದ್ದಂತೆ ಲ್ಯಾಟಿನ್ ಮೇಲೆ ಮೋಹ ಏಕೆ ಬಂದಿತೋ ಊಹಿಸಲು ಕೂಡ ಆಗಲಿಲ್ಲ. ತಂದೆಯ ವಾತ್ಸಲ್ಯ ಅಷ್ಟು. ಎರ್ಬಿಹಾರ್ಡ್ಟ ಇನ್ನೂ ಹರೆಯದ ಹುಡುಗ. ನೋಡಲು ಮನ್ಮಂಥನಂತೆಯೇ ಇದ್ದನು. ಪಾಠಪ್ರವಚನಗಳು ಪ್ರಾರಂಭವಾದುವು. ಯಾರ ಕಣ್ಣಿಗೂ ಬೀಳದ ಹಾಗೆ ಕದ್ದು ಪ್ರೇಮಿಗಳಿಬ್ಬರೂ ಆಗಾಗ ಆಲಂಗಿಸುತ್ತಿದ್ದರು, ಚುಂಬಿಸುತ್ತಿದ್ದರು. ಪ್ರೇಮವು ಅದಕ್ಕೂ ಮುಂದುವರಿಯಲು ಸಾಧ್ಯವಿರಲಿಲ್ಲ. ಅವರು ಪಾಠಪ್ರವಚನದಲ್ಲಿ ತೊಡಗಿದಾಗ ಹತ್ತಿರದಲ್ಲೇ ರಾಜನ ದಂಡನಾಯಕ ಅಥವ ರಾಣಿ, ಒಂದೊಂದು ಸಲ ಛಾರ್ಲ್ಸ ವರ್ಣನೇ ಇರುತ್ತಿದ್ದರು.

ಮನಸ್ಸಿದ್ದ ಕಡೆ ದಾರಿ ತಾನಾಗಿ ಕಾಣಿಸಿಕೊಳ್ಳುತ್ತದೆ. ಒಂದು ದಿವಸ ಎರ್ಬಿಹಾರ್ಡ್ಟ, ಶಿಷ್ಯಳ ಲಾಟಿನ್ ಪುಸ್ತಕವನ್ನು ತಿರುವಿಹಾಕುತ್ತಿರುವಾಗ ಒಂದು ಕಾಗದವು ಸಿಕ್ಕಿತು. ತೆಗೆದು ಓದಿಕೊಂಡನು. ಮಧ್ಯ ರಾತ್ರಿ ನನ್ನ ಕೋಣೆ ಹತ್ತಿರ ಬಂದು ಬಾಗಿಲನ್ನು ತಟ್ಟು. ಬಾಗಿಲು ತೆರೆಯುತ್ತದೆ' ಎಂದು ಬರೆದಿತ್ತು.

ಠಾಕೋಠಾಕ್ ಹನ್ನೆರಡು ಗಂಟೆ ಹೊಡೆಯುತ್ತಿದ್ದ ಹಾಗೆ ಎರ್ಬಿಹಾರ್ಡ್ಟ

ತಾನು ವಾಸವಾಗಿದ್ದ ಬ್ರಹ್ಮಚಾರಿ ನಿಲಯದಿಂದ ಸೀದಾ ಮೈದಾನವನ್ನು ದಾಟಿ ಅಂಗಳವನ್ನು ಹಾಯ್ದು, ಅರಮನೆಯನ್ನು ಪ್ರವೇಶಿಸಿ, ಮಹಡಿ ಮೆಟ್ಟಲುಗಳನ್ನು ಹತ್ತಿ, ನೆಟ್ಟಗೆ ರಾಜಕುಮಾರಿಯು ಮಲಗುವ ಕೊಠಡಿಯ ಮುಂದೆ ನಿಂತು ಬಾಗಿಲನ್ನು ತಟ್ಟಿದನು. ಬಾಗಿಲು ತೆರೆಯಿತು. ಅವನು ಒಳಗೆ ಪ್ರವೇಶಿಸಿದಂತೆ ಪುನಃ ಬಾಗಿಲ ಅಗುಳಿಯು ಭದ್ರವಾಗಿ ಹಾಕಿಕೊಂಡಿತು ಪ್ರಣಯಿಗಳು ಮೊದಲ ರಾತ್ರಿಯ ಸ್ವರ್ಗಸುಖವನ್ನು ಅನುಭವಿಸಲು ಕೊಠಡಿ ಯಲ್ಲೇ ಬಂಧಿತರಾದರು.

ಪ್ರೇಮಿಗಳಿಬ್ಬರೂ ಕರಡಿಯ ಚರ್ಮ ಹಾಸಿದ್ದ ಮೆತ್ತಗಿದ್ದ ಹಾಸಿಗೆಯಲ್ಲಿ, ಮತ್ತೊಂದು ಕರಡಿಯ ಚರ್ಮವನ್ನು ಹೊದ್ದು ಬೆಚ್ಚಗೆ ಒಬ್ಬರ ತೋಳ್ತೆಕ್ಕೆ ಯಲ್ಲೊಬ್ಬರು ರಾತ್ರಿಯನ್ನೆಲ್ಲಾ ಕನಸೋ ಎಂಬಂತೆ ಸಂತಸದಿಂದ ಕಳೆದರು. ಬಾಲ ಸೂರ್ಯನ ಕಿರಣಗಳು ಕಾಣಿಸಿಕೊಂಡಾಗ ಇಬ್ಬರೂ ಬೆಚ್ಚಗಿದ್ದ ಹಾಸಿಗೆಯಿಂದ ಎದ್ದು ಉಡುಪುಗಳನ್ನು ಹಾಕಿಕೊಂಡರು. ಹೊರಗಡೆ ಹಾಲಿನಂತೆ ಭೂಮಿಯಮೇಲೆ ಹಿಮವು ಹೆಪ್ಪ ಗಟ್ಟಿತ್ತು.

ಎರ್ಬಿಹಾರ್ಡ್ಗೆ ಏನು ಮಾಡಬೇಕೋ ತೋಚಲಿಲ್ಲ ಹೆದರಿಕೆಯಾಯಿತು ಹೆಪ್ಪುಗಟ್ಟಿದ್ದ ಮಂಜಿನಲ್ಲಿ ನಡೆದುಹೋದಲ್ಲಿ ಪಾದಗಳ ಗುರುತುಗಳು ಕಾಣಿಸಿ ಕೊಂಡು ಗುಟ್ಟು ರಟ್ಟಾಗುತ್ತದೆ. ಅಲ್ಲದೆ ದೊರೆಯು ತಾನು ಎದ್ದು ಹೊರಗೆ ಸುತ್ತಿ ಬರುವವರೆಗೂ ಯಾರೂ ಕೊಠಡಿಯಿಂದ ಹೊರಗೆ ಹೋಗಕೂಡದೆಂದು ಕಟ್ಟಪ್ಪಣೆ ಮಾಡಿದ್ದನು.

ಅವನ ಮನಸ್ಸಿನ ಓಟವನ್ನು ಅರಿತು ಎಮ್ಮ, "ಅಪ್ಪ ಏಳುವ ಸಮಯ. ಅವನಿಗೆ ತಿಳಿಯದಿರುವ ಹಾಗೆ ಮಾಡಲು ಒಂದೇ ದಾರಿ. ನೀನು ಮೇಲಮೆಟ್ಟಿಲ ಮೇಲೆ ನಿಂತು ನನ್ನ ಭುಜದ ಮೇಲೆ ಕುಳಿತುಕೋ. ನಿನ್ನನ್ನು ಹೊತ್ತು ಕೊಠಡಿಗೆ ಕರೆದುಕೊಂಡು ಹೋಗುತ್ತೇನೆ" ಎಂದಳು.

"ನಾನು ಎಷ್ಟು ಭಾರವಾಗಿದ್ದೇನೇಂತ ನಿನಗೆ ಗೊತ್ತಾ?"

"ನೀನು ಎಷ್ಟು ಭಾರವಾಗಿದ್ದೀಂತ ನೆನ್ನೆ ರಾತ್ರಿಯೇ ಗೊತ್ತಾಯಿತು" ಎಂದು ನಸು ನಗುತ್ತಾ ಉತ್ತರ ಕೊಟ್ಟಳು ಎಮ್ಮ.

ದೊರೆಯು ಹೊರಗಡೆ ಸುತ್ತಿಬರಲು ಹೊರಟನು. ಎಮ್ಮ ಮಲಗುವ ಕೋಣೆಯಿಂದ ಹೆಜ್ಜೆಗಳ ಗುರುತುಗಳು. ಆಶ್ಚರ್ಯವಾಯಿತು ಛಾರ್ಲಮಾನ ನಿಗೆ. ಹೆಜ್ಜೆಗಳನ್ನೇ ಅನುಸರಿಸಿಕೊಂಡು ಹೋದನು. ಹೆಜ್ಜೆಗಳು ನೆಟ್ಟಗೆ ಎಗಿನ್‌ಹಾರ್ಟ್‌ನ ಕೋಣೆಯವರೆವಿಗೂ ಹೋಗಿ ಪುನಃ ಮಗಳ ಕೋಣೆಯ ಕಡೆ ವಾಪಸ್ ಆಗಿದ್ದವು. ಹೆಜ್ಜೆಗಳ ಗುರುತುಗಳು ಸ್ಪಷ್ಟವಾಗಿ ಆಳವಾಗಿದ್ದವು.

ಹೆಜ್ಜೆಯ ಗುರುತುಗಳನ್ನು ಎವೆ ಇಕ್ಕಿ ನೋಡುತ್ತಿದ್ದಂತೆ ಆಶ್ಚರ್ಯವೂ ಆಯಿತು. "ನಾನು, ಎಮ್ಮ ಇನ್ನೂ ಹುಡುಗೀಂತ ತಿಳಿದಿದ್ದೆ. ಅಸಾಧ್ಯ ಭಾರವಾಗಿಯೇ ಇದ್ದಾಳೆ. ಎತ್ತರವಾಗಿ ಬೆಳೆಯುತ್ತಿರುವುದರಿಂದ ಅಷ್ಟ ತೂಕವಿಲ್ಲವೆಂದು ತಿಳಿದುಕೊಂಡಿದ್ದೆ." ಎಂದು ತಲೆತೂಗಿದನು.

ಚಳಿಯು ಹೆಚ್ಚಾದಂತೆ ಮಂಜು ಇನ್ನೂ ಹೆಚ್ಚಾಗಿ ಹೆಪ್ಪುಗಟ್ಟತೊಡ ಗಿತು. ಎಮ್ಮ ನಡೆದು ಹೋಗಿ ಬರುವಾಗ ಅವಳ ಹೆಜ್ಜೆಗಳ ಗುರುತುಗಳು ಮತ್ತೂ ಆಳವಾಗಿ ಸ್ಪಷ್ಟವಾಗಿದ್ದವು. ಅವಳ ಹೆಜ್ಜೆಗಳ ಗುರುತಗಳೇ ಕಾಣಿ ಸುತ್ತಿದ್ದರಿಂದ ಯಾರ ಮನಸ್ಸಿನಲ್ಲೂ ಅನುಮಾನವು ಸುಳಿಯಲಿಲ್ಲ.



# ಸ್ವರ್ಗ ಸೋಪಾನ

ಬರೆದವರು : **ಜೂಲಿ ಜನಿನ್**

ಬೋನಾಪಾರ್ಟಿನ ಜೊತೆ ನಾನೂ ದೋಣಿಯಲ್ಲಿದ್ದೆ. ನಾವು ಈಜಿಪ್ಟಿಗೆ ಹೋಗುತ್ತಿದ್ದೆವು. ಅವನು, ಒಬ್ಬ ದಂಡನಾಯಕ, ಮತ್ತು ನಾನು, ಮೂವರೇ ಇದ್ದೆವು. ನಾನು ನಾನ್ ಕಮೀಷಂಡ್ ಆಫೀಸರ್. ಮೂವರು ಒಟ್ಟಿಗೆ ಇಳಿದೆವು. ನೆಪೋಲಿಯನ್ ಮೊದಲು ನೆಲದ ಮೇಲೆ ಹಾರಿ ಕೈ ಚಾಚಿ ನನಗೆ ಇಳಿಯಲು ನೆರವಾದನು ಅಲೆಕ್ಸಾಂಡ್ರಿಯಾವನ್ನು ಗೆದ್ದು ಮರುಭೂಮಿಯ ಮಧ್ಯದಲ್ಲಿದ್ದ ಕೈರೋ ಕಡೆ ಧಾವಿಸಿದೆವು.

ದಾರಿಯಲ್ಲಿ ನಾವು ಎಷ್ಟು ಕಷ್ಟ ನಷ್ಟಗಳಿಗೆ ಈಡಾದೆವು! ಎತ್ತ ಕಣ್ಣು ಹರಿಸಿದರೂ ಮರಳಿನ ರಾಶಿಗಳು ಸಮುದ್ರದ ಅಲೆಗಳಂತೆ ದಿಗಂತದ ವರೆವಿಗೂ ಪ್ರಸರಿಸಿದ್ದವು. ಕುಡಿಯಲು ಎಲ್ಲೂ ನೀರಿರಲಿಲ್ಲ. ಹಿಮ್ಮೆಟ್ಟಿ ಹೋಗುತ್ತಿದ್ದ ಅರಬರು ಬಾವಿಗಳಿಗೆ ಕಲ್ಲುಗಳನ್ನು ತುಂಬಿ ಮುಚ್ಚಿ ಬಿಟ್ಟಿದ್ದರು. ದೂರದಲ್ಲಿ ಮರೀಚಿಕೆಗಳು ಹಚ್ಚನೆಯ ಖರ್ಜೂರದ ತೋಟಗಳು ನೀರಿನಂತೆ ಕಾಣಿಸಿ, ನಮ್ಮ ಬಾಯಾರಿಕೆಯನ್ನು ಇನ್ನೂ ಹೆಚ್ಚಿಸುತ್ತಿದ್ದುವು. ನಾಲಿಗೆ ಗಂಟಲುಗಳು ಒಣಗಿದ್ದವು ಅಕ್ಕಪಕ್ಕಗಳಲ್ಲಿ ಅಲ್ಲಲ್ಲಿ ಎದ್ದು ಕಾಣುತ್ತಿದ್ದ ಪಿರಮಿಡ್ಡುಗಳನ್ನು ನೋಡಿದರೂ ನಮಗೆ ಯಾವ ರೀತಿಯ ಕುತೂಹಲವಾಗಲೀ ಸೋಜಿಗವಾಗಲೀ ಆಗಲಿಲ್ಲ. ಕಡೆಗೂ ಕೈರೋವನ್ನು ತಲಪಿದೆವು.

ಪಟ್ಟಣದ ಅತಿ ಪ್ರಾಮುಖ್ಯವಾದ ಸ್ಥಳ ಒಂದನ್ನು ನೋಡಿಕೊಳ್ಳಲು ಮತ್ತು ರಕ್ಷಿಸಲು ನನ್ನನ್ನು ಕೆಲಸೈನಿಕರೊಡನೆ ಕಳುಹಿಸಿದ್ದರು. ಪ್ರಮುಖ ರಸ್ತೆಯ ಬದಿಯಲ್ಲಿ ಒಂದು ಮನೆಯಿತ್ತು. ಅದರ ಮೇಲೆ ಹತ್ತಿದೆವು. ಒಂದು ಕಡೆ ಚಾವಣಿಯು ಸಮತಲವಾಗಿತ್ತು. ಅಲ್ಲಿ ನಿಂತು ನೋಡಿದರೆ

ರಸ್ತೆಯು ಇತ್ತ ಅತ್ತ ಚೆನ್ನಾಗಿ ಕಾಣಿಸುತ್ತಿತ್ತು. ಅಲ್ಲದೆ ಚಾವಣಿಯ ಹಿಂಭಾಗದಲ್ಲಿದ್ದ ಎತ್ತರವಾದ ಗೋಡೆಯ ನೆರಳು ತಂಪಾಗಿಯೂ ಇತ್ತು. ನೆರಳನ್ನು ಕಂಡೇ ಆರುದಿನಗಳಾಗಿದ್ದವು.

ದೂರದಲ್ಲಿ ತಮಟೆ, ಕಹಳೆಗಳ ಶಬ್ದವು ಕೇಳಬಂದಿತು. ಕ್ರಮೇಣ ನಮ್ಮ ಸೈನಿಕರು ಶಿಸ್ತಿನಿಂದ ನಡೆಯುತ್ತಾ ಮುಂದುವರಿದರು. ಕಡೆಗೆ ಅವನೂ ಕಾಣಿಸಿಕೊಂಡನು. ನಮ್ಮ ಉತ್ಸಾಹವು ಅಷ್ಟಿಷ್ಟಲ್ಲ. 'Vive Nepolian' (ನೆಪೋಲಿಯನ್ ಜಿಂದಾಬಾದ್) ಎಂದು ನೆಗೆಯುತ್ತಾ ಕಿರುಚಿದೆವು. ಉತ್ಸಾಹದಲ್ಲಿ ಕುಣಿದಾಗ ಚಾವಣಿಯು ಕುಸಿದು ನೆಲದ ಮೇಲೆ ಅಂಗತ್ತಲಾಗಿ ಬಿದ್ದೆವು.

ಸುತ್ತಲೂ ನೋಡಿದಾಗ ಅದೊಂದು ಸ್ನಾನಗೃಹವಾಗಿತ್ತು. ಮಹಿಳೆಯರು ತಮ್ಮ ನಗ್ನತೆಯನ್ನು ಮುಚ್ಚಿಕೊಳ್ಳಲು ಒತ್ತಿಕೊಂಡು ಒಂದು ಬದಿಯಲ್ಲಿ ನಿಂತರು.

ಅವರನ್ನು ನೋಡಿದ ತಕ್ಷಣ ನಾವು ಹುರುಪಿನಿಂದ ಬಂದೂಕು ಕತ್ತಿಗಳನ್ನು ಬಿಸುಟು, ಬಟ್ಟೆಗಳನ್ನು ಕಳಚಿ ನೀರಿನಲ್ಲಿ ಧುಮುಕಿದೆವು. ನೀರನ್ನು ಕಂಡು, ಸ್ನಾನಮಾಡಿ ಎಷ್ಟೋ ದಿನಗಳಾಗಿದ್ದವು.

ನಾವು ಯಾವ ತೊಂದರೆಯನ್ನೂ ಮಾಡದೆ ಸಾಧುವಾಗಿದ್ದುದನ್ನು ನೋಡಿ, ನಮ್ಮನ್ನು ಗಮನಕ್ಕೇ ತೆಗೆದುಕೊಳ್ಳದೆ, ಪುನಃ ಸ್ನಾನಮಾಡ ತೊಡಗಿದರು. ಒಬ್ಬೊಬ್ಬರ ಕೈಲೂ ಒಂದೊಂದು ಕನ್ನಡಿ ಇತ್ತು. ಅತ್ತರ್ ಬೆರಸಿದ ನೀರನ್ನು ಮೈಮೇಲೆ ಸಿಂಪಡಿಸಿಕೊಳ್ಳುತ್ತಿದ್ದರು. ಸ್ವಲ್ಪ ಹೊತ್ತಾದ ಮೇಲೆ ನಮಗೆ ಸ್ನಾನಮಾಡಿಸಲು ಅನುವಾದರು. ನಮ್ಮ ಮೇಲೆ ಅತ್ತರ್ ನೀರನ್ನು ಎರಚುವಾಗ ಕಿಲಕಿಲನೆ ನಕ್ಕರು. ತಲೆ ಕೂದಲನ್ನು ತೊಳೆದು, ಸುಗಂಧತೈಲವನ್ನು ಹಚ್ಚಿ ಕುಡಿಯಲು ಶೀತಲವಾದ ಶರಬತ್ತನ್ನು ಕೊಟ್ಟರು. ಬಿಸಿಲಿನ ಝಳದಿಂದ ಕಂದು ಬಣ್ಣಕ್ಕೆ ತಿರುಗಿದ್ದ ನಮ್ಮ ಮುಖ ಮತ್ತು ಕೈ ಕಾಲುಗಳನ್ನು ತಮ್ಮ ದಂತದಂತೆ ಇದ್ದ ದೇಹಕ್ಕೆ ಹೋಲಿಸಿ ನೋಡಿಕೊಂಡು ಕಿವಿಯಲ್ಲಿ ನಮಗೆ ಅರ್ಥವಾಗದ ಭಾಷೆಯಲ್ಲಿ

ಇಂಪಾದ ಸಂಗೀತದಂತೆ ಪ್ರೇಮಲೀಲೆಗೆ ಕರೆಯಿತ್ತರು. ಪ್ರೇಮಕ್ಕೆ ಭಾಷೆಯೊಂದುಂಟೇ ? ಭಾಷಾತೀತವಾದುದು ಪ್ರೇಮದ ಆಹ್ವಾನ !

ನಮ್ಮ ನೆಚ್ಚಿನ ನಾಯಕನಾದ ನೆಪೋಲಿಯನ್ ಜಯಭೇರಿಯೊಡನೆ ಪಟ್ಟಣವನ್ನು ಪ್ರವೇಶಿಸುತ್ತಿದ್ದಾಗ ಮುಂಜಾಗ್ರತೆಯ ಕ್ರಮಕ್ಕಾಗಿ ಬಂದ ನಾವು ಮುಸಲ್ಮಾನರ ಸ್ವರ್ಗದಂತಿದ್ದ ಸ್ನಾನಗೃಹದಲ್ಲಿ ಪರಿ (ದೇವಕನ್ಯೆ) ಗಳಂತಿದ್ದ ಸುಂದರಿಯೊರಡನೆ, ಸ್ವಲ್ಪ ಕಾಲಕ್ಕೆ ಮುಂಚೆ ಅನುಭವಿಸಿದ ಬಿಸಿಲಿನ ಝಳ, ಧೂಳು, ಬಾಯಾರಿಕೆ, ಸೆಕೆ ಎಲ್ಲವನ್ನೂ ಮರೆತು ಸುಖವಾಗಿ ಕಾಲ ಕಳೆಯುತ್ತಿದ್ದೆವು. ಹೊರಗಡೆ ಸೈನಿಕರು ನಡೆದು ಹೋಗುವುದು, ಕುದುರೆಗಳ ಕಾಲಿನ ಸಪ್ಪಳ, ತೋಪಿನಗಾಡಿಯ ಗಾಲಿಗಳು ಉರಳುವ ಶಬ್ದ ಕ್ಷೀಣವಾಗಿ ಕೇಳಿ ಬರುತ್ತಿತ್ತು. ಲಲನೆಯರ ಮಧ್ಯೆ, ಅವರು ಕೊಟ್ಟ ಮದ್ಯವನ್ನು ನಮ್ಮ ವಿಜಯೋತ್ಸವದ ಸಲುವಾಗಿ ಸಂತೋಷದಿಂದ ಕುಡಿದೆವು.

ಜೀವನದಲ್ಲಿ ಇಂತಹ ಸುಖವನ್ನು ನಾನು ಎಂದೂ ಅನುಭವಿಸಿರಲಿಲ್ಲ. ಒಂದು ದಿವಸ ಇಂತಹ ಘಳಿಗೆಯನ್ನು ಕಾಣಬೇಕೆಂದು ಹಲವಾರು ಬಾರಿ ಕನಸು ಹೆಣೆದಿದ್ದೇನೆ. ತರುಣಿಯರಲ್ಲೇ ನಮ್ಮ ಮನವನ್ನು ಒಲಿಸಿಕೊಳ್ಳಲು ಪರಸ್ಪರ ಪೈಪೋಟಿ ! ನನ್ನ ಕನಸು ಇದೀಗ ನೆನಸಾಯಿತು.

ನೆಪೋಲಿಯನ್ನನು ಈಜಿಪ್ಟ್ ಸಾಮ್ರಾಜ್ಯವನ್ನು ಗೆದ್ದು ವಿಜಯೋನ್ಮತ್ತನಾಗಿ ಕೈರೋ ಪಟ್ಟಣವನ್ನು ಬಹು ಠೀವಿಯಿಂದ ಪ್ರವೇಶಿಸಿರಬಹುದು. ಸಾಧಾರಣ ಸೈನಿಕರಾದ ನಾವು ಅದಕ್ಕೂ ಹೆಚ್ಚಿನ ವಿಜಯವನ್ನು ಗಳಿಸಿದ್ದೆವು. ಈಜಿಪ್ಟಿನ ತರುಣಿಯರ ಹೃದಯವನ್ನು ಅಪಹರಿಸಿ, ಅವರಲ್ಲಿ ಒಂದಾಗಿ ಸಂತೋಷದಿಂದ ಕಾಲಕಳೆಯುತ್ತಿದ್ದೆವು.

ಈ ಸುಂದರಿಯರು ಬಹುಶಃ ಕೈರೋ ಪಟ್ಟಣದ ಶ್ರೀಮಂತರ ಮಡದಿಯರೇ ಆಗಿರಬೇಕು. ಸ್ನಾನಕ್ಕಾಗಿ ಇಲ್ಲಿಗೆ ಬಂದಿದ್ದರು. ಅವರು ಸ್ನಾನಮಾಡುತ್ತಿರುವಾಗ, ಅವರ ಪತಿಯರಿಗೂ ಒಳಗೆ ಬರಲು ಪ್ರವೇಶವಿರಲಿಲ್ಲ. ಅಡ್ಡಿ ಬರುವಂತಿರಲಿಲ್ಲ. ಮಧ್ಯಾಹ್ನವೆಲ್ಲಾ ಅವರು ಅಲ್ಲಿ ಕಾಲವನ್ನು ಕಳೆಯುತ್ತಿದ್ದುದರಿಂದ, ಅನೇಕ ಗಂಟೆಗಳು ಅವರೊಡನೆ ಸಂತಸದಿಂದ ಕಳೆದೆವು. ಸಂಜೆ

ಯಾದಂತೆ ಅವರುಗಳು ಹೊರಡುವ ಕಾಲವು ಸನ್ನಿಹಿತವಾಯಿತು. ಕಾವಲು ಗಾರರ ಕಣ್ಣಿಗೆ ನಾವು ಬಿದ್ದಲ್ಲಿ ನಮ್ಮ ಕತ್ತುಗಳನ್ನು ಕತ್ತರಿಸಿ ಹಾಕುವರೆಂದು ಸೂಚಿಸಿದರು.

ಇಲ್ಲಿಂದ ಹೊರಗೆ ಹೋಗುವುದಾದರೂ ಹೇಗೆ ? ದ್ವಾರದ ಮೂಲಕ ಹೋದರೆ ಸಾವು ಖಂಡಿತ. ಸ್ನಾನಗೃಹದ ಎತ್ತರವಾದ ಮೇಲ್ಛಾವಣಿಯಲ್ಲಿ ಹಬೆ ಹೋಗಲು ಒಂದು ರಂಧ್ರವಿತ್ತು. ಅದೂ ಪಾಚಿಕಟ್ಟಿದ್ದರಿಂದ ನುಣು ಪಾಗಿತ್ತು. ಹೆಂಗಸರ ಮಧ್ಯೆ ನಾವು ಇದ್ದರೆ ಕಾವಲುಗಾರರು ಸುಮ್ಮನೆ ಬಿಡುವರೆ? ಅದೂ ಅಲ್ಲದೆ ನೆಪೋಲಿಯನ್ ಹೊರಡಿಸಿದ್ದ ಸನ್ನದ್ದು ಜ್ಞಾಪಕಕ್ಕೆ ಬಂದಿತು.

"ನಾವು ಹೋಗುತ್ತಿರುವ ಪ್ರದೇಶದ ಹೆಂಗಸರನ್ನು, ನಮ್ಮ ದೇಶದ ಮಹಿಳೆಯರೊಂದಿಗೆ ವರ್ತಿಸುವ ರೀತಿ ನಡೆದುಕೊಳ್ಳಕೂಡದು. ಪ್ರತಿ ದೇಶದಲ್ಲೂ, ಪರದೇಶದವನು ಅನಾಗರೀಕ, ಹೆಂಗಸರ ಮೇಲೆ ಧಾಷ್ಟ್ರ್ಯವನ್ನು ನಡೆಸುತ್ತಾನೆಂದೇ ತಿಳಿದಿರುತ್ತಾರೆ. ಸೈನಿಕರಾರಾದರೂ ಧಾಷ್ಟ್ರ್ಯವನ್ನು ತೋರಿದ್ದು ಕಂಡು ಬಂದಲ್ಲಿ ಗುಂಡಿನಿಂದ ಸಾಯಿಸಲಾಗುವುದು.''

—ನೆಪೋಲಿಯನ್

ಏನು ಮಾಡಬೇಕೆಂದು ಮನಸ್ಸು ಕಾಡುತ್ತಿದ್ದರೂ ಕಡೆಯ ಘಳಿಗೆಯ ವರೆವಿಗೂಲಲನೆಯರನ್ನು ಆಲಂಗಿಸಿ ಚುಂಬಿಸಿದೆವು.

ನಮ್ಮ ಸ್ಥಿತಿಯು ಬಹಳ ಚಿಂತಾಜನಕವಾಗಿತ್ತು. ಕಾವಲುಗಾರರು ನಮ್ಮ ಕತ್ತನ್ನು ಚಾಕುವಿನಿಂದ ಸೀಳುತ್ತಿದ್ದರು, ಅಥವ ಗುಂಡಿಗೆ ತುತ್ತಾಗಿ ಸಾಯಬೇಕಾಗಿತ್ತು. ನನ್ನನ್ನು ಮುದ್ದಿಸುತ್ತಿದ್ದ ತರುಣಿಗೆ ಒಂದು ಅಸಾ ಧಾರಣವಾದ ಯೋಚನೆಯು ಹೊಳೆಯಿತು. ಒಬ್ಬರ ಭುಜದ ಮೇಲೆ ಒಬ್ಬರು ಏಣಿಯಂತೆ ಚಾವಣಿಯಲ್ಲಿದ್ದ ರಂಧ್ರದವರೆವಿಗೂ ನಿಂತರು. ಇಬ್ಬರು ಅವರ ಭುಜಗಳ ಮೇಲೆ ಕಾಲಿಟ್ಟು ಮೇಲೆ ಹೋದರು. ಅನಂತರ ನಮ್ಮ ಬಂದೂಕು, ಕತ್ತಿಗಳನ್ನು ಒಂದೊಂದಾಗಿ ಮೇಲೆ ಸಾಗಿಸಿದೆವು. ಉಳಿದವ ರೆಂದರೆ ಎಗುನೆ, ಆಲ್ಬರ್ಟ್ ಮತ್ತು ನಾನು.

"ಎಗನೆ, ನಿನ್ನ ಸರದಿ, ಮೇಲೆ ಹತ್ತಿಹೋಗು" ಎಂದು ಹೇಳಿದೆ

ಆಲ್ಬರ್ಟ್, ಎಗಿನ್ ಇಬ್ಬರೂ ಹೆಂಗಸರ ಮೇಲೆ ಏರಿ ಅಲ್ಲಿಂದ ಕೆಳಗೆ ಬಿದ್ದರು. ಎಗಿನ್‌ಗೆ 'ಬೇಗ ಹತ್ತು' ಎನ್ನುತ್ತಲೂ 'ನೀವು ಹೋಗಿ ನಾನು ಇಲ್ಲೇ ಇರುತ್ತೇನೆ. ಸತ್ತರೂ ಚಿಂತೆಯಿಲ್ಲ.' ಎಂದು ಖಡಾಖಂಡಿತವಾಗಿ ಹೇಳಿಯೇ ಬಿಟ್ಟೆ.

ಆಲ್ಬರ್ಟ್ ಹತ್ತಿದನು. ಆಲ್ಬರ್ಟ್ ನೋಡಲು ಲಕ್ಷಣವಾಗಿ ಮನ್ಮಥನ ಹಾಗೆ ಇದ್ದನು. ಅವನು ಹತ್ತಿ ಹೋಗುವಾಗ ಪ್ರತಿಯೊಬ್ಬಳೂ ಅವನನ್ನು ನಿಲ್ಲಿಸಿ ಚುಂಬಿಸಿದಳು, ಕಡೆಯವಳನ್ನು ಹತ್ತುತ್ತಿದ್ದಂತೆ ಹೆಂಗಸರೊಡನೆ ಕೆಳಗೆ ಬಿದ್ದನು. ಎಲ್ಲರೂ ನಗುತ್ತಾ ಕುಣಿದಾಡಿದೆವು. ಇದೇ ರೀತಿ ಅನೇಕ ಬಾರಿಯಾಯಿತು ತರುಣಿಯರು ಕಣ್ಣೀರು ಸುರಿಸುತ್ತಾ ಸಮಯವು ಸಮೀಪಿಸುತ್ತಿದೆಯೆಂದು ಪುನಃ ಏಣಿಯಂತೆ ನಿಂತರು.

'ಹುಚ್ಚಾಟವಾಡಬೇಡಿ ನಡೆಯಿರಿ' ಎಂದು ಗದರಿಸಿದೆ.

ಎಗಿನ್ ಮತ್ತು ಆಲ್ಬರ್ಟ್ ಮೆಟ್ಟಿಲಂತಿದ್ದ ಪ್ರತಿ ತರುಣಿಯನ್ನೂ ಹತ್ತಿ ಹೋಗುವಾಗ ಸ್ವಲ್ಪ ಹೊತ್ತು ನಿಂತು ಚುಂಬಿಸಿದರು. ಮೇಲಿದ್ದವರು ಇಬ್ಬರ ರಟ್ಟೆಯನ್ನು ಹಿಡಿದು ಮೇಲಕ್ಕೆ ಎಳೆದುಕೊಂಡರು. ನಾನು ಮೇಲೆ ಹೋಗುವಾಗ ತೊಡಕಿಗಿಟ್ಟುಕೊಂಡಿತು. ಮೆಟ್ಟಿಲಂತೆ ಮೇಲೆ ನಿಂತಿದ್ದ ನನ್ನ ಇನಿಯಳು, ಬಾಹುಗಳಿಂದ ಬಿಗಿದಪ್ಪಿ ಜೊತೆಗೆ ಬರುವಂತಾಗಿ ಕೇಳಿಕೊಂಡಳು. ಬಹು ಕಷ್ಟದಿಂದ ಬಿಡಿಸಿಕೊಂಡು ತಳ್ಳಿ ಮೇಲೆ ಹತ್ತಿದೆ.

ಅಲ್ಲಿಂದ ಧುಮುಕಿ ನೆಟ್ಟಗೆ ಸೈನ್ಯದ ಶಿಬಿರವನ್ನು ಸೇರಿಕೊಂಡೆವು. ಮರುದಿವಸ ಸ್ನಾನಗೃಹದ ಮೇಲ್ಛಾವಣಿಯನ್ನು ಹತ್ತಿನೋಡಿದಾಗ ರಂಧ್ರವನ್ನು ಕಬ್ಬಿಣದ ಸಲಾಕಿಗಳಿಂದ ಭದ್ರವಾಗಿ ಮುಚ್ಚಲಾಗಿತ್ತು. ಕುಸಿದು ಬಿದ್ದ ಭಾಗವನ್ನೂ ಸರಿಪಡಿಸಿಬಿಟ್ಟಿದ್ದರು.



# ಪಂದ್ಯ

## ಕ್ಯಾಸನೋವ ಆತ್ಮಕಥೆಯಿಂದ

ಮನಸ್ಸಿಗೆ ಹರ್ಷವನ್ನು ತರುವಂತಹ ತಂಪಾದ ದಿವಸ. ಗೊಂಡೋಲ (ವೆನಿಸ್ಸಿನಲ್ಲಿ ಉಪಯೋಗಿಸುವ ವಿಹಾರ ದೋಣಿ) ವನ್ನು ಬಾಡಿಗೆಗೆ ತೆಗೆದು ಕೊಂಡು, ಸೊಬಗಿನ ಗಣಿಯಂತಿದ್ದ ಮೆಡಮಾಸ್ಸೈಲ್—ಸಿ. ಯೊಡನೆ ಒಂದು ಖಾಸಗಿ ಉದ್ಯಾನವನಕ್ಕೆ ಹೋದೆ.

ತೋಟಗಾರನು ನನಗೆ ತಿಳಿದವನೇ. ಸ್ವಲ್ಪ ಹಣವನ್ನು ಕೊಡುತ್ತಲು, ಉದ್ಯಾನವನವನ್ನು ಸಾಯಂಕಾಲದವರುವಿಗೂ ನನಗೇ ಬಿಟ್ಟುಕೊಟ್ಟನು. ಅವನಿಗೆ ನಾನು ಈಗಲೂ ಕೃತಜ್ಞನಾಗಿದ್ದೇನೆ.

ಅವಳು ಇನ್ನೂ ಹರೆಯದ ಹುಡುಗಿ. ಏನು ಮಾತನಾಡಬೇಕೋ ತೋಚಲಿಲ್ಲ. ಅನುಭವಸ್ಥಳಾಗಿದ್ದರೆ ಲೋಕಾಭಿರಾಮವಾಗಿ ಹರಟುತ್ತಿದ್ದೆ. ಅವಳು ಅರಿಯದ ಹಸುಳೆ. ನನ್ನ ಆಸೆಯನ್ನು ಹೇಳಿದರೆ ಗಾಬರಿಯಾಗು ತ್ತಾಳೆ ಎಂದು ಯೋಚಿಸುತ್ತಿದ್ದಂತೆ, ಅವಳು ಚಂಡು ಪುಟ ನೆಗೆಯುವಂತೆ ಓಡುತ್ತಾ ಮರದ ಹಿಂದೆ ಹೋಗಿ ನಿಂತು ನಗುತ್ತಾ 'ನನ್ನನ್ನು ಹಿಡಿಯಿರಿ ನೋಡೋಣ' ಎಂದಳು.

ನಾನು 'ಓಡೋಡು ಆಗುತ್ತೋ ಇಲ್ಲವೋ. ಆದರೆ ಒಂದು.' ಸೋತವರು, ಗೆದ್ದವರು ಹೇಳಿದಂತೆ ಮಾಡಬೇಕು ಒಪ್ಪಿಗೇನಾ ?" ಎಂದು ಕೇಳಿದೆ

ಅವಳು ಸರಿಯೆಂದು ಉತ್ಸಾಹದಿಂದ ತಲೆಯನ್ನು ಅಲ್ಲಾಡಿಸಿದಳು. ನಾನು ಅವಳನ್ನು ಸೋಲಿಸಿ ಪ್ರೇಮಯಾಚನೆ ಮಾಡಿದೆನೆಂದು ನೀವು ಯೋಚಿಸುತ್ತಿರಬೇಕು. ನಾನು ಹಾಗೆ ಮಾಡಲಿಲ್ಲ. ಈ ರೀತಿ ಹಸುಳೆಯನ್ನು ಸೋಲಿಸಿ ಅವಳ ಮನಸ್ಸನ್ನು ಸೂರೆಗೈಯ್ಯುವುದು ಅಸಭ್ಯ ವರ್ತನೆ.

ಹಾಗೂ ಅನಾಗರೀಕ. ಅದಕ್ಕೂ ಸೋತು ಅವಳು ಹೇಳಿದಂತೆ ಮಾಡುವುದು ಇನ್ನೂ ಹರ್ಷದಾಯಕ. ನಾನು ಹೂಡಿದ ತಂತ್ರವೂ ಅದೆ. ಎಲ್ಲಿಯವರೆ ವಿಗೂ ಓಡಬೇಕೆಂದು ಮೊದಲೇ ನಿರ್ಧರಿಸಿಕೊಂಡೆವು. ಓಡಲು ಪ್ರಾರಂಭಿ ಸಿದೆವು. ಬೇಕೆಂದೇ ಸೇರಬೇಕಾದ ಸ್ಥಳವನ್ನು ಸಮೀಪಿಸಿದಂತೆ ನಾನು ಹಿಂದೆ ಬಿದ್ದೆ. ಅವಳು ಓಡಿ ಹುಲ್ಲಿನ ಮೇಲೆ ಬಿದ್ದು ಹೊರಳಿ ನಗುತ್ತಾ 'ನಾನೇ ಗೆದ್ದೆ ! ಈಗ ನಾನು ಹೇಳಿದ ಹಾಗೆ ಮಾಡಬೇಕು" ಎಂದಳು.

ನಾನು ಅವಳ ಪಕ್ಕದಲ್ಲಿ ಮಂಡಿಯೂರಿ ಬಗ್ಗಿ ಕುಳಿತು "ಏನು ಮಾಡ ಬೇಕು ಹೇಳು" ಎಂದೆ.

ಒಂದೆರಡು ನಿಮಿಷಗಳು ಸುಮ್ಮನಿದ್ದು ತುಟಿಯನ್ನು ಬಟ್ಟಲಿನಂತೆ ಮನಮೋಹಕವಾಗಿ ಚಾಚಿ ಕೈಲಿದ್ದ ಉಂಗುರವನ್ನು ತೆಗೆದು 'ನೀವು ಹಿಂದು ಮುಂದಾಗಿ ನಿಲ್ಲಿ' ಎಂದಳು. ನಾನು ಅವಳು ಹೇಳಿದ ಹಾಗೆಯೇ ಮಾಡಿದೆ. ಮೆಡಮಾಸ್ಸೈಲ್‌ - ಸಿ 'ಉಂಗುರವನ್ನು ಬಿಚ್ಚಿಟ್ಟಿದ್ದೇನೆ ಹುಡುಕಿ' ಎಂದಳು.

ಅವಳು ಹೇಳಿದುದು ಹುಡುಗಾಟಿಕೆಯಂತಿದ್ದರೂ ಎಲ್ಲಿ ಬಚ್ಚಿಟ್ಟಿರು ವಳೊ ಅದು ತಿಳಿಯದೆ ಅಸಹನೆಯನ್ನು ಸೂಚಿಸುವಂತೆ "ಎಲ್ಲಿ ಬಚ್ಚಿಟ್ಟಿದ್ದಿ ?.... ಹುಲ್ಲಿನಲ್ಲಾ ?" ಎಂದು ಕೇಳಿದೆ.

ಅವಳು ತಲೆಯನ್ನಲ್ಲಾಡಿಸಿ 'ಇಲ್ಲ ನನ್ನ ಮೇಲೆಯೇ ಇದೆ' ಎಂದಳು.

ಬೇರೆ ಯಾರಾದರೂ ಹೆಂಗಸರು ಈ ರೀತಿ ಹೇಳಿದ್ದರೆ ಇದು ಪ್ರಣಯಕ್ಕೆ ಕರೆಯೆಂದು ಭಾವಿಸುತ್ತಿದ್ದೆ. ಆದರೆ ಮಗುವಿನಂತೆ ಏನೂ ಅರಿಯದ ಮನಸ್ಸು ಅವಳದು. ಆದರೂ ಅವಳು ಈ ರೀತಿ ಹೇಳಿದ್ದನ್ನು ಕೇಳಿ ರೋಮಾಂಚಕ ವಾಗಿ ಆಸೆ ಕಿಚ್ಚೆದ್ದಿತು.

ಇಂತಹ ಬಾಲೆಯನ್ನು ನನ್ನ ಕಾಮಕ್ಕೆ ಬಲಿಕೊಟ್ಟದ್ದು ಸರಿಯೇ ಎಂದು ನೀವು ಕೇಳಬಹುದು. ನನ್ನ ಉತ್ತರವಿಷ್ಟೆ. ಮನವನ್ನು ಸೆಳೆಯುವ ರೂಪ. ಅಂಗಾಂಗದಿಂದ ಹೊರಹೊಮ್ಮುತ್ತಿದ್ದ ಉದ್ದೀಪಕ ಸುವಾಸನೆ ಎಂತಹ ಇಂದ್ರಿಯ ನಿಗ್ರಹಮಾಡಿದವನ ಮನಸ್ಸನ್ನಾದರೂ ಹುಚ್ಚೆಬ್ಬಿಸುತ್ತಿತ್ತು.

ಚಂಡಮಾರುತಕ್ಕೆ ಸಿಕ್ಕಿ ಮನಸ್ಸಿನ ಸ್ಥಿರತೆಯನ್ನು ತರಗೆಲೆ ತೂರುವಂತೆ ಮಾಡುತ್ತಿತ್ತು.

ಕೂಲಂಕಷವಾಗಿ ತಾಳ್ಮೆಯಿಂದ ಪರಿಶೋಧಿಸುವವನಂತೆ ಜೋಬುಗಳು, ಹಾಕಿಕೊಂಡಿದ್ದ ಲಂಗ ಕುಪ್ಪಸಗಳನ್ನು ಹುಡುಕಿ, ಬೂಟ್ಸನ್ನು ಬಿಚ್ಚಿ ಅವನ್ನೂ ಒದರಿ ಒಳಗೆಲ್ಲಾ ಇಣುಕಿ ನೋಡಿದೆ. ತಡೆದಷ್ಟೂ ನನ್ನಾಸೆಯು ಪ್ರವಾಹದಂತೆ ಉಕ್ಕಿಬಂದಿತು. ತಲೆ ಸುತ್ತಿಬಂದಂತೆಯೇ ಆಯಿತು. ಆದರೂ ಹುಡುಕುವುದರಲ್ಲಿ ಒಂದು ರೀತಿ ರೋಮಾಂಚನವಿತ್ತು. ಕಡೆಗೂ ಉಂಗುರವನ್ನು ಹುಡುಕಿಯೇ ಬಿಟ್ಟೆ !.

ಸೃಷ್ಟಿವೈಚಿತ್ರ್ಯವೆಂದು ನಾವು ಹಗಲಿರುಳೂ ಬಯಸುವ, ಮೃದುವಾದ ಕಣಿವೆಯ ಮಧ್ಯದಲ್ಲಿದ್ದ ಉಂಗುರವನ್ನು ತೆಗೆದೆ. ತೆಗೆದಾಗ ಕೈ ನಡುಗುತ್ತಿತ್ತು.

‘ ಏಕೆ ನಿಮಗೆ ಕೈ ನಡುಗುತ್ತಿದೆ ’ ಎಂದು ಕೇಳಿದಳು ಬಾಲೆ.

“ ಅತಿಯಾದ ಸಂತೋಷವಾಗಿರುವುದರಿಂದ ಈ ರೀತಿ ನಡುಗುತ್ತಿದೆ ’ ಎಂದು ಎದ್ದು ನಿಂತು ‘ ಹೋದ ಸಲ ನೀನು ಗೆದ್ದೆ. ಈ ಸಲ ನೋಡೋಣವಾ ಯಾರು ಗೆಲ್ಲುತ್ತಾರೇಂತ. ಉದ್ಯಾನವನದ ಆ ಕಡೆ ಕಾಣಿಸುವ ಮಂದಿರವರೆವಿಗೂ ಓಡೋಣ ” ಎಂದೆ

ಇಬ್ಬರೂ ಓಡಿದೆವು ಈ ಸಲ ನಾನೇ ಗೆಲ್ಲಬೇಕೆಂದುಕೊಂಡೆ. ಅವಳು ಮೇಲುಬ್ಬಸಬಿಡುತ್ತಾ ಓಡಿಬಂದಳು. ಆಯಾಸಕ್ಕೆ ಮಾಟವಾದ ಅವಳ ಸ್ತನಗಳು ಮೇಲಕ್ಕೂ ಕೆಳಕ್ಕೂ ಕುಣಿಯುತ್ತಿದ್ದವು. ಹತ್ತಿರ ಬಂದು ‘ ನೀನೇ ಗೆದ್ದಿರಪ್ಪ; ನೀವು ಹೇಳಿದ ಹಾಗೆ ಮಾಡುತ್ತೇನೆ ’ ಎಂದಳು.

ಅವಳಿಗೆ ಕೊಡಬೇಕೆಂದಿದ್ದುದನ್ನು ಎರಡು ದಿವಸಗಳಿಂದ ಜೇಬಿನಲ್ಲೇ ಇಟ್ಟುಕೊಂಡಿದ್ದೆ. ಕೊಟ್ಟರೆ ಏನು ಅಪಾರ್ಥ ತಿಳಿದುಕೊಳ್ಳುತ್ತಾಳೋ, ಎಂದು ತೆಪ್ಪಗಿದ್ದೆ. ಧೈರ್ಯವೂ ಬಂದಿರಲಿಲ್ಲ.’ “ನನ್ನ ನಿನ್ನ ಗಾರ್ಟರು (ಕಾಲುಚೀಲಕ್ಕೆ ಹಾಕುವ ಪಟ್ಟಿ) ಗಳನ್ನು ಬದಲಾಯಿಸಿಕೊಳ್ಳೋಣ. ಇದು ನನ್ನ ಆಜ್ಞೆ ” ಎಂದೆ.

ಅವಳು ಹುಬ್ಬುಗಳನ್ನು ಗಂಟಿಕ್ಕಿ ಅಸಮಾಧಾನವನ್ನು ಸೂಚಿಸುತ್ತಾ ‘ ನಿಮ್ಮ ಗಾರ್ಟರು ಸರ್ವೇ ಸಾಧಾರಣವಾದುದು ’ ಎಂದಳು.

“ ಆದರೆ ಇದು ನನ್ನ ಆಜ್ಞೆ ”.

ಅವಳು ಲಂಗವನ್ನು ಸ್ವಲ್ಪ ಮೇಲಕ್ಕೆ ಮಾಡಿ ತನ್ನ ಗಾರ್ಟರನ್ನು ಬಿಚ್ಚುತ್ತಿದ್ದಂತೆ ನಾನು ಜೇಬಿನಿಂದ ಗಾರ್ಟರುಗಳ ಜೊತೆಯನ್ನು ತೆಗೆದೆ.

“ ವ್ಹಾ ! ತುಂಬಾ ಚನ್ನಾಗಿದೇಂದ್ರೆ ಗಾರ್ಟರು.”

‘ ನಾನೇ ಹಾಕಬಹುದಾ ?’

‘ ಅದಕ್ಕೇನು ಹಾಕಿ ’.

ಕಾವೇರಿ ಮೈ ಬೆಚ್ಚಗಾಯಿತು. ನಡಗುತ್ತಿದ್ದ ಕೈಗಳಿಂದ ಒಂದು ಗಾರ್ಟರನ್ನು ಹಾಕಿ, ಎರಡನೆಯದನ್ನು ಹಾಕುತ್ತಿರುವಾಗ ಬಾಲೆ, ಕೈ ತಡೆದು ‘ ಅದರ ಮೇಲೆ ಏನೋ ಬರೆದಿದೆ ಓದಿ ’ ಎಂದಳು. ನಿಜ. ಅದರಲ್ಲಿ ಬರೆದದ್ದನ್ನು ನಾನು ಗಮನಿಸಿರಲಿಲ್ಲ. ಗಟ್ಟಿಯಾಗಿ ಓದಿದೆ.

ಅದೃಷ್ಟಶಾಲಿ ಗಾರ್ಟರೇ !
ಒಲುವಿನ ಗಾರ್ಟರೆ,
ಅದೃಷ್ಟಶಾಲಿ ನೀನು,
ನಿನ್ನ ಮೇಲಿದೆ ಸ್ವರ್ಗ !

ಓದಿದಾಗ ನನಗೆ ನಗು ಬಂದಿತು ಅವಳು ಏನೂ ಅರಿಯದವಳು. ಪ್ರಪಂಚಜ್ಞಾನವೇ ಇರಲಿಲ್ಲ. ಅವಳಿಗೆ ಇದರ ಗೂಢಾರ್ಥ ತಿಳಿಯಲಿಲ್ಲ.

“ಕವನವು ಚೆನ್ನಾಗಿದೆ – ಏಕೆ ನಗುತ್ತೀರಿ ?” ಎಂದು ಕೇಳಿದಳು.

ಬಹಳ ದಿನಗಳಿಂದ ಇಂತಹ ಸನ್ನಿವೇಶವು ಒದಗಬಲ್ಲದೇ ಎಂದು ಹಂಬಲಿಸುತ್ತಿದ್ದೆ. ನಿಷ್ಕಲ್ಮಷ ಹೃದಯದಿಂದ ಕೇಳಿದ ಪ್ರಶ್ನೆಯಿಂದ ಅವಕಾಶ ತಾನಾಗಿ ಒಂದೊದಗಿತು. ಬಹಳ ನಯವಾಗಿ ಕ್ರಮೇಣ ಇದರ ಅರ್ಥವನ್ನು ಬಾಳಿನ ವೈಚಿತ್ರ್ಯವನ್ನು ವಿವರಿಸಿದೆ.

ಸ್ವರ್ಗಸುಖವು ಇಹದಲ್ಲೂ ಕಾಣಬಹುದು ಎಂದರೆ ಅತಿಶಯೋಕ್ತಿಯಾಗಲಾರದು ಎಂದು ನಾನು ನಿಮಗೆ ಭರವಸೆಯನ್ನು ಕೊಡುತ್ತೇನೆ.



# ಕುದುರೆ ಲಾಯದಲ್ಲಿ ಕೆಲಸ ಮಾಡಿದರೇನು ? ಪ್ರೇಮಕ್ಕೆ ಕಣ್ಣಿಲ್ಲ!!

### ಗಿಯೋವಾನಿ ಬೊಕ್ಯಾಷಿಯೊ.

ಲಂಬಾರ್ಡಿ ರಾಜ, ಅಗಿಉಲ್ಫ್‌ನ ಹೆಂಡತಿ ಥಿಯೋಲಿಂಡ ರತಿಯಂತಿದ್ದಳು. ನೋಡಿದವರೆಲ್ಲಾ ಮುಗ್ಧರಾಗಿ ಅವಳನ್ನು ಬಯಸುತ್ತಿದ್ದರು. ಅಂತಹ ರೂಪಲಾವಣ್ಯ ಅವಳದು.

ಈ ರೀತಿ ಅವಳ ಅಂಗಾಂಗ ಸೌಷ್ಟವನ್ನು ಕಂಡು ತಲೆಗೆಡಸಿಕೊಂಡವರಲ್ಲಿ, ರಾಜನ ಕುದುರೆ ಲಾಯದಲ್ಲಿ ಕೆಲಸ ಮಾಡುತ್ತಿದ್ದವನೂ ಒಬ್ಬನು. ಅವಳು ತನಗೆ ಎಟುಕದ ವಸ್ತುವೆಂದು ಅವನಿಗೂ ಗೊತ್ತಿತ್ತು. ಮಹಾರಾಣಿಯೆಲ್ಲಿ? ಸಾಧಾರಣ ಕೀಳುದರ್ಜೆಯ ಮಾಲೀಸ್ ಮಾಡುವವನೆಲ್ಲಿ? ಅವಳು ಕುದುರೆ ಏರುವಾಗ ಸಹಾಯಕ್ಕೆ ನಿಂತ ಸಮಯದಲ್ಲಿ ಉಟ್ಟ ಬಟ್ಟೆಯು ತಗುಲಿದರೆ ಸಾಕು ಪುಳಕಿತನಾಗುತ್ತಿದ್ದನು. ಅನೇಕ ಸಲ ಅವಳಿಗೆ ಕಾಣದಂತೆ ಬಟ್ಟೆಯನ್ನು ಮುಟ್ಟುತ್ತಿದ್ದ ಕೂಡ. ಕುದುರೆಯ ಮೇಲೆ ಕುಳಿತಾಗ ಅವಳ ಕಾಲುಗಳನ್ನು ನೋಡಿದಾಗ ಮೈ ರೋಮಾಂಚನವಾಗುತ್ತಿತ್ತು. ಆದರೆ ಯಾವ ವಿಧದಲ್ಲೂ ಅವಳೆದುರಿಗೆ ತನ್ನಲ್ಲುಂಟಾದ ಅಂದೋಳನವನ್ನು ತೋರ್ಪಡಿಸಿಕೊಳ್ಳಲಿಲ್ಲ. ಕಣ್ಣೆತ್ತಿ ಕೂಡ ನೋಡುತ್ತಿರಲಿಲ್ಲ. ಮನಸ್ಸಿನಲ್ಲೇ ಮಂಡಿಗೆಯನ್ನು ತಿನ್ನುತ್ತಿದ್ದನು. ಹಗಲು ಗನಸುಗಳನ್ನು ಹೆಣೆಯುತ್ತಿದ್ದನು.

ಮನಸ್ಸಿನಲ್ಲಿ ಆಸೆಯು ಕಿಚ್ಚಿದ್ದರೆ ಎಂತಹ ಅಂಜುಬುರುಕನೂ ಧೈರ್ಯಶಾಲಿಯಾಗುತ್ತಾನೆ. ಅಸಾಧ್ಯವಾದ ಕೆಲಸಗಳನ್ನು ಸಾಧಿಸಲು ಪ್ರಯತ್ನಿಸುವನು. ಇದೆಂತಹ ಬಾಳು, ಆಸೆ ಆಸೆಯಾಗಿಯೇ ಉಳಿಯುವುದಕ್ಕಿಂತ ಸಾವೇ ಎಷ್ಟೋ ಉತ್ತಮ. ಇದು ಅವನ ತರ್ಕದ ಧಾಟಿಯಾಗಿತ್ತು.

ಸಾಯುವ ಹಾಗಿದ್ದರೆ ರಾಣಿಯೊಂದಿಗೆ ಸುಖವನ್ನು ಪಡೆದು ಏಕೆ ಸಾಯ ಬಾರದು ? ಸುಖವನ್ನು ಪಡೆದು ಸತ್ತರೆ ಲೇಸು. ತರ್ಕದ ಸರಣಿಯನ್ನು ಇನ್ನೂ ಮುಂದುವರಿಸಿದನು.

ಯಾವ ರೀತಿ ತನ್ನ ಮನದಾಸೆಯು ನೆನಸಾಗಲು ಸಾಧ್ಯವೆಂದು ಉಪಾ ಯವನ್ನು ಬೆದುಕಲುಪಕ್ರಮಿಸಿದನು. ತನ್ನ ಒಲುವನ್ನು ಪತ್ರ ಬರೆದು ರಾಣಿಗೆ ಅರುಹಿದರೆ ಸಗೆಗೇಡು ತನ್ನ ಆಸೆಯು ಪೂರೈಸದೆ ಇರುವುದು ಮಾತ್ರವಲ್ಲ. ರಾಜನಿಗೆ ತಿಳಿದು ಮರಣದಂಡನೆಯನ್ನು ವಿಧಿಸುತ್ತಾನೆ. ಪುರುಷಾರ್ಥ ವಾದರೂ ಏನು ? ಅದೂ ಅಲ್ಲದೆ ರಾಣಿಯು ಪತಿಯೇ ದೈವವೆಂದು ತಿಳಿದು ಕೊಂಡಿದ್ದಾಳೆ. ಬೇರೆಯವರನ್ನು ಕನಸಿನಲ್ಲಿಯೂ ಬಯಸುವುದಿಲ್ಲ. ರಾಜ ನಂತೆ ತಾನೂ ವೇಷವನ್ನು ಹಾಕಿಕೊಂಡರೆ ಸಾಧ್ಯವಾಗಬಹುದೆಂದು ಮನ ಸ್ಸಿಗೆ ಹೊಳೆಯಿತು.

ರಾಜನು ನಡೆಯುವ ರೀತಿ, ಮಾತನಾಡುವ ಥಾಟಿ, ಎಲ್ಲವನ್ನೂ ಕೂಲಂಕಷವಾಗಿ ಗಮನಿಸತೊಡಗಿದನು. ರಾತ್ರಿ ಕತ್ತಲಲ್ಲಿ ರಾಜನು ರಾಣಿವಾಸಕ್ಕೆ ಯಾವ ರೀತಿ ಹೋಗುತ್ತಾನೆಂದು ಅವಿಸಿಕೊಂಡು ನೋಡಿ ದನು. ರಾಜನು ಇರುಳಲ್ಲಿ, ಮುಖವನ್ನು ಮುಚ್ಚುವಂಥ ಮೇಲಂಗಿಯನ್ನು ಧರಿಸಿ, ಬಲಗೈಯ್ಯಲ್ಲಿ ರಾಜದಂಡ, ಎಡಗೈಯ್ಯಲ್ಲಿ ಉರಿಯುತ್ತಿದ್ದ ಮೊಂಬತ್ತಿ ಯನ್ನು ಹಿಡಿದು ರಾಣಿಯು ಮಲಗಿದ್ದ ಕೊಠಡಿಯ ಹತ್ತಿರ ಬಂದು ಒಂದೆರಡು ಸಲ ತಟ್ಟಿದನು. ಬಾಗಿಲು ತೆರೆಯಿತು. ಸಖಿಯೊಬ್ಬಳು ರಾಜನ ಕೈಯಲ್ಲಿದ್ದ ಮೊಂಬತ್ತಿಯನ್ನು ತೆಗೆದುಕೊಂಡು ಆರಿಸಿದಳು. ಸ್ವಲ್ಪ ಹೊತ್ತಾದನಂತರ ರಾಜನು ಕೊಠಡಿಯಿಂದ ಹೊರಬಿದ್ದನು.

ಕುದುರೆಯಾಳು ರಾಜನ ಗೌನಿನಂತಹದೇ ಒಂದನ್ನು ಸಂಪಾದಿಸಿದನು. ಕುದುರೆ ಲಾಯದಲ್ಲಿ ವಾಸಮಾಡುತ್ತಿದ್ದುದರಿಂದ ಮೈವಾಸನೆ ಹೋಗಲು ಚೆನ್ನಾಗಿ ಸ್ನಾನಮಾಡಿ, ಸುಗಂಧದ್ರವ್ಯವನ್ನು ಮೈಗೆ ಲೇಪನಮಾಡಿ ಕೊಂಡು ರಾಜನು ರಾಣೀವಾಸಕ್ಕೆ ಹೋಗುವ ದಾರಿಯಲ್ಲೇ ನಡೆದು ಬಾಗಿಲನ್ನು ತಟ್ಟಿದನು. ನಿದ್ದೆಗಣ್ಣಲ್ಲಿ ಎದ್ದು ಬಂದ ಸಖಿ, ಅವನ ಕೈಲಿದ್ದ ಮೋಂಬತ್ತಿಯನ್ನು ತೆಗೆದುಕೊಂಡು ಆರಿಸಿದಳು.

ಬಾಯಿಬಿಟ್ಟರೆ ಬಣ್ಣಗೇಡೆಂದು ಮೌನವಾಗಿಯೇ ಇದ್ದನು. ರಾಜನೂ ಕೂಡ ಬಹಳ ಯೋಚನೆಯೂದಾಗ ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ರಾಣಿಯು ಪತಿಗೆ ಎಲ್ಲೋ ಬಹಳ ಯೋಚನೆಯೆಂದು ಹೆಚ್ಚು ಮಾತನಾಡಲಿಲ್ಲ. ಸಂತೋಷದಿಂದ ಅವನನ್ನು ಬಾಹುಗಳಿಂದ ಬಿಗಿದಪ್ಪಿದಳು. ಅಂದು ಒಂದಲ್ಲ ಹಲವಾರು ಬಾರಿ ರಾಣಿಯು ಸ್ವರ್ಗಸುಖವನ್ನು ಪಡೆದಳು. ಅವನ ತಲೆಯಲ್ಲಿ ಕಾಡುತ್ತಿದ್ದ ಒಂದೇ ಯೋಚನೆಯೆಂದರೆ, ಅಲ್ಲಿಂದ ಹೇಗಾದರೂ ತಪ್ಪಿಸಿಕೊಂಡು ಹೋದರೆ ಸಾಕು, ಎಂದು.

ಮಾಲೀಸು ಮಾಡುವವನು ಕೊಠಡಿಯಿಂದ ಹೊರಬಿದ್ದ ಕೆಲವೇ ನಿಮಿಷಗಳಲ್ಲಿ ರಾಜನು ಬಂದು ಬಾಗಿಲನ್ನು ತಟ್ಟಿದನು. ರಾಜನನ್ನು ಕಂಡು ರಾಣಿಗೆ ಮಹದಾಶ್ಚರ್ಯವಾಯಿತು. ಎಂದೂ ಧೈರ್ಯವಾಗಿ ಮಾತನಾಡಿದವಳೇ ಅಲ್ಲ.

"ಏನು ಒಡೆಯಾ ಆಶ್ಚರ್ಯವಾಗುತ್ತದೆ! ಹಾಗೆ ಹೋಗಿ ಹೀಗೆ ಹಿಂತಿರುಗಿ ಬರುತ್ತಿದ್ದೀರಿ. ಇವತ್ತು ಒಂದು ಸಲವಲ್ಲ ಹಲವಾರು ಬಾರಿ ಸುಖದಿಂದ ಕಾಲ ಕಳೆದಿದ್ದೀರಿ. ಹೀಗೆ ಮಾಡಿದರೆ ನಿಮ್ಮ ಆರೋಗ್ಯವು ಕೆಡುತ್ತದೆ" ಎಂದಳು.

ರಾಜನಿಗೆ ದಿಗ್ಭ್ರಮೆಯಾಯಿತು. ಅವಾಕ್ಕಾಗಿ ನಿಂತನು. ಯಾರೋ ತನ್ನ ಗದ್ದುಗೆಯನ್ನು ಪಡೆಯಲು ಹೂಡಿರುವ ತಂತ್ರವಿರಬೇಕು. ಮಿತಿ ಮೀರಿ ಕೋಪ ಬಂದಿತು. ಬೇರೆ ಯಾರಾದರೂ ಆಗಿದ್ದಲ್ಲಿ "ನೀನು ಹೇಳುವುದೇ ಅರ್ಥವಾಗುತ್ತಿಲ್ಲ. ನಾನು ಬರಲೇ ಇಲ್ಲವಲ್ಲ ಹಾಗಾದರೆ ಬೇರೆ ಯಾರು ಬಂದಿದ್ದರು ಹೇಳು" ಎಂದು ರಾದ್ಧಾಂತವೇ ಮಾಡುತ್ತಿದ್ದನೋ ಏನೋ. ರಾಣಿಯನ್ನು ತನ್ನ ರಾಜದಂಡದಿಂದ ತಣಿಸಲು ತವಕಗೊಂಡವನಾಗಿದ್ದರೂ ಶಾಂತವಾಗಿ "ಆಸೆಯಾಯಿತು ಬಂದೆ. ಅದರಲ್ಲಿ ತಪ್ಪೇನು?" ಎಂದನು.

'ಹಾಗಲ್ಲ. ನಿಮ್ಮ ಆರೋಗ್ಯ ಕೆಡಬಹುದೂಂತ ಹೇಳಿದೆ'

'ನೀನು ಹೇಳುವುದು ಸರಿಯೇ .... ಒಳ್ಳೆಯದಕ್ಕಾಗಿಯೇ ಹೇಳುತ್ತಿರುವೆ' ಎಂದು ಅಲ್ಲಿಂದ ಕಾಲ್ತೆಗೆದನು. ಮನಸ್ಸಿನಲ್ಲಿ ಕೋಪವು

ಕೆಚ್ಚಿದ್ದಿತು. ಈ ರೀತಿ ಮಾಡಿರುವವನು ಅರಮನೆ ಬಿಟ್ಟು ಹೋಗುವ ಹಾಗಿಲ್ಲ. ಕೆಲಸದವರನ್ನೆಲ್ಲಾ ಎಬ್ಬಿಸಿ ವಿಚಾರಣೆ ಮಾಡಿದರೆ ನಗೆಗೇಡಾದೀತು. ಹಾಗೆಯೇ ಕಂಡುಹಿಡಿಯಬೇಕು. ಕೆಲಸ ಮಾಡಿದವನ ಗುಂಡಿಗೆ ಹೆದರಿಕೆಯಿಂದ ಇನ್ನೂ ಬಡಿಯುತ್ತಿರುತ್ತದೆ. ಮಲಗಿರುವರನ್ನೆಲ್ಲಾ ಮುಟ್ಟಿ ನೋಡಿದರಾಯಿತು ಎಂದು ನಿರ್ಧಾರಕ್ಕೆ ಬಂದನು.

ಕತ್ತಲಲ್ಲಿ ಮಲಗಿದ್ದ ಎಲ್ಲರ ಎದೆಯನ್ನು ಮುಟ್ಟಿ ಪರೀಕ್ಷಿಸಿದನು. ಒಬ್ಬನ ಗುಂಡಿಗೆಯು ಹೊಡೆದುಕೊಳ್ಳುತ್ತಿತ್ತು. ಕತ್ತಲಲ್ಲಿ ಅವನ ಮುಖವು ಕಾಣಿಸಲಿಲ್ಲ. ಮೊಂಬತ್ತಿ ಹಚ್ಚಿ ನೋಡಲು ಇಷ್ಟಪಡಲಿಲ್ಲ. ಅವನನ್ನು ಎಬ್ಬಿಸಿ ಶಿಕ್ಷಿಸಿದಲ್ಲಿ ಎಲ್ಲರ ಎದುರಿನಲ್ಲೂ ಅವಮಾನವೆಂದು ಅವನ ತಲೆಯ ಬಲಭಾಗದ ಕೂದಲನ್ನು ಕತ್ತರಿಸಿ, ಬೆಳಿಗ್ಗೆ ಶಿಕ್ಷಿಸಿದರಾಯಿತೆಂದು ಅಲ್ಲಿಂದ ನಡೆದನು.

ಕುದುರೆ ಮಾಲೀಸು ಮಾಡುವವನು ಮಹಾ ಕ್ರೂರನು. ದೊರೆಯು ಏಕೆ ಹೀಗೆ ಮಾಡಿದ್ದಾನೆಂದು ಅರ್ಥವಾಯಿತು. ದೊರೆಯು ಹೋದ ತಕ್ಷಣ ಎದ್ದು ಮಲಗಿದ್ದ ಎಲ್ಲರ ಕೂದಲನ್ನೂ ಅದೇ ರೀತಿ ಕತ್ತರಿಸಿದನು.

ಬೆಳಗಾಗುತ್ತಿದ್ದಂತೆ ರಾಜನು ಅರಮನೆಯ ಹೆಬ್ಬಾಗಿಲಿಗೆ ಬೀಗವನ್ನು ಹಾಕಿಸಿ ಎಲ್ಲ ಕೆಲಸದವರೂ ತನ್ನ ಮುಂದೆ ಟೋಪಿಯನ್ನು ತೆಗೆದು ನಡೆಯಬೇಕೆಂದು ಆಜ್ಞಾಪಿಸಿದನು. ಎಲ್ಲರ ಕೂದಲೂ ಒಂದೇ ಸಮನಾಗಿ ಕತ್ತರಿಸಿರುವುದನ್ನು ಕಂಡು ಆಶ್ಚರ್ಯವಾಯಿತು. ಈ ರೀತಿ ಮಾಡಿದ ಆಸಾಮಿ ಸಾಧಾರಣನಲ್ಲ. ಮಹಾ ಘಟಂಗನೇ ಇರಬೇಕೆಂದುಕೊಂಡನು.

ದೊರೆಯು ದುಡುಕಲಿಲ್ಲ. ಬೇಕಿದ್ದರೆ ಎಲ್ಲರನ್ನೂ ಚಿತ್ರಹಿಂಸೆಗೆ ಗುರಿಪಡಿಸಿ ಅಪರಾಧ ಮಾಡಿದವನನ್ನು ಕಂಡುಹಿಡಿಯಬಹುದಾಗಿತ್ತು. ಹಾಗೆ ಮಾಡಿದಲ್ಲಿ ಏನು ಪ್ರಯೋಜನ? ಅವನ ಕೃತ್ಯವು ಎಲ್ಲರ ಬಾಯಲ್ಲೂ ಇರುತ್ತದೆ.

ದೊರೆಯು ಎಲ್ಲರನ್ನೂ ನೋಡಿ ನಗುತ್ತಾ "ಈ ಕಾರ್ಯವನ್ನು ಮಾಡಿದವನು ಪುನಃ ಮಾಡದಿದ್ದರೆ ಒಳ್ಳೆಯದು. ಈ ರೀತಿ ಮಾಡುವುದಿಲ್ಲವೆಂದು ನನಗೆ ದೃಢವಾದ ನಂಬಿಕೆ ಇದೆ" ಎಂದನು.

ಎಲ್ಲರಿಗೂ ದೊರೆಯು ಹೀಗೇಕೆ ಹೇಳಿದನೆಂದು ಅರ್ಥವಾಗಲಿಲ್ಲ. ಅರ್ಥವಾದದ್ದು ಒಬ್ಬನಿಗೆ ಮಾತ್ರ. ಅಂದಿನಿಂದ ಅವನು ರಾಣಿವಾಸಕ್ಕೆ ಕಾಲಿಡಲಿಲ್ಲ.

# ಸಂಕೇತ

## ಗೈಡಿ ಮೂಪಸಾಂತ್

ಮಾರ್ಕಿಯಾನಸ್ ಡಿ ರೆನೆರ್ಡಾ ಕಿಟಕಿ ಬಾಗಿಲುಗಳನ್ನು ಹಾಕಿದ್ದರಿಂದ ಕತ್ತಲಾಗಿ, ಸುವಾಸನೆಯನ್ನು ಹೊರಹೊಮ್ಮುತ್ತಿದ್ದ ಕೋಣೆಯಲ್ಲಿ ಇನ್ನೂ ಮಲಗಿ ನಿದ್ರಿಸುತ್ತಿದ್ದಳು.

ಅವಳು ಮಲಗಿದ್ದ ಮಂಚವು ಅಷ್ಟೇನೂ ಎತ್ತರವಾಗಿರಲಿಲ್ಲ. ಬಹಳ ತಗ್ಗಾಗಿತ್ತು. ಚುಂಬನದಂತೆ ಮೃದುವಾದ, ನಯವಾದ, ಮಗ್ಗಲಾಸಿಕೆಗಳ ನಡುವೆ ಒಬ್ಬಂಟಿಗಳಾಗಿ, ದಾಂಪತ್ಯ ವಿಚ್ಛೇದನವನ್ನು ಪಡೆದಿದ್ದುದರಿಂದ ಏನೊಂದೂ ಯೋಚನೆಯಿಲ್ಲದೆ ನಿರಾತಂಕವಾಗಿ ಗಾಢವಾಗಿ ನಿದ್ರಿಸುತ್ತಿದ್ದಳು.

ನಡುಮನೆಯಲ್ಲಿ ಕೆಲಸಗಿತ್ತಿಗೂ ಮತ್ತು ತನ್ನ ಪ್ರಿಯಗೆಳತಿ ಬ್ಯಾನರೆಸ್ ಡಿ ಗ್ರಾಂಗೆರಿಗೂ ಗಟ್ಟಿಯಾಗಿ ಮಾತುಕಥೆಯಾಗುತ್ತಿದ್ದುದನ್ನು ಕೇಳಿ ಎಚ್ಚರವಾಯಿತು. ಕೆಲಸಗಿತ್ತಿಯು ಯಜಮಾನತಿಯು ಮಲಗಿದ್ದಾಳೆ, ಯಾರೂ ಎಚ್ಚರಿಸಕೂಡದೆಂದು ಹೇಳಿದ್ದಾಳೆ ಎಂದು ಹೇಳುತ್ತಿದ್ದಳು. ಬ್ಯಾರ್‌ನೆಸ್ಸಿಗೆ ಕೋಪವೇ ಬಂದಿತ್ತು. ಇಬ್ಬರ ಧ್ವನಿಯೂ ಬರಬರುತ್ತಾ ದೊಡ್ಡದಾಗಿ ಮಾತು ಬಿಸಿಯಾಯಿತು. ಮಾರ್ಕಿಯಾನಸ್‌ಳು ಎದ್ದು ಹಿಂಭಾಗದ ಬಾಗಿಲನ್ನು ತೆರೆದು, ಬಾಗಿಲಿಗೆ ಬಾಕಿದ್ದ ತೆರೆಯನ್ನು ಸರಿಸಿ ತಲೆ ಹಾಕಿದಳು. ಕೆದರಿದ ಕೂದಲು ತುಂಟಾಟವಾಡುವಂತೆ ಅಸ್ತವ್ಯಸ್ತವಾಗಿ ಮುಖವನ್ನು ಮುಚ್ಚಿದಾಗಿ ಅವಳು ಮತ್ತಷ್ಟು ಸುಂದರಳಾಗಿ ಕಂಡುಬಂದಳು.

" ಏನೇ ಇದು ಇಷ್ಟು ಬೇಗ ಬಂದಿದ್ದೀ. ಇನ್ನೂ ಒಂಬತ್ತು ಗಂಟೆ ಕೂಡ ಇಲ್ಲವಲ್ಲೇ ". ಎಂದು ಕೇಳಿದಳು ಮಾರ್ಕಿಯಾನಸ್.

ಸೊಬಗಿನ ಗಣಿಯಂತಿದ್ದ ಬ್ಯಾರ್‌ನೆಸ್‌ನ ಮುಖವು ಉದ್ವೇಗದಿಂದ ಬಿಳಚಿಕೊಂಡಿತ್ತು. ಗೆಳತಿಯನ್ನು ನೋಡಿ ತಕ್ಷಣ ಕಣ್ಣುಗಳಲ್ಲಿ ಧಾರಾಕಾರ

ವಾಗಿ ಅಶ್ರುಗಳು ಹರಿಯುತೊಡಗಿದವು. ಬಿಕ್ಕಿ ಬಿಕ್ಕಿ ಅತ್ತಳು. ಕಂಬನಿ ಹೆಪ್ಪುಗಟ್ಟಿದಾಗ ಮತ್ತೂ ಸುಂದರಳಾಗಿ ಕಂಡಳು. ಕಣ್ಣನ್ನು ಕೈಯ್ಯಿಂದ ಒರಸಿಕೊಂಡರೆ ಕೆಂಪಗಾಗಿ ಸೌಂದರ್ಯಕ್ಕೆ ಕಳಂಕವೆಲ್ಲಿ ಬರುತ್ತದೋ ಎಂದು ಕಪೋಲಗಳ ಮೇಲೆ ಹರಿದುಬಂದ ಬಿಂದುಗಳನ್ನು ಒರಸಿಕೊಳ್ಳಲಿಲ್ಲ. ' ಪ್ರಮಾದವಾದ ವಿಷಯವೊಂದು ನಡೆದಿದೆ " ಎಂದಳು.

' ಅಲ್ಲೇ ನಿಂತುಕೊಂಡು ಮಾತನಾಡುತ್ತಿದ್ದೀಯಲ್ಲಾ ಒಳಗೆ ಬರಬಾರದೆ. ''

ಬ್ಯಾರನೆಸ್ ಮಲಗುವ ಕೊಠಡಿಯನ್ನು ಪ್ರವೇಶಿಸಿ ಹಾಸಿಗೆಯ ಮೇಲೆ ಕುಳಿತಳು. ಮಾರ್ಕಿಯಾನಸ್ ಪುನಃ ಹಾಸಿಗೆಯಲ್ಲಿ ಮಲಗಿ " ಏನು ಸಮಾಚಾರ ಹೇಳು " ಎಂದಳು.

ಕೆಲಸಗಿತ್ತಿಯು ಕಿಟಕಿಯನ್ನು ತೆರೆದಾಗ ಸೂರ್ಯನ ಕಿರಣಗಳು ಕೊಠಡಿಯ ಎಲ್ಲೆಡೆ ಹರಡಿದವು. ಬ್ಯಾರನಸ್ ಪುನಃ ಬಿಕ್ಕಿ ಬಿಕ್ಕಿ ಅತ್ತು '' ನನಗೆ ಆಗಬಾರದ್ದು ಆಯಿತು. ನೆನಸಿಕೊಂಡರೆ ಮೈಯ್ಯೆಲ್ಲಾ ಜುಂ ಅನ್ನುತ್ತದೆ. ಅಸಹ್ಯವಾಗುತ್ತದೆ. ರಾತ್ರಿ ಒಂದು ನಿಮಿಷ ಕೂಡ ಕಣ್ಣು ಮುಚ್ಚಲಿಲ್ಲ. ಈಗಲೂ ಎದೆ ಡವ ಡವ ಎಂದು ಒಡೆದುಕೊಳ್ಳುತ್ತಿದೆ ನೋಡು ' ಎಂದು, ಮೃದುವಾಗಿದ್ದ ಮಾರ್ಕಿಯಾನಸ್ಸಿನ ಬಲಗೈಯನ್ನು, ಗಂಡಸರು ಹಗಲಿರುಳೂ ಬಯಸುವ, ಹುಡುಕಿದರೂ ಸಿಗದಂತಹ ಅದಕ್ಕಾಗಿ ಪ್ರಾಣವನ್ನು ಕೂಡ ಕೊಡಲು ಸಿದ್ಧಲಿರುವ ತನ್ನ ಕುಚಗಳ ಮೇಲೆ ಒತ್ತಿ ಹಿಡಿದಳು. ಗುಂಡಿಗೆಯು ಹೊಡೆದುಕೊಳ್ಳುತ್ತಿತ್ತು.

" ನೋಡೇ ! ಏನಾಯಿತು ಗೊತ್ತಾ ? ನೆನ್ನೆ ಸುಮಾರು ನಾಲ್ಕು ಗಂಟೆ ಸಮಯುವಿರಬಹುದು. ನಾಲ್ಕೂವರೆ ಆಗಿದ್ದರೂ ಆಗಿರಬಹುದು. ಎಷ್ಟು ಹೊತ್ತಿಗೋ ಜ್ಞಾಪಕಕ್ಕೆ ಬರುತ್ತಿಲ್ಲ. ನಡುಮನೆಯಲ್ಲಿ ಕಿಟಕಿಯ ಹತ್ತಿರ ಕುಳ್ಳಗಿರುವ ಕುರ್ಚಿ ಹಾಕಿಕೊಂಡು ಹೊರಗಡೆ ಬರುವವರನ್ನು ಹೋಗುವವರನ್ನು ನೋಡುತ್ತಾ ಕುಳಿತಿದ್ದೆ. ಯಾವಾಗಲೂ ನಾನು ಬೇಸರ ಬಂದಾಗಲೆಲ್ಲಾ ಈ ರೀತಿ ಕುಳಿತುಕೊಳ್ಳುತ್ತೇನೆ. ಪಕ್ಕದಲ್ಲಿ ರೈಲ್ವೇ ಸ್ಟೇಷನ್ ಇದೆ. ರೈಲುಗಳು ಬರುತ್ತಾ ಇರುತ್ತವೆ. ಹೋಗುತ್ತಿರುತ್ತವೆ. ಹೋಗಿಬರುವ

ಜನರ ಗುಂಪು ಎಲ್ಲವನ್ನೂ ನೋಡುತ್ತಿದ್ದರೆ ಹೊತ್ತೇ ಗೊತ್ತಾಗುವುದಿಲ್ಲ. ನೆನ್ನೆ ತಣ್ಣಗೆ ಗಾಳಿ ಬರುತ್ತಿತ್ತು. ರಸ್ತೆಯ ಕಡೆ ಬಗ್ಗಿ ನೋಡಿದೆ. ಎದುರು ಮನೆಯಲ್ಲಿ ಮುಖಕ್ಕೆ ಬಣ್ಣ ಹಚ್ಚಿಕೊಂಡು, ಲಕ್ಷಣವಾಗಿ ಅಲಂಕಾರ ಮಾಡಿಕೊಂಡು, ಒಬ್ಬ ಹೆಂಗಸು ಕಿಟಕಿ ಹತ್ತಿರ ಕುಳಿತಿದ್ದಳು. ಮೂರು ತಿಂಗಳಿಂದ ಮಳೆ ಬರುತ್ತಿದ್ದುದರಿಂದ ಆ ಕಡೆ ನೋಡೇ ಇರಲಿಲ್ಲ. ನೋಡಿದ ತಕ್ಷಣ ಅವಳು ಎಂತಹವಳೂಂತ ಗೊತ್ತಾಯಿತು. ಮನೆಯ ಎದುರಿಗೆ ಇದೆಲ್ಲಿ ಪ್ರಾರಬ್ಧ ಬಂದು ಸೇರಿಕೊಂಡಿದೇಂತ ಮನಸ್ಸಿಗೆ ಅಸಹ್ಯವಾಯಿತು. ಹಾಗೇ ಏನು ಮಾಡುತ್ತಾಳೋಂತ ನೋಡಿದೆ. ಓಡಾಡುವ ಹುಡುಗರು–ಮುದುಕರು, ಎಲ್ಲರನ್ನೂ ನೋಡಿ ನಗುತ್ತಿದ್ದಳು. ರಸ್ತೆಯಲ್ಲಿ ಹೋಗಿ ಬರುವವರಿಗೆ, ಅದು ಹೇಗೆ ಅವಳು ಅಲ್ಲಿದ್ದಾಳೇಂತ ಗೊತ್ತಾಗುತ್ತಿತ್ತೋ ತಿಳಿಯದು. ಕತ್ತೆತ್ತಿ ಅವಳನ್ನೇ ನೋಡುತ್ತಿದ್ದರು. ಒಂದು ರೀತಿ 'ಮೇಲೆ ಬರುತ್ತೀರಾ ?' ಎನ್ನುವ ಹಾಗೆ ಸಂಕೇತ ಮಾಡುತ್ತಿದ್ದಳು. ಕೆಲವರು 'ಈಗ ಪುರಸತ್ತಿಲ್ಲ' ಇನ್ನೊಂದು ಸಲ' ಎಂದರು. ಒಬ್ಬ 'ದುಡ್ಡಿಲ್ಲ' ಎಂದ. ಇನ್ನೊಬ್ಬ ಎಷ್ಟು ಧೈರ್ಯ' ಎಂದು ಗೊಣಗಿಕೊಂಡು ಹೋದನು.

"ಪಾಪ ! ಅದು ಅವಳ ವೃತ್ತಿ, ಹೊಟ್ಟೆಪಾಡಿಗೆ ಮಾಡುತ್ತಿದ್ದಳು. ಅವಳನ್ನು ನೋಡುತ್ತಿದ್ದ ನನಗೆ ತಮಾಷೆಯಾಗಿತ್ತು.

"ರಸ್ತೆಯಲ್ಲಿ ಹೋಗುವವರು ಯಾವ ರೀತಿ ಆಕರ್ಷಿತರಾಗುತ್ತಾರೋ ನೋಡೋಣಾಂತ ಕುತೂಹಲದಿಂದ ಬಗ್ಗಿ ನೋಡಿದೆ. ಅದೇ ಹೊತ್ತಿಗೆ ಒಬ್ಬಾತ ನೆಟ್ಟಗೆ ಅವಳ ಮನೆಯೊಳಗೆ ಹೋದನು. ಅವನು ಪ್ರವೇಶಿಸುತ್ತಿರುವ ಹಾಗೆ ಅವಳು ಕಿಟಕಿಯನ್ನು ಮುಚ್ಚಿದಳು. ಬೆಸ್ತರವನು ಗಾಳ ಹಾಕಿ ಮೀನನ್ನು ಹಿಡಿಯುವ ಹಾಗೆ ಹಿಡಿದು ಹಾಕಿದಳು. ಹೋದೋನು ಹನ್ನೆರಡು ಹೆಚ್ಚು ಅಂದರೆ ಇಪ್ಪತ್ತು ನಿಮಿಷಗಳ ಮೇಲೆ ಇರಲಿಲ್ಲ. ತಲೆ ಅಲ್ಲಾಡಿಸಿ ನಕ್ಕು ಸನ್ನೆ ಮಾಡುತ್ತಾಳೋ ಅಥವಾ ಕಣ್ಣಲ್ಲೇ ಸೂಚಿಸುತ್ತಾಳೋ ಏನು ಮಾಡಿ ಜನರನ್ನ ಆಕರ್ಷಿಸುತ್ತಾಳೆ ನೋಡೋಣ ಅನ್ನಿಸಿತು. ಅಪೆರಾ ಗ್ಲಾಸ (ಸಂಗೀತ ಪ್ರಧಾನ ನಾಟಕ ಮುಂತಾದುವನ್ನು ಮಂದಿರದಲ್ಲಿ ಕುಳಿತು ಸಮೀಪದಲ್ಲೇ ಕಾಣುವಂತೆ ನೋಡುವ ದೂರದರ್ಶಿ) ನ್ನು ತೆಗೆದುಕೊಂಡು ನೋಡಿದೆ. ಅವಳು ಮಾಡುತ್ತಿದ್ದುದು ಬಹಳ ಸಾಧಾರಣವಾಗಿತ್ತು. ರಸ್ತೆ

ಯಲ್ಲಿ ಬರುವವರನ್ನು ನೋಡಿ ನಗುತ್ತಿದ್ದಳು. ಆಮೇಲೆ ತಲೆಯನ್ನು ಸ್ವಲ್ಪ ಹಿಂದಕ್ಕೆ ಮಾಡಿ ಕಣ್ಣಲ್ಲೇ 'ಮೇಲೆ ಬರುತ್ತೀಯಾ' ಎಂದು ಸೂಚಿಸುತ್ತಿದ್ದಳು. ತಲೆಯನ್ನು ಕೂಡ ಎಷ್ಟು ಅಲ್ಲಾಡಿಸುತ್ತಿದ್ದಳು ಗೊತ್ತಾ.... ಅಲ್ಲಾಡಿಸುವುದೇ ಗೊತ್ತಾಗುತ್ತಿರಲಿಲ್ಲ. ಅಷ್ಟು ಸೂಕ್ಷ್ಮವಾಗಿ ನನ್ನ ಕೈಲಿ ಈ ರೀತಿ ಮಾಡಲು ಸಾಧ್ಯವಾ ಅನ್ನಿಸಿತು. ನೆಟ್ಟಗೆ ಕನ್ನಡಿ ಮುಂದೆ ನಿಂತು ಅವಳು ಮಾಡಿದ ಹಾಗೆ ಅನುಕರಿಸಿದೆ. ತಲೆಯನ್ನು ಆರೀತಿ ಆಡಿಸುವುದಕ್ಕೆ ಸ್ವಲ್ಪ ಕೌಶಲ್ಯವಿದ್ದರೆ ಸಾಕು. ಅವಳಿಗಿಂತ ಚೆನ್ನಾಗಿ ಅಭಿನಯಿಸಿದ್ದನ್ನು ನೋಡಿ ನನಗೇ ಆಶ್ಚರ್ಯವಾಯಿತು. ಮನಸ್ಸಿನಲ್ಲೇ ಹಿಗ್ಗಿ ಪುನಃ ಕಿಟಕಿಯ ಹತ್ತಿರ ಬಂದು ಕುಳಿತೆ.

ಪಾಪ! ಅವಳ ಕಡೆ ಯಾರೂ ತಿರಗಿ ಕೂಡ ನೋಡಲಿಲ್ಲ. ಅವಳಿಗೆ ಅದೃಷ್ಟವಿಲ್ಲವೆಂದುಕೊಂಡೆ. ರಸ್ತೆಯಲ್ಲಿ ನಡೆಯುವವರೆಲ್ಲಾ ನಮ್ಮ ಮನೆಯ ಕಡೆ ಬರತೊಡಗಿದರು. ಈ ರೀತಿ ಹೊಟ್ಟೆ ಹೊರೆದುಕೊಳ್ಳುವರ ಜೀವನವು ನಿಜವಾಗಿ ಬಹು ಕಷ್ಟಕರವಾದುದು. ಎಲ್ಲೋ ಒಂದೊಂದು ಸಲ ಸಂತೋಷ ಸಿಗಬಹುದು. ಬರುವ ಗಿರಾಕಿಗಳೆಲ್ಲಾ ಒಳ್ಳೆಯರೂಂತ ಹೇಗೆ ಹೇಳಲು ಸಾಧ್ಯ?. ಎಲ್ಲಾ ರೀತಿಯ ಜನರೂ ಇರುತ್ತಾರೆ.

ಹರೆಯದ ಹುಡುಗರು, ಬೆಳ್ಳಗಿರರುವವರು, ಕಪ್ಪಗಿರುವವರು, ವೃದ್ಧರು, ಸುಂದರವಾಗಿರುವವರು, ಕುರೂಪಿಗಳು ಎಲ್ಲರೂ ನನ್ನನ್ನೇ ನೋಡತೊಡಗಿದರು. ಕೆಲವರು ನನ್ನ-ನಿನ್ನ ಯಜಮಾನರಿಗಿಂತ ಚೆನ್ನಾಗಿದ್ದರು. ನೋಡದ್ಯಾ ಪುರೆತೆ ! ನಿನ್ನ ಯಜಮಾನ ಈಗ ಯಾರೂ ಇಲ್ಲವಲ್ಲ. ವಿಚ್ಛೇದನವಾಗಿದೆಯಲ್ಲ ನಿನಗೆ!

"ನಾನು ಸನ್ನೆ ಮಾಡಿದರೆ ಬರುತ್ತಾರಾ? ಎಂದು ಹಚ್ಚು ಆಸೆ ತಲೆಗೆ ಹೊಕ್ಕಿತು. ಅದೂ ನನ್ನಂತಹ ಗೌರವಸ್ಥಳಾದ ಹೆಂಗಸು ಈ ರೀತಿ ಅನುಕರಿಸಿದರೆ ಏನಾಗುತ್ತದೋ ನೋಡೋಣವೆಂದು ಬಹಳ ಆಸೆಯಾಯಿತು. ಕೆಲವರ ಮನಸ್ಸಿಗೆ ಏನಾದರೂ ತೋರಿದರೆ ಮಾಡುವವರೆಗೂ ನೆಮ್ಮದಿಯಿರುವುದಿಲ್ಲ. ತಡೆದುಕೊಳ್ಳುವುದೇ ಕಷ್ಟ. ಇದೆಲ್ಲಾ ಹೇಳಿದರೆ ನನ್ನನ್ನು ನೀನು ಹಚ್ಚೇಂತ ಹೇಳುತ್ತೀಯೋ ಏನೋ. ಹೆಂಗಸರ ಮನಸ್ಸೂ, ಕಪಿಗಳ ಮನಸ್ಸೂ ಒಂದೇ. (ಹಾಗೇಂತ ನಮ್ಮ ಡಾಕ್ಟರು ಹೇಳಿದರು) ಯಾಕೆ

ಗೊತ್ತಾ ? ಮದುವೆಯಾದ ಹೊಸದರಲ್ಲಿ ಎಲ್ಲ ವಿಷಯದಲ್ಲೂ ಗಂಡನನ್ನು ಅನುಕರಿಸಲು ಇಷ್ಟಪಡುತ್ತೇವೆ. ಅವನಿಗೆ ಏನೇನು ಇಷ್ಟವೋ ಅವೆಲ್ಲಾ ನಮಗೆ ಪ್ರಿಯವಾದುವು ಎಂದು ತಿಳಿದುಕೊಳ್ಳುತ್ತೇವೆ. ಸ್ವಲ್ಪ ದಿನಗಳಾದ ಮೇಲೆ ಪ್ರೇಮಿ, ಆಮೇಲೆ ಗೆಳತಿಯರು. ಕಡೆಗೆ ನಮ್ಮ ಪಾಪಕಾರ್ಯಗಳನ್ನು ಕೇಳಿ ಏಸುವಿನ ಪರವಾಗಿ ಕ್ಷಮಿಸುವ ಪಾದ್ರಿಗಳು. ಅವರ ಹಾಗೆ ಮಾತ ನಾಡುವುದು, ನಡೆಯುವುದು ಎಲ್ಲಾ ಮಾಡುತ್ತೇವೆ."

ಬಾರನೆಸ್ ವಿಷದವಾಗಿ ಎಲ್ಲವನ್ನೂ ಹೇಳುತ್ತಿರುವುದನ್ನು ಕಂಡು, ಮಾರ್ಕ್ವಿಯೂನಸ್ ಏನಾಯಿತೆಂದು ತಿಳಿದುಕೊಳ್ಳಲು "ಅದೆಲ್ಲಾ ಇರಲಿ, ಏನಾಯಿತು ಅದನ್ನು ಹೇಳಬಾರದಾ ? ಸರಿ, ಅವಳು ಮಾಡಿದ ಹಾಗೆ ಮಾಡ ಬೇಕೂಂತ ಅನ್ನಿಸಲಿಲ್ಲ ತಾನೆ ?"

" ನನ್ನ ಮನಸ್ಸಿಗೆ ಏನಾದರೂ ಬಂದರೆ ಪೂರ್ತಿ ಮಾಡುವವರೆಗೂ ಸುಮ್ಮ ನಿರುವುದಿಲ್ಲ. ಮೊದಲು ನೋಡಿ ನಕ್ಕರೆ ಏನು ಏನಾಗುತ್ತದೋ ನೋಡೋಣ, ಲಕ್ಷಣವಾಗಿರುವವನನ್ನು ನೋಡಿ ಹೀಗೆ ಮಾಡೋಣಾಂದುಕೊಂಡೆ. ಅಷ್ಟು ಹೊತ್ತಿಗೆ ಸರಿಯಾಗಿ ಎತ್ತರವಾಗಿ, ಲಕ್ಷಣವಾಗಿದ್ದವನೊಬ್ಬ ರಸ್ತೆಯಲ್ಲಿ ಕಾಣಿಸಿ ಕೊಂಡ. ಮೊದಲು ನಕ್ಕೆ, ಅವನೂ ನಕ್ಕ. ನನಗೆ ತಿಳಿಯದ ಹಾಗೆ ತಲೆ ಯನ್ನೂ ಅಲ್ಲಾಡಿಸಿಬಿಟ್ಟೆ. ಅವನು ಸರಿಯೆಂದು ತಲೆಯನ್ನಲ್ಲಾಡಿಸಿ, ನೆಟ್ಟಗೆ ಮನೆಯ ಹೆಬ್ಬಾಗಲಿಗೇ ಬಂದುಬಿಟ್ಟ.

'' ಆಗ ಹೇಗಾಯಿತು ಗೊತ್ತಾ ? ಏನು ಮಾಡಲಿಕ್ಕೂ ತೋಚಲಿಲ್ಲ. ಎಷ್ಟು ಹೆದರಿದೆ ಅನ್ನೋದನ್ನು ಹೇಳೋದಕ್ಕೆ ಆಗೋಲ್ಲ. ನನ್ನ ಗತಿ ಆಯಿತು ಅಂದುಕೊಂಡೆ. ಮನೆಯಲ್ಲಿರುವ ಆಳುಕಾಳುಗಳು ನೋಡಿದರೇನುಗತಿ ? ನಮ್ಮ ಯಜಮಾನರು ನನ್ನನ್ನು ಸರ್ವಸ್ವವೆಂದು ತಿಳಿದುಕೊಂಡಿದ್ದಾರೆ. ಹೀಗಿರುವಾಗ ಅವರಿಗೆ ದ್ರೋಹಮಾಡುವುದು ಸರಿಯಲ್ಲ. ಬಂದವನು ಮನೆಯ ಮುಂಭಾಗದಲ್ಲಿದ್ದ ಗಂಟೆಯನ್ನು ಬಾರಿಸುವುದಕ್ಕೆ ಮುಂಚೆನೇ ನನ್ನನ್ನ ಆತ ತಪ್ಪು ತಿಳಿದುಕೊಂಡಿದ್ದಾನೆ. ತಿಳಿದವರೂಂತ ಅಂದುಕೊಂಡು ಹಾಗೆ ಮಾಡಿದೆ. ದಯವಿಟ್ಟು ಹೋಗಿ ಎಂದು ಕೇಳಿಕೊಳ್ಳೋಣಾಂತ ಮಹಡಿ ಮೆಟ್ಟಿಲುಗಳನ್ನು ದಡದಡಾಂತ ಇಳಿದು, ಬಾಗಿಲು ತೆರೆದು ದಯವಿಟ್ಟು ಹೋಗಿ, ನನಗೆ ತಿಳಿದವರೂಂತ ತಪ್ಪಾಗಿ ನೆನಸಿದೆ ಎಂದೆ.

"ಅವನು ಗಟ್ಟಿಯಾಗಿ ನಕ್ಕು 'ನೀನೇನೂಂತ ನನಗೆ ಚೆನ್ನಾಗಿ ಗೊತ್ತಿದೆ. ನಾನೂ ಕಸುಬುದಾರ, ನಿನಗೆ ಮದುವೆಯಾಗಿದೆಯಲ್ಲವೆ? ಬಹುಶಃ 40 ಫ್ರಾಂಕ್ ನಿನ್ನ ರೇಟೂಂತ ಕಾಣಿಸುತ್ತೆ. ಕೊಡುತ್ತೇನೆ. ಅಷ್ಟೇ ತಾನೆ?' ಎಂದು ನನ್ನನ್ನು ತಳ್ಳಿಕೊಂಡು ಒಳಗೆ ಬಂದು ಬಾಗಿಲು ಹಾಕಿದ. ನಾನು ಏನೂ ತೋಚದೆ ಬೆಪ್ಪಾಗಿ ನಿಂತುಬಿಟ್ಟೆ. ಮಾತನಾಡಲು ಹೋದಾಗ ನಾಲಿಗೆ ಅಂಗಳಿಗೇ ಅಂಟಿಕೊಂಡಿತು. ಅವನು ನನ್ನನ್ನು ಮುತ್ತಿಟ್ಟು, ಸೊಂಟಕ್ಕೆ ಕೈಹಾಕಿ 'ಡ್ರಾಯಿಂಗ್ ರೂಮಿಗೆ (ಅತಿಥಿಗಳು ಬಂದಾಗ ಕೂಡಿಸುವ ಕೋಣೆ) ನಡಿ' ಎಂದ. ಡ್ರಾಯಿಂಗ್ ರೂಮಿನ ಬಾಗಿಲು ಹಾರಾಗಿ ತೆರದಿತ್ತು. ಕೊಠಡಿಯ ಒಳಗೆ ಬಂದು ಸುತ್ತಾ ಹರಾಜು ಹಾಕುವನು ಪದಾರ್ಥಗಳ ಬೆಲೆ ಕಟ್ಟುವಂತೆ ಎಲ್ಲವನ್ನೂ ನೋಡಿ 'ರೂಮು ಲಕ್ಷಣವಾಗಿದೆ. ನಿನಗೆ ಹಣಕಾಸಿನ ತೊಂದರೆಯಾಗಿರಬೇಕು. ಅಲ್ಲವೆ?' ಎಂದ.

"ನಾನು 'ಹಾಗೇನಿಲ್ಲ ನನಗೆ ದುಡ್ಡೇನು ಬೇಕಾಗಿಲ್ಲ. ಯಜಮಾನರು ಬರುವ ಹೊತ್ತಾಯಿತು. ತಪ್ಪು ತಿಳಿದುಕೊಂಡಿದ್ದೀರಾ. ದಯವಿಟ್ಟು ಹೋಗಿ' ಎಂದೆ. ಅವನು ನೋಡುವುದಕ್ಕೆ ಒಳ್ಳೇ ಕೊರವ ಇದ್ದ ಹಾಗಿದ್ದ ಕಣೆ. ಅದಕ್ಕೆ ಅವನೇನೆಂದ ಗೊತ್ತಾ? 'ನಿನ್ನ ಗಂಡ ಎಂತಹವನೂ ಅನ್ನೋದೂ ನನಗೆ ಗೊತ್ತು. ಅವನು ಬಂದರೆ ಕುಡಿಯುವುದಕ್ಕೆ ನಾಲ್ಕು ಫ್ರಾಂಕ್ ಕೊಡುತ್ತೇನೆ. ಅವನಿಗೆ ಬೇಕಾಗಿರೋದೂ ಅಷ್ಟೆ. ಅದನ್ನು ತೆಗೆದುಕೊಂಡು ನೆಟ್ಟಗೆ ಸೇಂದಿ ಕುಡಿಯಲು ಹೋಗುತ್ತಾನೆ. ಅಷ್ಟೇತಾನೆ' ಎಂದು ನಮ್ಮ ಯಜಮಾನರ ಫೋಟೋವನ್ನು ನೋಡಿ 'ಇವನೇನೋ ನಿನ್ನ ಯಜಮಾನ?' ಎಂದು ಕೇಳಿದ.

"ನಾನು 'ಹೌದು' ಎಂದು ತಲೆಯಲ್ಲಾಡಿಸಿದೆ.

'ಪರವಾಗಿಲ್ಲ, ಲಕ್ಷಣವಾಗೇ ಇದ್ದಾನೆ. ಆದರೆ ಪಕ್ಕಾ ಲಫಂಗನೇ' ಎಂದು ಅಲ್ಲೇ ಇದ್ದ ನಿನ್ನ ಫೋಟೋವನ್ನು ನೋಡಿ 'ಇದಾರು? ನಿನ್ನ ಗೆಳತೀನಾ?' ಎಂದು ಕೇಳಿದ.

"ಆ ಫೋಟೋದಲ್ಲಿ ನೀನು ಲೋನೆಕ್ (ಕತ್ತು, ಸ್ವಲ್ಪ ಭುಜಗಳು ಕಾಣಿಸುನಂಥ) ಲಂಗ ಹಾಕಿಕೊಂಡಿದ್ದೆ. ನಾನು ಏನು ಹೇಳತಿದ್ದೇನೆನ್ನೋದು ನನಗೆ ಗೊತ್ತಾಗಲಿಲ್ಲ. 'ಹೌದು' ಎಂದೆ.

"ಮುದ್ದಾಗಿದ್ದಾಳೆ. ನನಗೆ ಪರಿಚಯ ಮಾಡಿಕೊಡುತ್ತೀಯಾ?' ಎಂದ.

"ಅಷ್ಟುಹೊತ್ತಿಗೆ ಐದು ಗಂಟೆ ಹೊಡೆಯಿತು. ಪ್ರತಿ ದಿವಸ ನಮ್ಮವರು ಐದೂವರೆ ಗಂಟೆಗೆ ಬರುತ್ತಾರೆ. ಇವನಿರುವಾಗ ಬಂದರೇನು ಗತೀಂತ ತಲೆಯೇ ಕೆಟ್ಟುಹೋಯಿತು. ಹೇಗಾದರೂ ಮಾಡಿ ಸಾಗಹಾಕಬೇಕೂಂತ ಅಂದುಕೊಂಡೆ ಎಂದು ಬ್ಯಾರನೆಸ್ ಬಿಕ್ಕಿ-ಬಿಕ್ಕಿ ಅತ್ತಳು.

ಮಾರ್ಕಿಯಾನಸ್ "ನೋಡುವುದಕ್ಕೆ ಲಕ್ಷಣವಾಗಿದ್ದನಾ?" ಎಂದು ಕೇಳಿದಳು.

"ಹ್ಞಾ."

"ಹಾಗಾದರೆ ನಿನ್ನ ಆಕ್ಷೇಪಣೆಯೇನು?"

"ಅವನು ಏನು ಹೇಳಿದ ಗೊತ್ತಾ....ಅವನು ಹೇಳಿದ್ದನ್ನು ನೆನಸಿಕೊಂಡರೆ ಈಗೂ ಎದೆ ಹೊಡೆದುಕೊಳ್ಳುತ್ತದೆ. ನನಗೆ ಏನೂ ತೋಚುತ್ತಿಲ್ಲ."

ಮಾರ್ಕಿಯಾನಸ್ಸಳು ಹಾಸಿಗೆಯಲ್ಲೇ ಎದ್ದು ಕುಳಿತು ಸ್ವಲ್ಪ ಹೊತ್ತು ಯೋಚಿಸಿ "ಅವನನ್ನು ಅರೆಸ್ಟ್ (ದಸ್ತಗಿರಿ) ಮಾಡಿಸು" ಎಂದಳು.

''ಚೆನ್ನಾಗಿ ಹೇಳಿದೆ. ಏನೂಂತಲೇ ಅರೆಸ್ಟ್ ಮಾಡಿಸುವುದು, ಅರೆಸ್ಟ್ ಮಾಡಿಸಿ ಲಾಕಪ್‌ನಲ್ಲಿ ಹಾಕಿಸಬೇಕಾ? ಯಾವ ಕಾರಣಕ್ಕೆ?''

"ಅದಕ್ಕೇನು ಕಷ್ಟ. ಪೋಲೀಸ್ ಸ್ಟೇಷನ್ನಿಗೆ ಹೋಗಿ, ಈ ಮನುಷ್ಯನು ಮೂರು ತಿಂಗಳಿಂದ ಹಿಂಬಾಲಿಸುತ್ತಿದ್ದಾನೆ. ನಿನ್ನೆ ಮನೆಯ ಒಳಗೇ ನುಗ್ಗಿದ್ದಾಂತ ಹೇಳಿದರೆ ಆಯಿತಮ್ಮ."

"ಅವನು ನಡೆದಿದ್ದೆಲ್ಲಾ ಹೇಳಿದರೆ?"

''ಅವನನ್ನು ನಂಬೊಲ್ಲ. ನೀನು ಶುದ್ಧ ಪೆದ್ದು ಕಾಣೆ! ನಿನ್ನನ್ನೇ ನಂಬುತ್ತಾರೆ. ನಿನ್ನಂಥ ಗೌರವಸ್ಥಳು ಹೋಗಿ ದೂರು ಕೊಟ್ಟರೆ ಅವರು ನಂಬದೆ ಏನು?''

"ನನ್ನ ಕೈಲಿ ಆಗೊಲ್ಲ. ಖಂಡಿತ ದೂರು ಕೊಡೊಲ್ಲ."

" ನೀನು ಧೈರ್ಯಮಾಡಿ ಕೊಡಲೇಬೇಕು. ಇಲ್ಲದಿದ್ದರೆ ಕಷ್ಟ."

" ಅರೆಸ್ಟ್ ಮಾಡಿಸಿದೇಂತ ಇಟ್ಟುಕೋ. ಅವನು ಹೀನಾಮಾನವಾಗಿ ಮಾತನಾಡಿದರೆ ?"

" ಆಗ ಪೋಲೀಸಿನವರಿಗೇ ಅವನು ಎಂಥಹವನೂಂತ ಗೊತ್ತಾಗುತ್ತದೆ. ಖಂಡಿತ ಅವನಿಗೆ ಶಿಕ್ಷೆಯಾಗುತ್ತೆ. "

" ಏನು ಶಿಕ್ಷೆ ? "

" ನಿನಗೆ ನಷ್ಟ ಕಟ್ಟಿಕೊಡಬೇಕಾಗುತ್ತದೆ. ಒಂದು, ಈ ವಿಚಾರದಲ್ಲಿ ಅಯ್ಯೋ ಪಾಪ, ಅನ್ನಬಾರದು. "

" ನಷ್ಟ ಕಟ್ಟಿಕೊಡಬೇಕೆಂದೆಯಲ್ಲಾ. ಒಂದು ವಿಷಯ ಮನಸ್ಸನ್ನು ಕಾಡುತ್ತಿದೆ. ಅವನು ಹೋಗುವಾಗ ನಲವತ್ತು ಫ್ರಾಂಕ್ ಮೇಜಿನ ಮೇಲೆ ಬಿಟ್ಟು ಹೋಗಿದ್ದಾನೆ ".

" ನಲವತ್ತು ಫ್ರಾಂಕ್ ?".

" ಹೌದೇ .... ನಲವತ್ತು ಫ್ರಾಂಕ್ "

" ಹೌದು. "

" ನನಗೆ ಯಾರಾದರೂ ಅಷ್ಟು ಕೊಟ್ಟಿದ್ದರೆ ನನ್ನ ಗೌರವಕ್ಕೆ ಬಹಳ ಕಡಿಮೇಂತ ಮನಸ್ಸಿಗೆ ನೋವಾಗುತ್ತಿತ್ತು "

" ಅದಿರಲಿ, ಆ ದುಡ್ಡನ್ನೇನು ಮಾಡುವುದು ? ".

ಮಾರ್ಕೆಯಾನಸ್ಸಳು, ಎರಡು ನಿಮಿಷಗಳು ಅನುಮಾನಿಸಿ ಗಂಭೀರವಾಗಿ " ಆ ದುಡ್ಡನ್ನು ಒಳ್ಳೇ ರೀತಿಯಲ್ಲಿ ಖರ್ಚು ಮಾಡುವುದಕ್ಕೆ ಒಂದೇ ದಾರಿ. ನಿನ್ನ ಗಂಡನಿಗೆ ಅದರಲ್ಲಿ ಯಾವುದಾದರೂ ಪದಾರ್ಥವನ್ನು ಕೊಂಡು ಪ್ರೆಸೆಂಟ್ ಮಾಡು. ಅದೇ ನ್ಯಾಯವಾದದ್ದು !" ಎಂದಳು.



# ಡಿಸಿಯಸ್ ಮುನ್ಡಸ್ ಹಿಡಿದ ಅಡ್ಡದಾರಿ

## ಇಟಲಿಯ ಒಂದು ಐತಿಹ್ಯ

ಬಹಳ ಹಿಂದಿನ ಮಾತು. ರೋಮಿನಲ್ಲಿ ಪಾಲಿನ ಎಂಬ ಒಬ್ಬಳು ಯುವತಿಯಿದ್ದಳು. ಸತ್ಕುಲಪ್ರಸೂತೆ. ಇತರರಿಗೆ ಮೇಲ್ಪಂಕ್ತಿಯಾಗಿರುವ ರೀತಿ ಸಕಲ ವಿಷಯದಲ್ಲೂ ನಡೆದುಕೊಳ್ಳುತ್ತಿದ್ದಳು. ಆಗರ್ಭ ಶ್ರೀಮಂತಳು. ಮನಮೋಹಕ ರೂಪಲಾವಣ್ಯ. ಆಚಾರಶೀಲೆ. ಸಣ್ಣ ಊರಾಗಿದ್ದ ರೋಮ್ ಸಾಮ್ರಾಜ್ಯವು ವಿಕಸಿತವಾಗಿ ನಾಲ್ಕೂ ದಿಕ್ಕುಗಳಲ್ಲಿ ಹರಡಿತ್ತು. ನಾಗರೀಕತೆಯು ಉಚ್ಛ್ರಂಕಲಾವಸ್ಥೆಯನ್ನು ಮುಟ್ಟಿತ್ತು. ನಾಗರಿಕತೆಗೆ ಬೆನ್ನಂಟೆ ಅನೀತಿಯೂ ಕೂಡ ಎಲ್ಲೆಲ್ಲೂ ತಾಂಡವವಾಡುತ್ತಿದ್ದ ಕಾಲ. ವಾತಾವರಣಕ್ಕೆ ಅನುರೂಪವಾಗಿ ಜನರ ದೃಷ್ಟಿಕೋಣ, ಜೀವನ ಮತ್ತು ನಡತೆ ಎಲ್ಲವೂ ಬದಲಾಯಿಸುತ್ತದೆ. ಹೆಂಗಸರೂ ಪ್ರಭಾವಿತರಾಗಿದ್ದರು. ಪರಿವರ್ತನೆಯಾಗುತ್ತಿದ್ದ ಸಮಯದಲ್ಲಿ ಪಾಲಿನಳು ಗುಣವಂತಳೂ, ಶೀಲವಂತಳೂ, ಆಗಿದ್ದಳು. ಉತ್ತಮ ಕುಲದ ಸ್ಯಾಟುರಿನಾನನ್ನು ಮದುವೆಯಾದಳು.

ರೋಮಿನಲ್ಲೇ ಹೆಸರುವಾಸಿಯಾದ ಅಶ್ವಾರೋಹಿ ಡಿಸಿಯಸ್ ಮುನ್ಡಸ್, ಪಾಲಿನಳ ಮನಮೋಹಕ ರೂಪವನ್ನು ನೋಡಿ ಮನಸೋತನು.

ಒಂದು ದಿವಸ ತಾನು ಅನುರಕ್ತನಾಗಿರುವೆನೆಂದು ತಿಳಿಸಿದನು. ಅವಳು ಕಿವಿಗೇ ಹಾಕಿಕೊಳ್ಳಲಿಲ್ಲ. ಬೆಲೆ ಬಾಳುವ ವಸ್ತುಗಳನ್ನು ಕಳುಹಿಸಿಕೊಟ್ಟನು. ಅವುಗಳೆಲ್ಲಾ ತಕ್ಷಣವೇ ವಾಪಸಾದವು. ಅವಳು ತಿರಸ್ಕರಿಸಿದಷ್ಟೂ ಪ್ರೇಮ ಜ್ವಾಲೆಯು ಮತ್ತಷ್ಟು ಡಿಸಿಯುಸ್ಸನ ಮನಸ್ಸನ್ನು ನೂರ್ಮಡಿಯಾಗಿ ಆವರಿಸಿತು. ಒಂದು ದಿವಸ ರಾತ್ರಿ ಅವಳು ತನ್ನೊಟ್ಟಿಗೆ ಮಲಗಿದರೆ 200,0000 ಅಟಿಕ್ ಡ್ರಾಮುಗಳನ್ನು (ಬೆಳ್ಳಿಯ ನಾಣ್ಯ – ದ್ರಮ್ಮ : ಕನ್ನಡ ಶಾಸನ)] ಕೊಡಲು ಸಿದ್ಧನಾಗಿರುವುದಾಗಿ ಹೇಳಿ ಕಳುಹಿಸಿದನು. ಅದಕ್ಕೂ ಅವಳು

ಪ್ರಭಾವಿತಳಾಗಲಿಲ್ಲ. ಕಡೆಗೆ ತನ್ನ ಆಸೆಯ ಗೋಪುರವು ನುಚ್ಚುನೂರಾದುದನ್ನು ಕಂಡು ಸಾಯುವವರೆಗೂ ಉಪವಾಸವಿರುವುದಾಗಿ ಹಟ ತೊಟ್ಟನು. ಅದೇ ರೀತಿ ಸತ್ಯಾಗ್ರಹವನ್ನೂ ಹೂಡಿಯೇಬಿಟ್ಟ. ಹಾಗಾದರೂ ಅವಳು ದಾರಿಗೆ ಬರುತ್ತಾಳೋ ಏನೋ ಎಂದು. !

ಡಿಸಿಯಸ್ಸಿನ ಮನೆಯಲ್ಲಿ ಕೆಲಸಕ್ಕೆ ಇದ್ದ ಈಡಾಗೆ ಯಜಮಾನನು ಈ ರೀತಿ ಸತ್ಯಾಗ್ರಹವನ್ನು ಹೂಡಿರುವುದನ್ನು ನೋಡಿ ಪರಿತಾಪವಾಯಿತು. ಈಡಾಳನ್ನು ಡಿಸಿಯಸ್ಸಿನ ತಂದೆ ಗುಲಾಮಗಿರಿಯಿಂದ ಮುಕ್ತಳನ್ನಾಗಿ ಮಾಡಿದ್ದನು. ಅವಳಿಗೆ ಅಸಾಧ್ಯ ಕೇಡಿಗ ಬುದ್ಧಿ. ಡಿಸಿಯಸ್ಸಿಗೆ ಅನೇಕ ವಿಧವಾಗಿ ಸಮಾಧಾನಮಾಡಿದಳು. ಅವನು ಸಗ್ಗದಿದ್ದುದನ್ನು ನೋಡಿ ಕಿವಿಯಲ್ಲಿ ಮೆಲ್ಲಗೆ ಒಂದು ರಾತ್ರಿ ಪಾಲಿನಳು ಅವನ ಸಹಭಾಗಿನಿಯಾಗುವಂತೆ ಮಾಡುತ್ತೇನೆಂದಳು. ಮನಸ್ಸನ್ನು ಆವರಿಸಿದ್ದ ನಿರಾಶೆಯ ಅಂಧಕಾರದಲ್ಲಿ ಅವಳ ಮಾತುಗಳಿಂದ ಆಸೆಯ ದೀಪ ಜ್ವಲಿಸಿ, ಮನಸ್ಸಿಗೆ ಹರ್ಷವಾಯಿತು. ಈಡಾ, ಕಾರ್ಯವು ಕೈಗೂಡಲು 50,000 ಡ್ರಾಮುಗಳು ಬೇಕಾಗುತ್ತದೆಂದಳು. ಡಿಸಿಯಸ್ ಸರಿ ಎಂದು ತಲೆಯಲ್ಲಾಡಿಸಿದನು.

ಈಡಾ ಹಣವನ್ನು ತೆಗೆದುಕೊಂಡು ಹೊರಟಳು. ತನ್ನ ಯಜಮಾನನು ಪಾಲಿನಳಿಗೆ ಹಣದ ಆಸೆಯನ್ನು ತೋರಿಸಿದ್ದು ಶುದ್ಧ ತಪ್ಪು. ಶ್ರೀಮಂತ ಹೆಂಗಸರು ಹಣದ ಆಸೆಗೆ ಭ್ರಷ್ಟರಾಗುತ್ತಾರೆಂಬುದು ಮೂರ್ಖತನ ಅಷ್ಟೆ ! ಪಾಲಿನಳಿಗೆ ಈಸಿಸ್ [ಐಗುಪ್ತರ ಫಲಪ್ರದಾಯಿನಿ ದೇವತೆ. ಒಂದು ಕಾಲದಲ್ಲಿ ಮಹಾಶಕ್ತಿ] ದೇವತೆಯ ಮೇಲೆ ಅಸಾಧ್ಯ ಭಕ್ತಿಯಿರುವುದು ಇವಳಿಗೆ ಚೆನ್ನಾಗಿ ಗೊತ್ತಿತ್ತು. ನೆಟ್ಟಗೆ ಇಸಿಸ್ ದೇವತೆಯ ದೇವಾಲಯಕ್ಕೆ ಹೋಗಿ ಪೂಜಾರಿಗಳನ್ನು ಕಂಡು, ತನ್ನ ಯಜಮಾನನಿಗೆ ಇಷ್ಟವಾದುದನ್ನು ನೆರವೇರಿಸಿಕೊಟ್ಟಲ್ಲಿ 25,000 ಡ್ರಾಮುಗಳನ್ನು ಕೊಡುವುದಾಗಿ ಹೇಳಿದಳು. ಪೂಜಾರಿಗಳು ಹಣದ ಆಸೆಗೆ ನೆರವೇರಿಸಲು ಒಪ್ಪಿಕೊಂಡರು.

ಮಾರನೆಯ ದಿವಸ ಹಿರಿಯ ವೃದ್ಧ ಅರ್ಚಕನು ಪಾಲಿನಳ ಮನೆಗೆ ಹೋಗಿ, ಅವಳೊಡನೆ ಏಕಾಂತವಾಗಿ ಮಾತನಾಡಬೇಕೆಂದು ಕೇಳಿಕೊಂಡನು. 'ಈಸಿಸ್‌ನ ಒಡನಾಡಿ ಅನೂಬಿಸ್ (ಸಮಾಧಿಗಳನ್ನು ಕಾಯುವ, ಹುತಾತ್ಮ

ಗಳನ್ನು ಕೊಂಡಿರುವ ಯುವ ಸೇವಕ). ನಿನ್ನಲ್ಲಿ ಅನುರಕ್ತನಾಗಿದ್ದಾನೆ. ನೀನು ಅವನ ಪ್ರೀತಿಯಲ್ಲಿ ಸಹಭಾಗಿನಿಯಾಗಬೇಕೆಂದು ಕೇಳಿಕೊಂಡಿದ್ದಾನೆ' ಎಂದನು.

ಕನಸಿನಲ್ಲೂ ಪತಿಯನ್ನು ವಂಚಿಸಲು ಯೋಚಿಸದ, ದೈವಭಕ್ತ ಪರಾಯಣೆ, ಅನೂಬಿಸ್ಸನ ಸಂದೇಶವನ್ನು ಕೇಳಿ ಪುಳಕಿತಳಾದಳು. ದೇವ ದೇವನೇ ಇಚ್ಛಿಸುವಾಗ! ಪತಿಗೆ ತಾನು ಅನುಬಿಸ್ಸನ ಮನದಾಸೆಯನ್ನು ತೀರಿಸುವುದಾಗಿ ಹರ್ಷಚಿತ್ತದಿಂದ ಹೇಳಿದಳು. ಗಂಡನ ಮನಸ್ಸಿಗೆ ಒಪ್ಪಿಗೆಯಾಗದಿದ್ದರೂ ಸಮ್ಮತಿಸಬೇಕಾಯಿತು. ತನ್ನ ಹೆಂಡತಿಯು ಎಷ್ಟು ಪರಿಶುದ್ಧಳು, ಸಾಧ್ವಿ, ದೈವಭಕ್ತಪರಾಯಣೆ ಆಚಾರಶೀಲೆಯೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು.

ಪಾಲಿನಳು ಸಂಜೆ ದೇವಸ್ಥಾನಕ್ಕೆ ಹೋದಳು. ಊಟವಾದ ಮೇಲೆ ಮಲಗುವ ಹೊತ್ತಾಯಿತು. ಪೂಜಾರಿಗಳು ದೇವಸ್ಥಾನದ ದ್ವಾರಗಳನ್ನು ಮುಚ್ಚಿ ದೀಪಗಳನ್ನು ಆರಿಸಿದರು. ಕತ್ತಲಿನಲ್ಲಿ ಅವಿತುಕೊಂಡಿದ್ದ ಡಿಸಿಯಸ್, ಪಾಲಿನಳನ್ನು ಬಿಗಿದಪ್ಪಿದನು. ಪಾಲಿನಳು ಮನಃಪೂರ್ವಕವಾಗಿ ರಾತ್ರಿಯೆಲ್ಲಾ ಸಂತೋಷವಾಗುವ ರೀತಿ ನಡೆದುಕೊಂಡಳು. ಪ್ರಾತಃಕಾಲವಾಗುತ್ತಿದ್ದಂತೆ, ದೇವಸ್ಥಾನದ ಕಾರ್ಯಕ್ರಮಗಳು ಪ್ರಾರಂಭವಾಗುವುದಕ್ಕೆ ಮುಂಚೆ ಡಿಸಿಯಸ್ ಎದ್ದುಹೋದನು. ಸ್ವಲ್ಪ ಹೊತ್ತಾದ ಮೇಲೆ ಪಾಲಿನಳೂ ಎದ್ದು ಹೋದಳು. ಪತಿಗೆ ಸ್ವಲ್ಪವೂ ಮರೆಮಾಚದೆ ಅದುದೆಲ್ಲವನ್ನೂ ತಿಳಿಸಿದಳು. ಅಷ್ಟೇ ಅಲ್ಲ ಇಷ್ಟಮಿತ್ರರಿಗೂ ಹೇಳಿದಳು. ದೇವರ ಅನುಗ್ರಹಕ್ಕೆ ಪಾತ್ರಳಾದವಳಲ್ಲವೆ! ಇದರಲ್ಲಿ ಮುಚ್ಚೇನು, ಮರೆಯೇನು?

ಇದಾದ ಮೂರು ದಿವಸಗಳಾದ ಮೇಲೆ ಡೆಸಿಯಸ್, ಪಾಲಿನಳನ್ನು ಸಂಧಿಸಿದನು. ತನ್ನ ಮನದಾಸೆಯು ನೆರವೇರಿತಲ್ಲಾ ಎಂದು ಹರ್ಷ. ನಗುತ್ತಾ 'ಪಾಲಿನ! ಧನ್ಯವಾದ! ನಾನು ನಿನಗೆ ಕೃತಕೃತ್ಯನಾಗಿದ್ದೇನೆ. ನೀನು 150,000 ಡ್ರಾಮ ಉಳಿಸಿದ್ದು ಮಾತ್ರವಲ್ಲ, ನನ್ನ ಮನೋಭಿಲಾಷೆಯನ್ನೂ ಈಡೇರಿಸಿದೆ. ಹೆಸರಿನಲ್ಲೇನಿದೆ ಹೇಳು! ಡೆಸಿಯಸ್ ಎಂಬ ಹೆಸರಿಗೆ ಎಟುಕದ ವಸ್ತು ಅನೂಬಿಸ್ಸಿಗೆ ಪ್ರಾಪ್ತವಾಯಿತು ಅಷ್ಟೇ! ಎಂದ.

ಪಾಲಿನಳಿಗೆ ಕೃತ್ರಿಮವು ಕ್ರಮೇಣ ಅರ್ಥವಾಯಿತು. ಗಂಡನಿಗೆ ಸಕಲವನ್ನೂ ತಿಳಿಸಿದಳು. ಪತಿಯು ಚಕ್ರವರ್ತಿ ಟೈಬಿರಸಿಗೆ ದೂರುಕೊಟ್ಟನು. ಚಕ್ರವರ್ತಿಯು ಈಸಿಸ್ ದೇವಾಲಯದ ಅರ್ಚಕರನ್ನು ಕರೆಕಳುಹಿಸಿ, ಕೂಲಂಕಷವಾಗಿ ಪರಾಮರ್ಶಿಸಿದನು. ದೇವಾಲಯದ ಅರ್ಚಕರನ್ನೆಲ್ಲಾ ಗಲ್ಲಿಗೆ ಹಾಕಬೇಕೆಂದು ಅಜ್ಞೆ ಮಾಡಿದನು. ಈಸಿಸ್ ದೇವಾಲಯವನ್ನು ನೆಲಸಮ ಮಾಡಿ ಈಸಿಸ್ ವಿಗ್ರಹವನ್ನು ಟೈಬರ್ ನದಿಯಲ್ಲಿ ಹಾಕಲಾಯಿತು. ಯಾವ ದಂಡನೆಯೂ ಆಗದೆ ಉಳಿದುಕೊಂಡವನೆಂದರೆ ಡೆಸಿಯಸ್. ತಕ್ಷಣ ಪಟ್ಟಣವನ್ನು ಬಿಟ್ಟು ಹೋಗಬೇಕೆಂಬುದು ಮಾತ್ರ ಕಟ್ಟಾಜ್ಞೆ ಮಾಡಿದನು. ಡೆಸಿಯಸ್ ಅಪರಾಧ ಮಾಡಿದ್ದರೂ ಕೇವಲ ಅನುರಕ್ತನಾಗಿದ್ದುದರಿಂದ ! ಪ್ರೀತಿಯ ಸಲುವಾಗಿ ಅಷ್ಟೆ !.



# ಪುಸ್ತಕಗಳನ್ನೇ ಸುಟ್ಟ ಮಹಾಪಂಡಿತ!

## " ಎಲ್ ಲಿಬ್ರೋ - ಡಿ - ಲಾ ಎಗಾನೋ " ಗ್ರಂಥದಿಂದ

ಸ್ತ್ರೀಯರ ಸಕಲ ಕಪಟೋಪಾಯಗಳನ್ನು ಸಂಪೂರ್ಣವಾಗಿ ಅರಿತು ಕೊಳ್ಳಬೇಕೆಂಬ ಉತ್ಕಟಾಪೇಕ್ಷೆಯಿಂದ ಯುವಕನೊಬ್ಬನು, ಈ ವಿಷಯ ವನ್ನು ಅಧ್ಯಯನಮಾಡಲು ಅವಕಾಶವನ್ನು ಕಲ್ಪಿಸಿದ್ದ ವಿಶ್ವವಿದ್ಯಾನಿಲಯ ವನ್ನು ಸೇರಿದನು.

ಬಹುಕಾಲ ಸಂಪೂರ್ಣವಾಗಿ ಅಧ್ಯಯನಮಾಡಿದನಂತರ, ತನ್ನನ್ನು ಯಾವ ಹೆಂಗಸೂ ಕೃತ್ರಿಮೋಪಾಯದಿಂದ ಮೋಸಗೊಳಿಸಲು ಸಾಧ್ಯವಿಲ್ಲ ವೆಂದು ಧೃಡನಂಬಿಕೆಯಿಂದ ಅಧ್ಯಯನಮಾಡಿದ ಉದ್ಗ್ರಂಥಗಳು, ಓಲೆ ಗಳು ಸಕಲವನ್ನೂ ಹೊತ್ತು ಮನೆಗೆ ಹಿಂತಿರುಗಿದನು. ಪ್ರಯಾಣ ಬೆಳೆಸು ತ್ತಿರುವಾಗ ಒಂದು ದಿವಸ ರಾತ್ರಿ ತಂಗಲು, ರೈತನೊಬ್ಬನ ಮನೆಯ ಕೊಠಡಿ ಯನ್ನು ಬಾಡಿಗೆಗೆ ತೆಗೆದುಕೊಂಡನು. ಊಟಮಾಡುತ್ತಿರುವಾಗ ಯುವಕ ನಿಗೆ, ತನ್ನ ವಿದ್ವತ್ತನ್ನು ಅತಿಥಿಯ ಎದುರಿನಲ್ಲಿ ತೋರ್ಪಡಿಸಿಕೊಳ್ಳಬೇಕೆಂದು ಉತ್ಸಾಹ. ರೈತನು ಓದಿದವನಲ್ಲ. ಯುವಕನ ವಾಗ್ಝರಿಯನ್ನು, ಅವನು ತಂದಿದ್ದ ಪುಸ್ತಕದ ರಾಶಿಯನ್ನು ನೋಡಿ ವಿಸ್ಮಿತನಾಗಿ ಮೆಚ್ಚಿಕೊಂಡು ಕಡೆಯಲ್ಲಿ ತಲೆಯನ್ನಲ್ಲಾಡಿಸಿ "ನೀವು ಏನೇ ಹೇಳಿ, ಹೆಂಗಸರ ಮನಸ್ಸಿ ನಾಳವನ್ನು ಕಂಡುಹಿಡಿಯಲು ಸಾಧ್ಯವೇ ಇಲ್ಲ. ಅವರಿಗೆ ಪ್ರಳಯಾಂತಕ ಬುದ್ಧಿ. ನಾನು ಹೇಳುವುದು ನಿಜವೋ ಸುಳ್ಳೋ ಬೇಕಾದರೆ ಬಾಜಿ ಕಟ್ಟೋಣ. ನೀವು ಹೇಳುವುದು ಸರಿಯಾಗಿದ್ದಲ್ಲಿ ಈ ಮನೆಯನ್ನು ನಿಮಗೆ ಕೊಡುತ್ತೇನೆ. ನಾನು ಹೇಳುವುದು ದಿಟವಾದರೆ ನಿಮ್ಮ ಕುದುರೆಯನ್ನು ಕೊಡುತ್ತೀರಾ ? ನನ್ನ ಹೆಂಡತಿಗೆ ಓ ಅಂದರೆ ಠೊ ಅನ್ನುವುದಕ್ಕೆ ಬರುವು ದಿಲ್ಲ. ನಿರಕ್ಷರ ಕುಕ್ಷಿ, ಹಾಗಿದ್ದರೂ ನಿಮ್ಮ ಕಣ್ಣಿಗೆ ಮಂಕುಬೂದಿ ಎರಚ ಬಲ್ಲಳು " ಎಂದನು.

ಪಂಡಿತ ಶಿಖಾಮಣಿ ' ತಥಾಸ್ತು ' ಎಂದನು.

ರೈತನು ತನ್ನ ಹೆಂಡತಿಗೆ ದವಸ - ಧಾನ್ಯಗಳನ್ನು ಮಾರಲು ಪಟ್ಟಣಕ್ಕೆ ಹೋಗುತ್ತಿರುವುದಾಗಿ ತಿಳಿಸಿದನು. ರೈತನು ಆ ಕಡೆ ಹೋದ ಹಾಗೆ, ಅವನ ಆಕೆ ಪಂಡಿತೋತ್ತಮನನ್ನು ತನ್ನ ಮಲಗುವ ಮನೆಗೆ ಕರೆದು, ಖಿನ್ನಳಾಗಿ ' ನನಗೆ ಇನ್ನೂ ವಯಸ್ಸು ಎಷ್ಟಾಗಿದೆ ? ಚಿಕ್ಕವಳಲ್ಲವಾ ? ನೋಡುವುದಕ್ಕೆ ಹೇಗಿದ್ದೇನೆ ನೀವೇ ಹೇಳಿ. ನಮ್ಮ ಯಜಮಾನರು ಬೆಳಗ್ಗಿನಿಂದ ಸಂಜೆಯುವರೆವಿಗೂ ಬಿಸಿಲು, ಮಳೆ ಎನ್ನದೆ ಗದ್ದೆಯಲ್ಲಿ ಕೆಲಸ ಮಾಡುವುದರಿಂದ ಮನೆಗೆ ಬರುವ ಹೊತ್ತಿಗೆ ಬಳಲಿರುತ್ತಾರೆ. ನನ್ನ ಜೊತೆ ಮಲಗುವುದೇ ಇಲ್ಲ. ಕಾಲು ಚಾಚಿಕೊಂಡು ಕಣ್ಣು ಮುಚ್ಚಿ ಹಾಯಾಗಿ ಗೊರಕೆ ಹೊಡೆಯುತ್ತಾರೆ. ನನ್ನ ಜೊತೆ ಮಲಗಿ ಕಡೆಯ ಪಕ್ಷ ತಿಂಗಳ ಮೇಲಾಯಿತು " ಎಂದಳು.

ಪಂಡಿತನಿಗೆ ಮೊದಲು ಇವೆಲ್ಲಾ ಕೃತ್ರಿಮದ ಮಾತುಗಳೇ ಇರಬೇಕೆಂದು ತೋರಿತು. ತರುಣಿಯು ಉಟ್ಟ ತೊಡಿಗೆಯನ್ನು ಬಿಚ್ಚಿ, ಅವನಿಗೂ ಅದೇ ರೀತಿ ಅನುಸರಿಸಲು ಹೇಳಿದಳು. ಪಂಡಿತೋತ್ತಮನು ಬೆಕ್ಕಸ ಬೆರಗಾಗಿ ಬಾಯಿಬಿಟ್ಟುಕೊಂಡು ನಿಂತು. " ಇವಳು ಹೇಳುವುದು ನಿಜವೇ ಇರಬೇಕು. ಇಲ್ಲದಿದ್ದರೆ ತಿಳಿದೂ ತಿಳಿದೂ ಅವನು ಬಿಟ್ಟುಹೋಗುವುದೂಂದರೆ ಏನು " ಎಂದು ಮನಸ್ಸಿನಲ್ಲೇ ಜಿಜ್ಞಾಸೆಮಾಡಿ, ಅವಳನ್ನು ಬಾಹುಗಳಿಂದ ಸೆಳೆದಪ್ಪಲು ಹೋದಾಗ, ತರುಣಿಯು ! "ಅಯ್ಯೋ! ಕಾಪಾಡಿ! ಕಾಪಾಡಿ!" ಎಂದು ಗಟ್ಟಿಯಾಗಿ ಚೀರಿಡಳು. ಜಮೀನಿನಲ್ಲಿ ಕೆಲಸಮಾಡುತ್ತಿದ್ದ ಆಳುಗಳು ಓಡಿಬಂದರು. ಯುವಕನನ್ನು ನೋಡಿ, ಯುವತಿಯು "ನೆಲದ ಮೇಲೆ ಮಲಗಿಕೊಳ್ಳಿ " ಎಂದಳು. ಯುವಕನು ಮಲಗುತ್ತಲೂ ಅವನ ಬಾಯಲ್ಲಿ ರೊಟ್ಟಿಯ ತುಂಡನ್ನು ತುರಕಿ, ಬಟ್ಟೆಯನ್ನುಟ್ಟು ಬಾಗಿಲನ್ನು ತೆರೆದು " ನಮ್ಮ ಮನೆಗೆ ಬಂದಿರುವ ಇವರ ಗಂಟಲಲ್ಲಿ ರೊಟ್ಟಿ ಸಿಕ್ಕಿಹಾಕಿಕೊಂಡಿದೆ, ಸಾಯುತ್ತಿದ್ದಾರೆ. ದಯವಿಟ್ಟು ಹೇಗಾದರೂ ಮಾಡಿ ತೆಗೆಯಿರಿ " ಎಂದು, ಒಳಗೆ ಬಂದ ರೈತರನ್ನು ಕೇಳಿಕೊಂಡಳು.

ಕೆಲಸಗಾರರು ಯುವಕನ ಮುಚ್ಚಿದ ಬಾಯನ್ನು ಅಗಲಿಸಿ ರೊಟ್ಟಿಯನ್ನು ತೆಗೆದರು. ಯುವಕನು ಮೂರ್ಛೆಹೋದವನಂತೆ ಕಣ್ಣುಮುಚ್ಚಿ

ಮಲಗಿದ್ದನು. ಯುವತಿಯು ಒದ್ದೆಬಟ್ಟೆಯಿಂದ ಮುಖ ಮತ್ತು ಎದೆಯನ್ನು ಒರಸಿದಳು.

ರೈತರು ಕೆಲಸಮಾಡಲು ಗದ್ದೆಗೆ ಹಿಂತಿರುಗಿದ ಮೇಲೆ ಯುವತಿಯು ನಕ್ಕು "ಈ ರೀತಿ ಆಗಿರುವುದನ್ನು ಯಾವುದಾದರೂ ಪುಸ್ತಕದಲ್ಲಿ ಓದಿದ್ದೀರಾ ?" ಎಂದು ಕೇಳಿದಳು.

ಯುವಕನು ಎದ್ದು ಕುಳಿತು "ಖಂಡಿತವಾಗಿ ಓದಿಲ್ಲ. ನನಗೆ ಸಕಲ ವಿಷಯವೂ ಗೊತ್ತಿದೆಯೆಂದುಕೊಂಡಿದ್ದೆ. ಅದು ಶುದ್ಧ ತಪ್ಪೆಂತ ನೀನು ಈಗ ತೋರಿಸಿಕೊಟ್ಟೆ" ಎಂದು ತಂದಿದ್ದ ಪುಸ್ತಕಗಳನ್ನೆಲ್ಲಾ ಹಿತ್ತಲು ಕಡೆ ಹೊತ್ತುಕೊಂಡು ಹೋಗಿ ಸುಟ್ಟು ಭಸ್ಮ ಮಾಡಿದನು. ಬೆಳಗ್ಗೆ ಕುದುರೆಯನ್ನು ಅಲ್ಲೇ ಬಿಟ್ಟು ಕಾಲ್ನಡಿಗೆಯಲ್ಲೇ ಮನೆಯ ಕಡೆ ಪ್ರಯಾಣ ಬೆಳಸಿದನು. ಹೊರಡುವುದಕ್ಕೆ ಮುಂಚೆ. "ಸಕಲ ಜ್ಞಾನವೂ ಪುಸ್ತಕದಲ್ಲಿಲ್ಲ. ಅತ್ಯಂತ ಗಹನವಾದ ಜ್ಞಾನವು ವಿಷಸರ್ಪಗಳಿಗೆ ಮತ್ತು ಸ್ತ್ರೀಯರಿಗೆ ಮಾತ್ರ ಕರಗತವಾಗಿದೆ." ಎಂದನು.



# ಚಂಚಲೆ

ಬರೆದವರು : ಕ್ಕೆ-ಕೌ-ಕಿ ಕುಅನ್‌ನಿಂದ (ಚೀಣಿ)

ರಾಜಧಾನಿಗೆ ಸ್ವಲ್ಪ ದೂರದಲ್ಲಿ ನಿಬಿಡವಾದ ಪ್ರದೇಶದಲ್ಲಿ ಒಬ್ಬ ತತ್ವ ಜ್ಞಾನಿಯು ತನ್ನ ಮೂರನೆಯ ಹೆಂಡತಿಯೊಡನೆ ವಾಸಿಸುತ್ತಿದ್ದನು. ಅವನ ಹೆಸರು ಛ್ವಾಂಗ್. ಛ್ವಾಂಗ್, ಲವೋಟ್ಸಿಯ ತಪೋ ಸಿದ್ಧಾಂತವನ್ನು ಅಧ್ಯಯನಮಾಡುತ್ತಿದ್ದನು. ಮಹಾಪಂಡಿತ ಅವನ ಕೀರ್ತಿಯು ಎಲ್ಲೆಡೆಗಳಲ್ಲೂ ಪ್ರಸರಿಸಿತ್ತು. ಮೊದಲೆರಡು ವಿವಾಹಗಳ ದಾಂಪತ್ಯ ಜೀವನವು ಅಷ್ಟೇನೂ ತೃಪ್ತಿಕರವಾಗಿರಲಿಲ್ಲ ಮೊದಲನೆಯ ಮಡದಿ ಸಣ್ಣವಯಸಿನಲ್ಲೇ ತೀರಿಹೋದಳು. ಎರಡನೆಯವಳ ನಡತೆಯು ಅಷ್ಟೇನೂ ಸಮರ್ಪಕವಾಗಿಲ್ಲದಿದ್ದುದರಿಂದ ವಿಚ್ಛೇದನ ಮಾಡಬೇಕಾಯಿತು. ಕೈಹಿಡಿದ ಮೂರನೆಯ ಟಿರ್ಇ ಅತ್ಯಂತ ರೂಪವತಿ. ಇನ್ನೂ ಎಳೆಯ ಪ್ರಾಯ. ಸುಗುಣ ಶೀಲೆ. ದಾಂಪತ್ಯ ಜೀವನವು ರಸಕಾವ್ಯದಂತೆ ಹರ್ಷಭರಿತ ವಾಗಿತ್ತು. ಛ್ವಾಂಗ್ ವೇದಾಂತಿಯಾಗಿದ್ದುದರಿಂದ, ಏಕಾಂತವಲ್ಲಿ ಕಾಲ ಕಳೆಯಲು ಆಗಾಗ ಹತ್ತಿರವಿದ್ದ ಗುಡ್ಡಗಾಡುಗಳಿಗೆ ಹೋಗಿ ಅನೇಕ ದಿವಸಗಳು ಧ್ಯಾನಾಸಕ್ತನಾಗಿರುತ್ತಿದ್ದನು. ಒಂದು ದಿವಸ ಏಕಾಂತವನ್ನು ಬಯಸಿ ಹೋಗುತ್ತಿರುವಾಗ ಬೆಟ್ಟದ ತಪ್ಪಲಲ್ಲಿ ತುಂಬು ಯೌವ್ವನದ ಸುಂದರ ಯುವತಿಯೊಬ್ಬಳು ಹೊಸದಾಗಿ ನಿರ್ಮಿಸಿದ್ದ ಗೋರಿಯ ಬಳಿ ಯಲ್ಲಿ ಕುಳಿತು ಬೀಸಣಿಗೆಯಿಂದ ಗಾಳಿಬೀಸುತ್ತಿರುವುದನ್ನು ಕಂಡನು. ವೇದಾಂತಿಗೆ ಈ ವಿಚಿತ್ರ ವರ್ತನೆಯನ್ನು ಕಂಡು ಆಶ್ಚರ್ಯವಾಯಿತು. ಹತ್ತಿರ ಸರಿದು ಯುವತಿಯನ್ನು ಉದ್ದೇಶಿಸಿ ಮೃದುವಾಗಿ, "ತಾವು ಮಾಡುತ್ತಿರುವುದೇನು ?" ಎಂದು ಕುತೂಹಲದಿಂದ ಕೇಳಿದನು.

ಯುವತಿಯು "ಸಮಾಧಿಯು ನನ್ನ ಪತಿಯದು. ಈ ಮಂಕ ಸಾಯುವುದಕ್ಕೆ ಮುಂಚೆ, ತನ್ನ ಗೋರಿಯು ಒಣಗುವವರೆಗೂ ಬೇರೊಂದು

ಮದುವೆಯಾಗಕೂಡದೆಂದು ನನ್ನಿಂದ ವಚನವನ್ನು ತೆಗೆದುಕೊಂಡನು. ಕೆಲವೇ ದಿನಗಳಲ್ಲಿ ಒಣಗುತ್ತದೆಂದು ತಿಳಿದಿದ್ದೆ. ಆದರೆ ಇನ್ನೂ ಒಣಗಿಲ್ಲ. ಅದಕ್ಕೇ ಬೇಗ ಒಣಗಲೆಂದು ಬೀಸಣಿಗೆಯಿಂದ ಬೀಸುತ್ತಿದ್ದೇನೆ" ಎಂದಳು.

ಛ್ವಾಂಗ್ "ಈ ಕೋಮಲವಾದ ಕರಗಳಿಂದ ಒಣಗಿಸಲು ಸಾಧ್ಯವಿಲ್ಲ. ನಾನೇ ಬೀಸುತ್ತೇನೆ ಕೊಡಿ" ಎಂದನು.

ಹೆಂಗಸು "ನಿಮ್ಮ ಉಪಕಾರಕ್ಕೆ ಏನು ಕೊಟ್ಟರೂ ಸಾಲದು. ಬೇಗ ಒಣಗುವ ಹಾಗೆ ಮಾಡಿ....ಈ ಬೀಸಣಿಗೆಯನ್ನು ತಗೆದು ಕೊಳ್ಳಿ" ಎಂದು ವೇದಾಂತಿಯ ಕೈಲಿ ಬೀಸಣಿಗೆಯನ್ನು ಉತ್ಸಾಹದಿಂದ ಇಟ್ಟಳು.

ಛ್ವಾಂಗ್ ಬೀಸತೊಡಗಿದನು. ಅವನಿಗೆ ಅಸಾಧ್ಯ ಮಂತ್ರಶಕ್ತಿಯಿತ್ತು. ಕೆಲವೇ ನಿಮಿಷಗಳಲ್ಲಿ ಗೋರಿಯು ಸಂಪೂರ್ಣವಾಗಿ ಒಣಗಿಹೋಯಿತು. ಯುವತಿಯು ಪುಳಕಿತಳಾಗಿ ಮುಗುಳ್ನಗೆ ನಗುತ್ತಾ "ನಿಮ್ಮ ಉಪಕಾರವನ್ನು ಆಜನ್ಮ ಮರಿಯುವ ಹಾಗೆಯೇ ಇಲ್ಲ. ತೀರಿಸುವುದಾದರೂ ಹೇಗೆ, ಈಗ ನನ್ನ ಹತ್ತಿರ ಯಾವ ಉಪಹಾರವೂ ಇಲ್ಲ ಇಗೋ ನೀವು ಮಾಡಿದ ಉಪಕಾರಕ್ಕೆ ಕಸೂತಿ ಹಾಕಿದ ಬೀಸಣಿಗೆ. ಇದು ಬಹಳ ಪ್ರಶಸ್ತವಾದುದು. ಅಲ್ಲದೆ ಈ ಹೇರ್‌ಪಿನ್ನನ್ನು ಸ್ವೀಕರಿಸಿ" ಎಂದು, ಬೀಸಣಿಗೆಯನ್ನು ಕೊಟ್ಟು, ತಲೆಯಲ್ಲಿ ಸಿಕ್ಕಿಸಿಕೊಂಡಿದ್ದ ಹೇರ್‌ಪಿನ್ನನ್ನು ತೆಗೆದಳು. ಹೆಂಡತಿಯು ತನ್ನ ವಿಷಯದಲ್ಲಿ ಅಪಾರ್ಥಮಾಡಿಕೊಳ್ಳಬಹುದೆಂದು ಕೇವಲ ಬೀಸಣಿಗೆಯನ್ನು ಮಾತ್ರ ತೆಗೆದುಕೊಂಡು ಮನೆಗೆ ಹಿಂತಿರುಗಿ ದೀರ್ಘ ನಿಶ್ವಾಸವನ್ನು ಬಿಟ್ಟನು.

ಹೆಂಡತಿಯು "ಯಾಕೆ ನಿಟ್ಟುಸಿರು ಬಿಡುತ್ತಿದ್ದೀರಾ? ಏನಾಯಿತು? ಇದೇನು ಕೈಲಿ ಬೀಸಣಿಗೆ? ಎಲ್ಲಿಂದ ಬಂದಿತು?" ಎಂದು ಕೇಳಿದಳು.

ಛ್ವಾಂಗ್ ನಡೆದುದೆಲ್ಲವನ್ನೂ ವಿವರಿಸಿದನು. ಹೆಂಡತಿಗೆ ಅಸಾಧ್ಯ ಕೋಪವೇ ಬಂದಿತು. "ಮಾನಗೆಟ್ಟ ಹೆಂಗಸು. ಅವಳಿಗೆ ಹೋಗಿ ಸಹಾಯ ಮಾಡಿದಿರಾ? ನಿಮ್ಮ ಬುದ್ಧಿಗೆ ಏನೆಂದು ಹೇಳೋಣ? ಅಲ್ಲಾಂತ್ರೆ ಅವಳು

ಮಾಡಿರುವುದು ಸ್ತ್ರೀ ಜಾತಿಗೇ ಅವಮಾನವನ್ನು ತರುವಂತಹುದು. ಬೀಸಣಿಗೆ ತಂದು, ನಿಟ್ಟುಸಿರು ಬಿಡುತ್ತಿರುವುದು ನೋಡು " ಎಂದಳು.

ಭ್ವಾಂಗ್ "ಮನುಷ್ಯನ ಮುಖವನ್ನು ನೋಡಿದಾಕ್ಷಣ ಹೃದಯ ವನ್ನು ಕಂಡಂತಲ್ಲ " ಎಂದು ನಾಣ್ಣುಡಿಯನ್ನು ಹೇಳಿದನು.

ಹೆಂಡತಿಗೆ ಮತ್ತೂ ಕೋಪ ಬಂದಿತು "ಎಲ್ಲ ಸ್ತ್ರೀಯರೂ ಅವಳ ಹಾಗೇಂತ ಹೇಳುತ್ತೀರಾ ? ನಾನು ಅವಳಂತೆಯೇ ಎಂದ ಹಾಗಾಯಿತು" ಎಂದಳು.

"ಇಷ್ಟೆಲ್ಲಾ ಯಾಕೆ ಮಾತು. ನಾನು ಈಗಲೇ ಸತ್ತುಹೋದೇಂತ ಇಟ್ಟುಕೊಳ್ಳೋಣ. ನಿನಗಿನ್ನೂ ಎಳೇ ಪ್ರಾಯ. ಮೂರು ವರ್ಷ ಅಥವ ಒಂದು ವರ್ಷವಾದರೂ ವಿಧವೆಯಾಗಿ ಇರಬಲ್ಲೆಯಾ ?".

"ಪ್ರಾಮಾಣಿಕನಾದ ಮಂತ್ರಿ ಇಬ್ಬರು ರಾಜರುಗಳನ್ನು ಸೇವಿಸುವುದಿಲ್ಲ. ಪತಿವ್ರತೆಯಾದ ಹೆಂಗಸು ಎರಡನೆಯ ಮದುವೆಯಾಗುತ್ತೇನೆಂದು ಕನಸಿನಲ್ಲೂ ಎಣಿಸುವುದಿಲ್ಲ. ಐದು ಅಥವಾ ಮೂರೇನು ಆಜನ್ಮ ನಾನು ವಿಧವೆಯಾಗಿಯೇ ಇರುತ್ತೇನೆ. ಇನ್ನೊಂದು ಮದುವೆಯಾಗುವ ಯೋಚನೆಯನ್ನೇ ಮಾಡುವುದಿಲ್ಲ."

"ನಡೆದುಕೊಳ್ಳುವುದು ಮಾತನಾಡುವಷ್ಟು ಸುಲಭವಲ್ಲ."

"ಹೆಂಗಸರ ಮನಸ್ಸು, ಗಂಡಸರ ಮನಸ್ಸಿನಷ್ಟು ಅಸ್ಥಿರವೆಂದು ತಿಳಿದು ಕೊಂಡಿದ್ದೀರಾ ? ಪುರುಷರ ಬುದ್ಧಿ ನನಗೆ ಗೊತ್ತಿಲ್ಲವೇ ? ಹೆಂಡತಿ ಸಾಯುತ್ತಾ ಬಿದ್ದಿರುವಾಗಲೇ ಬೇರೆ ಮದುವೆ ಮಾಡಿಕೊಳ್ಳಲು ಸನ್ನಾಹ ಮಾಡುತ್ತಿರುತ್ತಾರೆ. ಸ್ತ್ರೀಯರು ಹಾಗಲ್ಲ. ನೀವು ಹೀಗೆಲ್ಲಾ ಮಾತನಾಡಿದರೆ ನನಗೆ ಕೋಪ ಬರುತ್ತದೆ ಮನಸ್ಸಿಗೆ ಬಹಳ ಬೇಸರವಾಗುತ್ತೆ." ಎಂದು ಭ್ವಾಂಗನ ಕೈಲಿದ್ದ ಬೀಸಣಿಗೆಯನ್ನು ಕಿತ್ತುಕೊಂಡು ಚೂರು ಚೂರು ಮಾಡಿದಳು.

"ಅಷ್ಟೊಂದು ಕೋಪಮಾಡಿಕೊಳ್ಳಬೇಡ. ಸಮಯ ಬಂದಾಗ ಈಗ ಎಷ್ಟು ಹಾರಾಡುತ್ತಿದ್ದಿಯೋ ಅದಕ್ಕೆ ವ್ಯತಿರಿಕ್ತವಾಗಿಯೇ ನಡೆದುಕೊಳ್ಳುತ್ತಿ" ಎಂದು ಭ್ವಾಂಗ್ ಸಮಾಧಾನಚಿತ್ತದಿಂದ ಹೇಳಿದನು.

ಕೆಲವು ದಿವಸಗಳಲ್ಲಿ ಛ್ಯಾಂಗ್ ರೋಗಗ್ರಸ್ಥನಾಗಿ ಹಾಸಿಗೆಯನ್ನು ಹಿಡಿದನು. ದಿನಗಳುರುಳಿದಂತೆ ರೋಗವು ಹೆಚ್ಚಾಯಿತು. ಹೆಂಡತಿಯನ್ನು ನೋಡಿ, "ನನಗೆ ಸಾವು ಸಮೀಪಿಸುತ್ತಿದೆ. ನಾನು ಸತ್ತಮೇಲೆ ಗೋರಿಯು ಒಣಗುವಂತೆ ಬೀಸಲು ಆ ಬೀಸಣಿಗೆಯನ್ನು ಇಟ್ಟುಕೊಂಡಿದ್ದರೆ ಚನ್ನಾಗಿತ್ತು ಅನ್ಯಾಯವಾಗಿ ಚೂರು ಚೂರು ಮಾಡಿದೆ. ಇದೊಂದೇ ನನಗೆ ಆಗುತ್ತಿರುವ ದುಃಖ" ಎಂದನು.

ಟಿಯಿರ್ ಕಣ್ಣೀರು ಸುರಿಸುತ್ತಾ "ಹೀಗೆಲ್ಲಾ ಮಾತನಾಡಿದರೆ ನನ್ನ ಮನಸ್ಸಿಗೆ ಎಷ್ಟು ನೋವಾಗುತ್ತೆ ಗೊತ್ತಾ? ಹೆಣ್ಣಾಗಿ ಹುಟ್ಟಿದ ಮೇಲೆ ಒಬ್ಬ ಗಂಡನ ಕೈಯನ್ನೇ ಹಿಡಿಯಬೇಕೆಂಬುದು ನನಗೆ ಗೊತ್ತಿಲ್ಲವಾ? ನಿಮಗೆ ನನ್ನಲ್ಲಿ ಅಪನಂಬಿಕೆ ಇದ್ದರೆ ಈಗಲೇ ಈ ಕ್ಷಣವೇ ನಿಮ್ಮೆದುರಿಗೇ ನನ್ನ ಪ್ರಾಣವನ್ನು ಕಳೆದುಕೊಳ್ಳುತ್ತೇನೆ" ಎಂದಳು.

"ಕಣ್ಣು ಏಕೋ ಮಂಜು ಮಂಜಾಗುತ್ತಿದೆ" ಎಂದು ದೀರ್ಘ ನಿಶ್ವಾಸವನ್ನು ಬಿಟ್ಟು ಕಣ್ಣನ್ನು ಮುಚ್ಚಿದನು. ಅದೇ ಅಂತಿಮ ನಿಶ್ವಾಸ.

ಗಂಡನು ಸತ್ತುಹೋಗಿರುವುದು ನಿಜವೆಂದು ತಿಳಿದೊಡನೆ ಟಿಇನ್ ಜೋರಾಗಿ ಬೊಬ್ಬೆಯಿಡಲು ಪ್ರಾರಂಭಿಸಿದಳು. ಹೆಣವನ್ನು ಪುನಃ ಪುನಃ ಆಲಂಗಿಸಿ ಮುತ್ತಿಟ್ಟಳು. ಹಗಲು ರಾತ್ರಿ ಕಣ್ಣೀರು ಕಾಲುವೆಯನ್ನು ಹರಿಸಿ ಅನ್ನ ಆಹಾರಗಳನ್ನು ತ್ಯಜಿಸಿ, ಪತಿಯ ಗುಣಗಳನ್ನು ಗಾನಮಾಡಿ, ದುಃಖವು ಉಕ್ಕಿಬಂದಂತೆ ಬಿಕ್ಕಿ ಬಿಕ್ಕಿ ಅತ್ತು ಹೊರಳಾಡಿದಳು. ಛ್ಯಾಂಗ್ ಮೃತನಾದ ಸುದ್ಧಿಯನ್ನು ಕೇಳಿ ನೆರೆಹೊರೆಯವರೆಲ್ಲಾ ಸಂತಾಪವನ್ನು ಸೂಚಿಸಲು ಬಂದರು. ಅವರೆಲ್ಲರೂ ಹಿಂತಿರುಗಿದಂತೆ ತೆಳ್ಳಗೆ ಎತ್ತರವಾಗಿದ್ದ ಯುವಕನೊಬ್ಬನು ಬಾಗಿಲ ಬಳಿ ಬಂದನು. ಅವನ ರೂಪು ಸುಂದರವಾಗಿ ಬಿಡಿಸಿದ ಚಿತ್ರದಂತಿತ್ತು. ಮಾಟವಾದ ಕೆಂದುಟಿಗಳು, ಕುಂಕುಮವನ್ನು ಮೆತ್ತುಕೊಂಡಿರುವನೋ ಎಂಬಂತೆ ಇದ್ದವು. ಊದಾ ಬಣ್ಣದ ನಿಲುವಂಗಿ, ಕರಿಯ ಟೋಪಿ, ರಕ್ತವರ್ಣದ ಕಸೂತಿಹಾಕಿದ ಚಪ್ಪಲಿಯನ್ನು ಧರಿಸಿದ್ದನು. ಅವನ ಜೊತೆಯಲ್ಲಿ ಬಂದ ಆಳು ಮನೆಯ ಯಜಮಾನಿಯ ಹತ್ತಿರ ಹೋಗಿ "ಟ್ಸೊ ದೇಶದ ರಾಜಕುಮಾರರು ಬಂದಿದ್ದಾರೆ. ಬಹಳ ದಿನಗಳಿಂದ

ಭ್ಯಾಂಗರ ಪಾದಾರವಿಂದದ ಬಳಿ ಕುಳಿತು ತಪೋತತ್ವಗಳನ್ನು ಅಧ್ಯಯನ ಮಾಡಬೇಕೆಂದು ಬಯಸಿ ಬಂದಿರುವರು. ಅವರು ಮೃತರಾದ ಸುದ್ದಿಯನ್ನು ಕೇಳಿ ಬಹಳ ದುಃಖಪಡುತ್ತಿದ್ದಾರೆ" ಎಂದು ಟಿಇನ್‌ಗೆ ತಿಳಿಸಿದನು.

ಬಂದ ರಾಜಕುಮಾರನು ಶೋಕವನ್ನು ಪ್ರದರ್ಶಿಸಲು ಉಟ್ಟ ವಸ್ತ್ರಗಳನ್ನು ಬಿಚ್ಚಿ, ದುಃಖವನ್ನು ಪ್ರದರ್ಶಿಸುವ ಉಡುಪನ್ನು ಧರಿಸಿ, ಮೃತ ಶರೀರವಿಟ್ಟಿದ್ದ ಸ್ಥಳವನ್ನು ಪ್ರವೇಶಿಸಿ, ಶವಸಂಪುಟಕ್ಕೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಶಿರವನ್ನು ನೆಲಕ್ಕೆ ನಾಲ್ಕುಸಲ ಮುಟ್ಟಿಸಿ ರೋದಿಸುತ್ತಾ "ಪಂಡಿತಪುಂಗವ ಭ್ಯಾಂಗ್! ನನಗಿಂತ ಅದೃಷ್ಟಹೀನ ಈ ಪ್ರಪಂಚದಲ್ಲಿ ಮತ್ತಾರಿದ್ದಾರೆ! ನಿನ್ನ ಪಾದದಡಿ ತಪೋಸಿದ್ಧಾಂತವನ್ನು ಕಲಿತುಕೊಳ್ಳಬೇಕೆಂದು ತೀವ್ರ ಇಚ್ಛೆಯಿಂದ ಬಂದೆ .... ಆದರೆ .... ನೀನು ನಮ್ಮನ್ನಗಲಿ ಹೋಗಿದ್ದೀ. ನನ್ನ ಶೋಕವೆಷ್ಟೆಂದು ಪ್ರದರ್ಶಿಸಲು ನೂರು ದಿವಸಗಳು ಅಹೋರಾತ್ರಿ ಇಲ್ಲೇ ಇರುತ್ತೇನೆ" ಎಂದು ಪುನಃ ಪುನಃ ನಾಲ್ಕು ಬಾರಿ ಸಾಷ್ಟಾಂಗ ನಮಸ್ಕಾರ ಮಾಡಿ ಕಣ್ಣೀರು ಸುರಿಸುತ್ತಾ ಹೇಳಿದನು.

ಉಕ್ಕಿ ಬಂದ ದುಃಖವು ಕಡಿಮೆಯಾಗುತ್ತಲೂ ರಾಜಕುಮಾರನು ಟಿಇನ್ನಳನ್ನು ನೋಡಬೇಕೆಂದು ಹೇಳಿ ಕಳುಹಿಸಿದನು. ಮೊದಲು ಅವಳು ಒಪ್ಪಲಿಲ್ಲ. ಗುರುವನ್ನು ಅರಸಿಬಂದ ಶಿಷ್ಯನನ್ನು ನೋಡುವುದರಲ್ಲಿ ಅಭ್ಯಂತರವಿಲ್ಲವೆಂದು ರಾಜಕುಮಾರನ ಜವಾನನು ತಿಳಿಸುತ್ತಲೂ ಹೊರಗೆ ಬಂದಳು.

ರಾಜಕುಮಾರನು ಗುರುಗಳ ಗುಣಗಾನ ಮಾಡುವುದನ್ನು ಕತ್ತು ಬಗ್ಗಿಸಿಕೊಂಡೇ ಕೇಳಿದಳು. ಒಮ್ಮೆ ಕತ್ತೆತ್ತಿ ನೋಡಿದಳು. ಎಂಥ ಮನ ಸೆಳೆವ ರೂಪ ಅವನದು! ಮನಸ್ಸು ಚಂಚಲವಾಗಿ ಮುಗ್ಧಳಾದಳು. ರಾಜಕುಮಾರನು ಮನೆಯಲ್ಲಿಯೇ ಉಳಿದುಕೊಳ್ಳಬಹುದೆಂದು ಹೇಳಿ, ಅಡಿಗೆಯವನಿಗೆ ಊಟಕ್ಕೆ ಸಿದ್ಧಮಾಡಲು ತಿಳಿಸಿದಳು. ಇಬ್ಬರೂ ಊಟ ಮಾಡಿದ ಮೇಲೆ ಟಿಇನ್ ರಾಜಕುಮಾರನಿಗೆ ತನ್ನ ಪತಿಯು ಪಾರಾಯಣ ಮಾಡುತ್ತಿದ್ದ ನಸ್‌ಹಾ ಮತ್ತು ವೇದಾಂತ ಹಾಗೂ ನೀತಿದರ್ಪಣ ಸೂತ್ರಗಳ ಗ್ರಂಥಗಳನ್ನು ಕೊಟ್ಟಳು. ರಾಜಕುಮಾರನು ಪ್ರತಿನಿತ್ಯ ಶವಸಂಪುಟದ ಮುಂದೆ ಶೋಕಪ್ರದರ್ಶನ ಮಾಡತೊಡಗಿದನು. ಅವನು ಶೋಕವನ್ನು ಪ್ರದರ್ಶಿಸುವ

ಕಾಲದಲ್ಲಿ ಟಿಇನ್ ಕೂಡ ನಿಟ್ಟುಸಿರು ಬಿಟ್ಟು ಶೋಕಿಸಿದಳು. ಈ ರೀತಿ ಇಬ್ಬರೂ ನಿತ್ಯ ಶವಸಂಪುಟವಿದ್ದ ನಡುಮನೆಯಲ್ಲಿ ಸಂಧಿಸಿದಂತೆ ಮಿತ ಸಂಭಾಷಣೆಯೂ ಪ್ರಾರಂಭವಾಯಿತು. ಕಡೆಕಡೆಗೆ ಶೋಕಪ್ರದರ್ಶನವು ಮಾಯವಾಗಿ ಒಲುವಿನ ನುಡಿಗಳು ಅಂಕುರಿಸಿದವು. ಒಂದು ದಿವಸ ಟಿಇನ್ ರಾಜಕುಮಾರನ ಆಳನ್ನು ಕರೆ ಕಳುಹಿಸಿ, “ನಿಮ್ಮ ರಾಜಕುಮಾರನಿಗೆ ಮದುವೆಯಾಗಿದೆಯಾ?” ಎಂದು ಕೇಳಿದಳು.

ಆಳು ‘ಇಲ್ಲ’ವೆಂದನು.

“ಅವರು ಕೈ ಹಿಡಿಯುವ ಹೆಂಡತಿಗೆ ಯಾವ ಯಾವ ಆದರ್ಶಪ್ರಾಯವಾದ ಗುಣಗಳಿರಬೇಕೆಂದು ಬಗೆದಿದ್ದಾರೆ?”

“ಅವರಿಗೆ ಮತ್ತಾವ ಉದಾತ್ತ ಆದರ್ಶಗಳೂ ಇಲ್ಲ. ನಿಮ್ಮಷ್ಟೇ ರೂಪವತಿಯಾದ ಯುವತಿಯು ಸಿಕ್ಕರೆ ಸಾಕು.”

“ನಿನ್ನ ಹತ್ತಿರ ಈ ರೀತಿ ಹೇಳಿದರಾ? ಅಥವಾ ನನ್ನನ್ನು ಹೊಗಳಲು ಈ ರೀತಿ ನೀನು ಹೇಳುತ್ತಿದ್ದಿಯೋ?” ಎಂದು ಟಿಇನ್ ಕಾತುರಳಾಗಿ ಕೇಳಿದಳು.

“ಛಿ! ವಯಸ್ಸಾಗಿರುವ ನಾನು ನಿಮ್ಮ ಹತ್ತಿರ ಹುಡುಗಾಟಿಕೆ ಯಾಡೋಣವೆಂದರೇನು?”

“ಹಾಗಾದರೆ ನಮ್ಮಿಬ್ಬರಿಗೂ ವಿವಾಹವಾಗುವಂತೆ ಮಧ್ಯಸ್ತಿಕೆ ಮಾಡುತ್ತೀಯಾ?”

“ರಾಜಕುಮಾರರು ಆಗಲೇ ನನ್ನ ಹತ್ತಿರ ಈ ವಿಷಯವನ್ನು ಪ್ರಸ್ತಾಪ ಮಾಡಿದರು. ಅವರಿಗೂ ಇದು ಇಷ್ಟವೇ ಆದರೆ ನಿಮ್ಮ ಮೃತ ಪತಿಯ ಶರೀರವು ಮನೆಯಲ್ಲಿರುವಾಗಲೇ ತಿಳಿಸಿದಲ್ಲಿ ಗುರುದ್ರೋಹ ಮಾಡಿದಂತಾಗುವುದೆಂದು ಬಗೆದು ಸುಮ್ಮನಿದ್ದಾರೆ” ಎಂದನು.

“ರಾಜಕುಮಾರರು ನನ್ನ ಪತಿಯ ಶಿಷ್ಯ ಯಾವತ್ತೂ ಆಗಿರಲಿಲ್ಲ. ಆದ್ದರಿಂದ ಜನರು ಏನಾದರೂ ಆಡಿಕೊಂಡಲ್ಲಿ ಲೆಕ್ಕಿಸಬೇಕಾಗಿಲ್ಲ.”

“ಅವರಿಗೆ ತಿಳಿಸುತ್ತೇನೆ” ಎಂದು ಜವಾನನು ಆಶ್ವಾಸನವಿತ್ತನು.

ಟಿಇನ್ ಮನಸ್ಸು ಹಿಗ್ಗಿತು. ರಾಜಕುಮಾರನಿದ್ದ ಕೊಠಡಿಯ ಮುಂದೆ ಹತ್ತಾರುಬಾರಿ ಏನು ಮಾತನಾಡುತ್ತಿದ್ದಾರೋ ಎಂದು ಕೇಳಲು ಅಡ್ಡಾಡಿದಳು. ಶವಸಂಪುಟವಿದ್ದ ಕೊಠಡಿಗೆ ಬಂದಾಗ ನಿಟ್ಟುಸಿರು ಬಿಟ್ಟ ಶಬ್ದವು ಕೇಳಬಂದಿತು. ಯುವತಿಗೆ ಅತ್ಯಂತ ಭಯವಾಯಿತು. "ಸತ್ತವರು ಪುನಃ ಬದಕುತ್ತಾರಾ !" ಎಂದು ತನ್ನಲ್ಲೇ ಗಟ್ಟಿಯಾಗಿ ಅಂದುಕೊಂಡು ಶವ ಸಂಪುಟದ ಹತ್ತಿರ ಹೋಗಿ ನೋಡಿದಾಗ, ಅದರ ಪಕ್ಕದಲ್ಲೇ ರಾಜಕುಮಾರನ ಆಳು ನಿದ್ರಿಸುತ್ತಿದ್ದುದನ್ನು ಕಂಡಳು. ಮೊದಲು ಅವಳಿಗೆ ಅಸಾಧ್ಯ ಕೋಪವೇ ಬಂದಿತು. ಶವಸಂಪುಟದ ಹತ್ತಿರ ಮಲಗೋಣವೆಂದರೇನು ? ಪತಿಗೆ ಅವಮಾನ ಮಾಡಿದಂತಲ್ಲವೆ ? ತಕ್ಷಣವೇ ಹಿಂದಿನ ದಿವಸ ಜವಾನನ ಹತ್ತಿರ ಹೇಳಿದ ಮಾತು ಜ್ಞಾಪಕಕ್ಕೆ ಬಂದು, ನಾಲಿಗೆಯನ್ನು ಕಚ್ಚಿಕೊಂಡು ತಾನು ಕೇಳಿದ ವಿಷಯ ಏನಾಯಿತೆಂದು ಕೇಳಿದಳು.

ಆಳು, ರಾಜಕುಮಾರನು ಮದುವೆಯಾಗದಿರಲು ಕಾರಣಗಳಿವೆಯೆಂದು ಹೇಳಿದನು.

"ಅವೇನು ?" ಎಂದು ಕೇಳಿದಳು ಟಿಇನ್.

"ಮೊದಲನೆಯದಾಗಿ ಮನೆಯಲ್ಲಿ ಶವಸಂಪುಟವಿರುವುದು. ಎರಡನೆಯದಾಗಿ, ಛ್ವಾಂಗ್‌ನನ್ನು ನೀನು ಇನ್ನೂ ಬಹಳವಾಗಿ ಪ್ರೀತಿಸುತ್ತಿರುವುದು. ಮೂರನೆಯದಾಗಿ ರಾಜಕುಮಾರನು ಮದುವೆಯಾಗಲು ಸೂಕ್ತವಾದ ಬಟ್ಟೆಗಳನ್ನು ತಂದಿಲ್ಲ"

"ಇವು ಮೂರೂ ಅಂಥ ಅಡಚಣೆಗಳೇನಲ್ಲ. ಶವ ಸಂಪುಟವನ್ನು ಹತ್ತಲ್ಲಿರುವ ಗುಡಿಸಲಿಗೆ ಸಾಗಿಸಿದರಾಯಿತು. ಎರಡನೆಯದಾಗಿ ನನ್ನ ಗತ ಪತಿಯು ತಪೋ ಸಿದ್ಧಾಂತಿಯಾಗಿದ್ದುದರಿಂದ ಮಹಾ ರಸಿಕನಾಗಿದ್ದನು. ಅವನಿಗೆ ಸಾಂಪ್ರದಾಯಿಕ ನೀತಿ ನಿಯಮಗಳಲ್ಲಿ ಅಷ್ಟು ವಿಶ್ವಾಸವಿರಲಿಲ್ಲ. ಎರಡನೆಯ ಹೆಂಡತಿಯನ್ನು ವಿಚ್ಛೇದಿಸಿದ್ದನು. ಮೊದಲನೆಯವಳು ಹಾಸಿಗೆ ಹಿಡಿದಂತೆ ಮತ್ತೊಂದು ಮದುವೆಯಾಗುವ ಸನ್ನಾಹದಲ್ಲಿ ತೊಡಗಿದ್ದನು. ನನಗೆ ರಾಜಕುಮಾರನಲ್ಲಿರುವ ಅನುರಾಗದ ವಿಷಯವಾಗಿ ಅನುಮಾನ ಪಡಬೇಕಾಗಿಲ್ಲ. ಮನಸಾರೆ ಪ್ರೀತಿಸುತ್ತೇನೆ. ವಿವಾಹಕಾಲದಲ್ಲಿ ವಧುವು

ತೊಡಬೇಕಾದ ಉಡಿಗೆಗಳನ್ನು ನಾನೇ ಹೊಲಿಸಿಕೊಡುತ್ತೇನೆ. ಇಂದಿನ ದಿನವೇ ಶುಭ ದಿನ. ಮದುವೆ ಇವತ್ತೇ ಆಗಲಿ" ಎಂದು ವಸ್ತ್ರಗಳನ್ನು ಕೊಳ್ಳಲು ಜವಾನನ ಕೈಲಿ ಇಪ್ಪತ್ತು ಚಿನ್ನದ ನಾಣ್ಯಗಳನ್ನು ಕೊಟ್ಟಳು.

ಆಳು, ರಾಜಕುಮಾರನನ್ನು ಒಪ್ಪಿಸುವ ಹೊಣೆಯನ್ನು ಹೊತ್ತು ಹೊರಟನು.

ಶೋಕವನ್ನು ಪ್ರದರ್ಶಿಸಲು ಹಾಕಿಕೊಂಡಿದ್ದ ಉಡುಪನ್ನು ಕಿತ್ತೊಗೆದು ಟರ್ಕಿ, ಮದುಮಗಿತ್ತಿಯ ಉಡುಪನ್ನು ಧರಿಸಿ, ಕೆಲಸದವರಿಗೆ ಶವ ಸಂಪುಟವನ್ನು ಮನೆಯ ಹಿತ್ತಲಲ್ಲಿದ್ದ ಪಾಳುಬಿದ್ದ ಗುಡಿಸಿಲಿನಲ್ಲಿ ಇಡುವಂತೆ ಆಜ್ಞೆ ಮಾಡಿದಳು. ಅನಂತರ ತಾನೇ ಸ್ವತಃ ನಡುಮನೆಯಲ್ಲಿ ದೀಪಗಳನ್ನು ಹಚ್ಚಿ ತಳಿರು ತೋರಣಗಳನ್ನು ಕಟ್ಟಿ ಅಂದವಾಗಿ ಅಲಂಕರಿಸಿದಳು. ರಾಜಕುಮಾರನು ತನ್ನ ಅಂತಸ್ತಿಗೆ ತಕ್ಕಂತೆ ಉಡುಪನ್ನು ಧರಿಸಿ ಬಂದನು. ಮದುವೆಯಾಗಿ ಸ್ವಲ್ಪ ಕಾಲ ವಿಶ್ರಮಿಸಿಕೊಂಡ ತಕ್ಷಣ, ನವವಧೂವರರು ಕೈಹಿಡಿದು ಮಲಗುವ ಕೊಠಡಿಯನ್ನು ಪ್ರವೇಶಿಸಿದರು. ರಾಜಕುಮಾರನಿಗೆ ಸೆಳೆತ ಬಂದು ನೆಲದ ಮೇಲೆ ಬಿದ್ದು ಹೊರಳಾಡಿದನು. ಮುಖವು ವಿಕಾರವಾಯಿತು. ಹುಬ್ಬುಗಳು ನೆಟ್ಟಗೆ ನಿಂತವು.

ಟರ್ಕಿಗೆ ಆದ ದುಃಖ ಅಷ್ಟಿಷ್ಟಲ್ಲ. ರಾಜಕುಮಾರನನ್ನು ಆಲಂಗಿಸಿ, ಎದೆಯನ್ನು ಸವರಿದಳು. ಸೆಳೆತವು ನಿಲ್ಲಲಿಲ್ಲ. ಮತ್ತೂ ಹೆಚ್ಚಾಯಿತು. ರಾಜಕುಮಾರನ ಆಳನ್ನು ಕರೆದು "ನಿನ್ನ ಯಜಮಾನನಿಗೆ ಇದೇ ರೀತಿ ಸೆಳೆತವು ಯಾವಾಗಲಾದರೂ ಬರುತ್ತಿತ್ತಾ?" ಎಂದು ಕೇಳಿದಳು.

''ಆಗಾಗ ಬರುತ್ತಿತ್ತು. ಯಾವ ಔಷಧವನ್ನು ಕೊಟ್ಟರೂ ಹೋಗುತ್ತಿರಲಿಲ್ಲ, ಇದಕ್ಕೆ ಇರುವುದೊಂದೇ ಮದ್ದು."

''ಅದೇನು ?'' ಎಂದು ಕಾತುರಳಾಗಿ ಕೇಳಿದಳು ಕಾಮಿನಿ.

"ಮನುಷ್ಯನ ಮೆದುಳನ್ನು ಬೇಯಿಸಿ, ಕಷಾಯವನ್ನು ಮಾಡಿಕೊಟ್ಟರೆ ವಾಸಿಯಾಗುತ್ತದೆ. ಟ್ರ್ಯೂ ದೇಶದ ದೊರೆ ರಾಜಕುಮಾರರಿಗೆ ಈ ರೀತಿ ರೋಗವು ಉಲ್ಬಣವಾದಾಗಲೆಲ್ಲಾ, ಅಪರಾಧಮಾಡಿದವನೊಬ್ಬನ ಕತ್ತನ್ನು ಕತ್ತರಿಸಿ ಕಷಾಯವನ್ನು ಮಾಡುವಂತೆ ಹೇಳುತ್ತಿದ್ದರು. ಇಲ್ಲಿ ಆ ರೀತಿ ಮಾಡಲು ಹೇಗೆ ಸಾಧ್ಯ ?"

ಟಿಇನ್ ಸ್ವಲ್ಪ ಯೋಚಿಸಿ "ಖಾಯಿಲೆಯಿಂದ ಸತ್ತವನ ಮೆದುಳಿನಲ್ಲಿ ಕಷಾಯವನ್ನು ಮಾಡಿದರೆ?".

"ಸತ್ತು ನಲವತ್ತೆಂಟು ದಿನಗಳಾಗಿದ್ದಲ್ಲಿ ಅಭ್ಯಂತರವಿಲ್ಲ".

".... ಸತ್ತವನ ಮೆದುಳನ್ನು ಕೊಡಬಹುದಲ್ಲವೆ? .... ನನ್ನ ಗತ ಪತಿಯು ಸತ್ತು ಇನ್ನೂ ಇಪ್ಪತ್ತು ದಿವಸಗಳೂ ಕೂಡ ಆಗಿಲ್ಲ. ಶವ ಸಂಪುಟವನ್ನು ತೆಗೆದು ಮೆದುಳಿನ ಕಷಾಯವನ್ನು ಮಾಡಿದರಾಯಿತು."

"ಇದಕ್ಕೆ ನೀವು ಖಂಡಿತವಾಗಿ ಒಪ್ಪುತ್ತೀರಾ?"

"ಈಗ ನಾನು ಮತ್ತು ರಾಜಕುಮಾರ ಗಂಡಹೆಂಡಿರು. ಪತಿಯ ಪ್ರಾಣವನ್ನು ಉಳಿಸುವುದು ನನ್ನ ಕರ್ತವ್ಯ. ಮೊದಲ ಪತಿಯ ಶವದಿಂದ ಏನು ಪ್ರಯೋಜನ? ಎಂದಿದ್ದರೂ ಧೂಳಾಗಿ ಹೋಗುತ್ತದೆ" ಎಂದು ಟಿಇನ್, ಆಳಿಗೆ ರಾಜಕುಮಾರನನ್ನು ನೋಡಿಕೊಳ್ಳಲು ಹೇಳಿ ಗಂಡನ ಶವಸಂಪುಟ ಇಟ್ಟಿದ್ದ ಗುಡಿಸಿಲಿನ ಕಡೆ ಕೈಲಿ ಕೊಡಲಿಯನ್ನು ಹಿಡಿದು ಹೊರಟಳು. ಸಂಪುಟವು ಘನವಾಗಿತ್ತು. ಮೇಲಂಗಿಯ ತೋಳನ್ನು ಹಿಂದಕ್ಕೆ ಸರಿಸಿ ಸಂಪುಟವನ್ನು ಬಲವಾಗಿ ಹೊಡೆಯತೊಡಗಿದಳು. ಹೊಡೆಯುವ ರಭಸಕ್ಕೆ ಸಂಪುಟದ ಚಕ್ಕೆಗಳು ಕೋಣೆಯಲ್ಲೆಲ್ಲಾ ಹಾರಿದವು. ಮೂವತ್ತನೆಯ ಸಲ ಹೊಡೆದಾಗ, ಸಂಪುಟದ ಮುಚ್ಚಳವು ಸಡಿಲವಾಯಿತು. ಮೇಲುಬ್ಬಸ ಬಿಡುತ್ತಾ, ಮುಚ್ಚಳವನ್ನು ಬಲವೆಲ್ಲಾ ಬಿಟ್ಟು ಎತ್ತಿದಳು. ಒಳಗೆ ಮಲಗಿದ್ದ ಗಂಡನನ್ನು ನೋಡಿದ ತಕ್ಷಣ ಎದೆ ಧಸ್ಸಕ್ಕೆಂದಿತು. ಭಯವೂ ಆಶ್ಚರ್ಯವೂ ಒಮ್ಮೆಯೇ ಆಯಿತು. ಛ್ವಾಂಗ್ ದೀರ್ಘ ನಿಶ್ವಾಸ ಬಿಟ್ಟು, ಕಣ್ಣುಗಳನ್ನು ಉಜ್ಜಿಕೊಂಡು ಸಂಪುಟದಲ್ಲೇ ಎದ್ದು ಕುಳಿತನು. ಟಿಇನ್ ಕೆಟ್ಟ ಧ್ವನಿಯಲ್ಲಿ ಚೀರಿದಳು. ಕೈಯಲ್ಲಿದ್ದ ಕೊಡಲಿಯು ಜಾರಿ ಕೆಳಗೆ ಬಿತ್ತು.

"ಟಿಇನ್, ನನ್ನ ಚಿನ್ನ .... ಕೈಹಿಡಿದೆಬ್ಬಿಸು." ಎಂದು ಕೈ ಚಾಚಿದನು.

ಟಿಇನ್ ಅವಾಕ್ಕಾದಳು. ಏನೂ ತೋಚಲಿಲ್ಲ. ಮಂಕು ಹಿಡಿದವಳಂತೆ ನಡುಗುತ್ತಿದ್ದ ಕೈಗಳಿಂದ ಅವನನ್ನು ಹಿಡಿದೆಬ್ಬಿಸಿದಳು. ಇಬ್ಬರೂ ನಡು

ಮನೆಯನ್ನು ಪ್ರವೇಶಿಸಿದರು. ರಾಜಕುಮಾರ ಮತ್ತು ಆಳು ಅದೃಶ್ಯರಾಗಿದ್ದುದನ್ನು ಕಂಡು ಸಂತೃಪ್ತಳಾಗಿ "ರೀ.... ನೀವು ಮೃತರಾದ ದಿನದಿಂದ ನನಗೆ ನಿದ್ದೆ ಒಂದು ನಿಮಿಷ ಕಣ್ಣಿಗೆ ಹತ್ತಿಲ್ಲ. ಹಗಲೂ ರಾತ್ರಿ ನಿಮ್ಮ ಯೋಚನೆಯೇ .... ನೀವು ಸತ್ತಿಲ್ಲಾಂತನೇ ಭಾವನೆ. ಸತ್ತವರು ಪುನಃ ಬದುಕಿರುವ ವಿಷಯವನ್ನು ಕೇಳಿದ್ದೆ. ನೀವೂ ಯಾಕೆ ಬದುಕಿರಕೂಡ ದೂಂತ ಆಸೆಯಿಂದ ಪೆಟ್ಟಿಗೆಯನ್ನು ಒಡೆದೆ. ದೇವರು ದೊಡ್ಡವನು. ನನ್ನ ಪುಣ್ಯಕ್ಕೆ ನೀವು ಬದುಕಿದ್ದೀರಿ. ದಯಾಮಯ ಭಗವಾನನು ನಿಮಗೆ ಪ್ರಾಣ ಬರುವ ಹಾಗೆ ಮಾಡಿದ." ಎಂದಳು.

ಛ್ವಾಂಗ್ "ನಿನ್ನ ಉಪಕಾರವನ್ನು ಮರೆಯಲು ಸಾಧ್ಯವೇ !.... ಆದರೆ ಇದೇನು ಈ ಉಡುಪು ಧರಿಸಿದ್ದೀ ?".

ಟಿರ್ಷ ಮುಗುಳ್ನಗೆ ನಕ್ಕು, ತುಂಬುಗಣ್ಣಿನಿಂದ ಪತಿಯನ್ನು ನೋಡಿ 'ಈ ಉಡುಪಾ ? .... ನಿಮ್ಮನ್ನು ಸ್ವಾಗತಿಸಲು ...".

"ಭೇಷ್ .... ! .... ಒಪ್ಪಿದೆ .... ಆದರೆ .... ನಡುಮನೆಯಲ್ಲಿದ್ದ ಸಂಪುಟವು ಗುಡಿಸಲಿಗೆ ಹೇಗೆ ಹೋಯಿತು ?"

ಟಿರ್ಷಗೆ ಏನು ಉತ್ತರ ಕೊಡಬೇಕೋ ತೋಚಲಿಲ್ಲ. ನಡುಮನೆಯಲ್ಲಿ ಮದುವೆಗಾಗಿ ತಯಾರಿಸಿದ್ದ ಊಟ, ಮದ್ಯದ ಬಟ್ಟಲುಗಳು ತಳಿರು ತೋರಣಗಳು ಎಲ್ಲವೂ ಹಾಗೆಯೇ ಇದ್ದವು. ಆದರೂ ಅವನ ಕಡೆ ತಿರುಗಿ ಮನ ಮೋಹಕವಾಗಿ ನಸುನಕ್ಕಳು. ಛ್ವಾಂಗ್, "ನಿನ್ನ ಹಿಂದೆ ನಿಂತಿರುವರಾರು?" ಎಂದು ಬೆಟ್ಟನ್ನು ತೋರಿಸಿದನು. ಟಿರ್ಷ ಹಿಂತಿರುಗಿ ನೋಡಿದಳು. ಯಾರೂ ಕಾಣಿಸಲಿಲ್ಲ. ಪುನಃ ಗಂಡನ ಕಡೆ ನೋಡಿದಾಗ ಗಂಡನು ಕಾಣಿಸಲಿಲ್ಲ. ಪುನಃ ನೋಡಿದಾಗ ರಾಜಕುಮಾರ ಮತ್ತು ಆಳು ನಿಂತಿದ್ದರು ಮತ್ತೊಮ್ಮೆ ಗಂಡನ ಕಡೆ ನೋಡಿದಾಗ ಗಂಡನು ಕಾಣಿಸಿದನು. ರಾಜ ಕುಮಾರನು ಕಾಣಿಸಲಿಲ್ಲ. ಈ ರೀತಿ ಆಗುವುದಕ್ಕೆ ಛ್ವಾಂಗನ ಮಂತ್ರ ಶಕ್ತಿಯೇ ಕಾರಣ. ರಾಜಕುಮಾರ ಮತ್ತು ಛ್ವಾಂಗ್ ಇಬ್ಬರೂ ಒಬ್ಬನೇ ಎಂದು ಅರಿವಾಗಿ ಟಿರ್ಷ ತನ್ನ ಕೃತ್ರಿಮವು ಬಯಲಾಯಿತೆಂದು ಅವಮಾನಿತ

ಳಾಗಿ ಸೊಂಟಕ್ಕೆ ಸುತ್ತಿದ್ದ ಪಟ್ಟೆಯನ್ನು ಮನೆಯ ಧೂಲಕ್ಕೆ ಕಟ್ಟಿ, ಕತ್ತಿಗೆ ನೇಣು ಹಾಕಿಕೊಂಡಳು.

ಟರ್ಜ ಮೃತಳಾದುದನ್ನು ಕಂಡು ಛ್ವಾಂಗ್ ಅವಳನ್ನು ಶವಸಂಪುಟದಲ್ಲಿ ಮಲಗಿಸಿ ಮುಚ್ಚಳವನ್ನು ಮುಚ್ಚಿ, ಮನೆಗೆ ಬೆಂಕಿಯನ್ನು ಹಚ್ಚಿದನು. ಮನೆಯು ಪೂರ್ತಿ ಉರಿದು ಹೋದಮೇಲೆ, ಊರಿನ ಜನರಿಗೆ ಸಿಕ್ಕಿದ್ದು ನನವಾ ಮತ್ತು ನೀತಿದರ್ಪಣಸೂತ್ರ, ಎರಡು ಮಾತ್ರ. ಅವರೆಡೂ ಬೆಂಕಿಯಲ್ಲಿ ಸುಟ್ಟಿರಲಿಲ್ಲವಂತೆ.

ಛ್ವಾಂಗ್ ಪಶ್ಚಿಮ ದಿಕ್ಕಿನ ಕಡೆ ಹೋದನೆಂದು ಪ್ರತೀತಿ. ಎಲ್ಲಿಗೆ ಹೋದನೋ ತಿಳಿಯದು. ಇಷ್ಟು ಮಾತ್ರ ಹೇಳಬಹುದು. ಪುನಃ ಅವನು ಮದುವೆಯಾಗಲಿಲ್ಲ.



# ದೊಡ್ಡ ನಾಯಿ

ಬರೆದವರು :

**ಬ್ರೈಸ್ಕಾರ್ಟ್ಬೈ ಈಸಾಪ್**

ನಿತ್ಯ ಕತ್ತಲೆಯಲ್ಲಿ ಒಬ್ಬಾತ ತನ್ನ ಮನದನ್ನೆಯನ್ನು ಕಾಣಲು ನಡೆದುಹೋಗುತ್ತಿದ್ದ. ಯುವತಿ ಮತ್ತು ಪುರುಷ ಇಬ್ಬರೂ ಒಂದು ಸಂಕೇತವನ್ನಿಟ್ಟುಕೊಂಡಿದ್ದರು. ಪುರುಷನು ಅವಳ ಮನೆಯ ಬಾಗಿಲ ಹತ್ತಿರ ನಿಂತು ನಾಯಿಮರಿಯಂತೆ ಕುಯ್ಯ್, ಕುಯ್ಯ್ ಎನ್ನುತ್ತಿದ್ದನು. ಸಂಕೇತವನ್ನರಿತು ಯುವತಿಯು ಬಾಗಿಲನ್ನು ತೆರೆಯುತ್ತಿದ್ದಳು.

ನಿತ್ಯ ಗಲ್ಲಿ ಕಾಯ್ದು ಪುರುಷನು ತನ್ನ ಮನೆಯ ಮುಂದೆ ಕ್ಲುಪ್ತ ಕಾಲದಲ್ಲಿ ನಡೆದುಹೋಗುವುದನ್ನು ಕಂಡು, ಮತ್ತೊಬ್ಬ ಯುವಕನಿಗೆ ಕುತೂಹಲವಾಯಿತು. ಪುರುಷನನ್ನು ಹಿಂಬಾಲಿಸಿದನು. ಅವನು ಬಾಗಿಲ ಹತ್ತಿರ ನಿಂತು ಕುಯ್ಯ್, ಕುಯ್ಯ್ ಎನ್ನುತ್ತಲೂ ತಕ್ಷಣವೇ ಬಾಗಿಲು ತೆರೆಯಿತು. ಯುವತಿಯೊಬ್ಬಳು ಹೊರಗೆ ಬಂದಳು. ಅದೇ ಸಮಯದಲ್ಲಿ ಮೋಡಗಳ ಮರೆಯಿಂದ ಚಂದ್ರನು ಹೊರಗೆ ಬಂದನು. ಬೆಳದಿಂಗಳಲ್ಲಿ ಅವಳ ಸುಂದರವದನವು ಕಾಣಿಸಿತು. ಯುವತಿಯು ಪುರುಷನ ಕೈಹಿಡಿದು ಕತ್ತಲಾಗಿದ್ದ ಮನೆಯನ್ನು ಪ್ರವೇಶಿಸಿ ಬಾಗಿಲನ್ನು ಹಾಕಿದಳು. ದೂರದಲ್ಲಿ ಎಲ್ಲವನ್ನೂ ನಿಂತು ನೋಡುತ್ತಿದ್ದ ಹುಡುಗನು "ಹೀಗಾ ಸಮಾಚಾರ!" ಎಂದು ತನ್ನಲ್ಲೇ ನಕ್ಕು, ಈ ಪುರುಷನಿಗಿಂತ ಬೇಗ ಬರಬೇಕೆಂದುಕೊಂಡು ಕಾಲನ್ನು ಹಿಂದಕ್ಕೆ ತೆಗೆದು ನಡೆದನು.

ಮಾರನೆಯ ದಿವಸ ಯುವಕನು ಅವಳ ಮನೆಯ ಮುಂದೆ ನಿಂತು, ನಿತ್ಯ ಬರುತ್ತಿದ್ದ ಪುರುಷನಂತೆಯೇ "ಕುಯ್ಯ್, ಕುಯ್ಯ್" ಎಂದನು. ಸುಂದರಿಯು ಬಾಗಿಲನ್ನು ತೆರೆದು ಕತ್ತಲಾಗಿದ್ದ ಮನೆಯ ಒಳಗೆ ಕರೆದು

ಕೊಂಡು ಹೋದಳು. ಇಬ್ಬರೂ ಒಂದು ಗಂಟೆಯ ಕಾಲ ಸುವಾಸನೆ ಬರುತ್ತಿದ್ದ ಹಾಸಿಗೆಯ ಮೇಲೆ ಮಲಗಿಕೊಂಡಿದ್ದರು. ಯುವತಿಗೆ ತನ್ನ ಪಕ್ಕದಲ್ಲಿ ಪವಡಿಸಿರುವನು ಹೊಸಬನೆಂದು ತಿಳಿದಿದ್ದರೂ, ಯಾವ ರೀತಿಯ ಉದ್ವೇಗವನ್ನೂ ತೋರಿಸಲಿಲ್ಲ.

ಇದ್ದಕ್ಕಿದ್ದಂತೆ ಎಲ್ಲೆಡೆ ಹರಡಿದ ನೀರವತೆಯನ್ನು ಭೇದಿಸಿ ಬಾಗಿಲ ಹತ್ತಿರ ' ಕುಯ್ಞ್ ಕುಯ್ಞ್ ' ಎಂದು ಶಬ್ದವು ಕೇಳಿಬಂದಿತು. ಹಾಸಿಗೆಯಲ್ಲಿ ಮಲಗಿದ್ದವರು ಅಲುಗಾಡಲಿಲ್ಲ. ಯುವಕನು ಶಬ್ದಮಾಡದೆ ಹಾಸಿಗೆಯ ಮೇಲಿನಿಂದೆದ್ದು ಬೆಕ್ಕಿನಂತೆ ಹೆಜ್ಜೆಯಿಡುತ್ತಾ, ಬಾಗಿಲ ಹತ್ತಿರ ಬಂದು ಸಂದಿಯಲ್ಲಿ ದೊಡ್ಡನಾಯಿಯಂತೆ " ಬೌ ಬೌ " ಎಂದು ಬೊಗಳಿದನು.

ಹೊರಗಡೆ ನಿಶ್ಶಬ್ದ. ನಡೆದುಹೋಗುವ ಕಾಲಿನ ಸಪ್ಪಳ.

ನಾಯಿಮರಿಯು ದೊಡ್ಡನಾಯಿಯನ್ನು ಕಂಡು ಬಾಲ ಮುದರಿಸಿಕೊಂಡು ಕಾಲನ್ನು ಹಿಂದೆಗೆದು ಓಡಿಹೋದುದರಿಂದ, ಯುವತಿಯು "ದೊಡ್ಡ ನಾಯಿ ಈಗ ಹಾಸಿಗೆಯಲ್ಲಿ ಬಂದು ಮಲಗಬಹುದು" ಎಂದಳು.

ದೊಡ್ಡನಾಯಿಗೆ ಬೇಕಾಗಿದ್ದುದು ಅದೇ ! ಹೇಳಿದಂತೆಯೇ ಮಾಡಿತು.



# ರಾಜಕುಮಾರಿಯ ದುರಂತ ಬಾಳು

ಬರೆದವರು :

## ವಾಲ್ಟೈರ್

ನನಗೆ ಒಂದೇ ಹಿಂಭಾಗ ಇದೆಯಲ್ಲ ಕಾರಣವೇನು ಎಂದು ಕೇಳಿದ ರಲ್ಲವೇ ? .... ನಿಮಗೆ ಬೇಸರ ಬಾರದಿದ್ದಲ್ಲಿ, ಹೇಳಲು ನನಗೇನೂ ಅಭ್ಯಂತರವಿಲ್ಲ.

ನೀವು ನೆನಸಿರುವ ಹಾಗೆ ಮೊದಲಿನಿಂದ ನಾನು ಕೆಲಸಗಿತ್ತಿಯಾಗಿಲ್ಲ. ಶ್ರೀಮಂತ ಮನೆತನದವಳು. ಪ್ಯಾಲಸ್ಟೈನ ರಾಣಿ ನನ್ನ ತಾಯಿ, ಹತ್ತನೆಯ ಉರ್ಬಾನ್ ನನ್ನ ತಂದೆ. ಹದಿನಾಲ್ಕನೆಯ ವಯಸ್ಸಿನವರೆವಿಗೂ ಅರಮನೆ ಯಲ್ಲೇ ಬೆಳೆದೆ. ನಮ್ಮ ಅರಮನೆಯು ಹೇಗಿತ್ತೆಂದು ಹೇಳಿದರೆ ನಿಮಗೆ ಅರ್ಥ ವಾಗುತ್ತದೋ ಇಲ್ಲವೋ ತಿಳಿಯದು. ಜರ್ಮನಿಯಲ್ಲಿ ನಿಮ್ಮ ಬ್ಯಾರನ್‌ಗಳು ವಾಸಿಸುತ್ತಾರಲ್ಲ. ಈ ಸೌಧಗಳು ನಮ್ಮ ಅರಮನೆಯ ಕುದುರೆ ಲಾಯಕ್ಕೆ ಕೂಡ ಸರಿಸಮನಾದುವಲ್ಲ. ನನ್ನ ಹತ್ತಿರವಿದ್ದ ಒಂದೊಂದು ಉಡುಪೂ ವೆಸ್ಟ್‌ಫಾಲಿಯ ಹತ್ತಿರವಿರುವ ಉಡುಪನ್ನೆಲ್ಲಾ ಸೇರಿಸಿದರೆ ಎಷ್ಟು ಬೆಲೆಯಾ ಗುತ್ತದೋ ಅದಕ್ಕೂ ಹತ್ತರಷ್ಟು ಆಗುತ್ತಿತ್ತು. ಉಷಃಕಾಲದ ಮಂದ ಸಮೀರವು ಚುಂಬಿಸಿದಾಗ ಹೂ ಅರಳುವಂತೆ, ಯೌವನಕ್ಕೆ ಅಡಿ ಇಟ್ಟಂತೆ ಅತ್ಯಂತ ರೂಪವತಿಯಾಗಿದ್ದೆ. ಲಲಿತ ಕಲೆಗಳು ನನ್ನ ಕರಗತವಾಗಿದ್ದವು. ಪುಷ್ಪವತಿಯಾದ ನನ್ನನ್ನು ನೋಡಿ ಯುವಕರು ಮುಗ್ಧರಾಗಿದ್ದರು. ಅವರ ಕಣ್ಣುಗಳು ನನ್ನ ಉಬ್ಬಿದ ಎದೆಯನ್ನು ನೆಟ್ಟ ನೋಟದಿಂದ ನೋಡಿದಾಗ ಪುಳುಕಿತರಾಗುತ್ತಿದ್ದರು ! ಮಾಟವಾದ ಮೊಲೆಗಳು ! ವೀನಸ್ ಳ ಮೆಡಿಸಿ ಸ್ತನಗಳಂತೆ ದುಂಡಾಗಿ ಗಟ್ಟಿಯಾಗಿದ್ದುವು. ಕರಿಯ ಉದ್ದವಾದ ರೆಪ್ಪೆಯ ಕೂದಲು ನನ್ನ ಅಂದವಾದ ಕಣ್ಣಾಲಿಗಳಿಗೆ ಮತ್ತಷ್ಟು ಸೊಬಗನ್ನು ಕೊಟ್ಟಿ ದ್ದವು. ಇರುಳಲ್ಲಿ ಮಿನುಗುವ ನಕ್ಷತ್ರದ್ವಯಗಳೆಂದು ನಮ್ಮೂರಿನ ಕವಿಗಳು

ವರ್ಣನೆ ಮಾಡುತ್ತಿದ್ದರು. ನನಗೆ ಉಡುಗೆಯನ್ನು ತೊಡಿಸುತ್ತಿದ್ದ, ಬಿಚ್ಚುತ್ತಿದ್ದ ಸಖಿಯರು ನನ್ನ ದೇಹದ ಮುಂಭಾಗ, ಹಿಂಭಾಗಗಳನ್ನು ಎವೆ ಇಕ್ಕಿ ನೋಡಿ ಮನದಲ್ಲೇ ಹಿಗ್ಗುತ್ತಿದ್ದರು. ವಿಕಾಸವಾಗುತ್ತಿದ್ದ ನನ್ನ ದೇಹದ ಸೊಬಗನ್ನು ನೋಡಲು ಪುರುಷರು, ತಾವೂ ಸಖಿಯರ ಸ್ಥಾನದಲ್ಲಿ ಇರಲು ಇಚ್ಛಿಸಿದ್ದಲ್ಲಿ ಅತಿಶಯೋಕ್ತಿ ಎನಿಸಿರಲಾರದು.

ತಂದೆ ತಾಯಿಗಳು ನನ್ನನ್ನು ಮಸ್ಸಾಕರಾರದ ರಾಜಕುಮಾರನಿಗೆ ಕೊಟ್ಟು ವಿವಾಹಮಾಡಬೇಕೆಂದು ನಿಶ್ಚಯಿಸಿದರು. ನಿಶ್ಚಿತಾರ್ಥವೂ ಆಯಿತು. ಎಂತಹ ರೂಪವಂತ! ಗುಣವಂತ! ಶೀಲವಂತ! ವಿದ್ಯಾವಂತ! ಹಾಸ್ಯಗಾರ! ಅತಿ ಮೃದು ಸ್ವಭಾವದವನು. ನನ್ನನ್ನು ಕಂಡರೆ ಅವನಿಗಿದ್ದ ಪ್ರೀತಿ ಎಷ್ಟು! ಅವನನ್ನು ಕಂಡ ಘಳಿಗೆಯಿಂದ ಅನುರಕ್ತಳಾದೆ. ಅವನ ಮಾತು ವಾದ್ಯದ ತಂತಿಯನ್ನು ಮೀಟಿದಾಗ ಮಾರ್ದನಿ ಕೊಡುವ ಮಂಜುಳ ನಾದದಂತೆ ಇಂಪಾಗಿತ್ತು, ಮೃದುವಾಗಿತ್ತು. ಮದುವೆಯ ದಿನವೂ ನಿಶ್ಚಯವಾಯಿತು. ತಂದೆ ತಾಯಿಗಳು ಅತ್ಯಂತ ವಿಜೃಂಭಣೆಯಿಂದ ವಿವಾಹವನ್ನು ನೆರವೇರಿಸಬೇಕೆಂದು ನಿರ್ಧರಿಸಿದರು. ನಿತ್ಯ ಹಬ್ಬ, ವಿಡಂಬನ ನಾಟಕಗಳು, ನೃತ್ಯ, ಸಂಗೀತ. ಇಟಲಿಯ ದೇಶದ ಆದ್ಯಂತ ಕವಿಗಳು ನನ್ನ ರೂಪ, ಗುಣಗಳನ್ನು ಮುಕ್ತಕಂಠದಿಂದ ಹೊಗಳಿ ಭಾವಗೀತೆಗಳನ್ನು ಬರೆದರು.

ಭವಿಷ್ಯದ ತೆರೆಮರೆಯಲ್ಲಿ ಅಡಗಿರುವ ದುರಂತಗಳನ್ನು ಯಾರು ಊಹಿಸಬಲ್ಲರು? ನನ್ನ ಬಾಳು ಅನಂತ ಮುಳ್ಳಿನ ಹಾಸಿಗೆಯಾಗುವಂತಹ ಘಟನೆಯೊಂದು ಆಯಿತು. ಒಂದು ದಿವಸ ನನ್ನನ್ನು ಮದುವೆಯಾಗಬೇಕಾಗಿದ್ದ ವರನ ಪ್ರೇಯಸಿ, ಅವನನ್ನು ಚಾಕೋಲೇಟ್ ಕುಡಿಯಲು ಆಹ್ವಾನಿಸಿದಳು. ಚಾಕೋಲೇಟ್ ಕುಡಿದ ಎರಡು ಗಂಟೆಗಳಲ್ಲಿ ಕೈಕಾಲು ಅದುರಿಸತ್ತುಹೋದನು. ಅವನ ಮರಣವು ಮುಂದೆ ನಾನು ಅನುಭವಿಸಿದ ಕಷ್ಟನಷ್ಟಗಳನ್ನು ನೆನಸಿಕೊಂಡಲ್ಲಿ ಅಂತಹ ಪ್ರಮಾದವಾದುದೇನಲ್ಲವೆಂದೇ ಹೇಳಬಹುದು. ಪ್ರಿಯತಮನನ್ನು ಕಳೆದುಕೊಂಡ ನನಗಿಂತ ಹೆಚ್ಚು ದುಃಖವು ನನ್ನ ತಾಯಿಗೆ ಆಯಿತೆಂದು ಹೇಳಲಾರೆ. ಆದರೂ ದುರಂತ ನಡೆದುದರಿಂದ ಊರು ಬಿಟ್ಟು ಹೋಗಲು ನಿಶ್ಚಯಿಸಿದಳು. ಗೀಟಾ ಹತ್ತಿರ ಆಕೆಗೆ ಒಂದು ರಮ್ಯವಾದ

ಪ್ರದೇಶವಿತ್ತು. ಸೈಂಟ್ ಪೀಟರನ ಪೀಠವನ್ನು ಹೋಲುವ ಚಿನ್ನದ ಮೆರಗಿನ ಅತ್ಯಂತ ಸುಂದರವಾದ ಗ್ಯಾಲಿ. (ತೆಪ್ಪದ ಹಾಗೆ ಇರುವ ಹುಟ್ಟು ದೋಣಿ ಗುಲಾಮ ಅಥವ ಕೈದಿಗಳು ನಡೆಸುವ ಅಂತಸ್ತಿನ ದೋಣಿ) ಪ್ರಯಾಣ ಬೆಳಸಲು ಸಿದ್ಧವಾಯಿತು. ಸಮುದ್ರದಲ್ಲಿ ಪ್ರಯಾಣ ಬೆಳಸುತ್ತಿದ್ದಂತೆ ಹಡಗುಗಳ್ಳರು ನಮ್ಮ ಹಡಗನ್ನು ಆಕ್ರಮಿಸಿದರು. ನಮ್ಮ ಸೈನಿಕರಿಗೂ ಅವರಿಗೂ ಘೋರವಾಗಿ ಕದನವಾಯಿತು. ಕಡೆಗೆ ನಮ್ಮ ಸೈನಿಕರು ಶಸ್ತ್ರ ಗಳನ್ನು ಕೆಳಗೆ ಹಾಕಿ ಮೊಳಕಾಲು ಊರಿ ಶರಣಾಗತರಾದರು.

ಶರಣಾಗತರಾಗುತ್ತಲೂ ತಕ್ಷಣ ಎಲ್ಲರ ಬಟ್ಟೆಗಳನ್ನು ಬಿಚ್ಚಿ ನಿಲ್ಲಿಸಿದರು. ಧೃಡಕಾಯರಾದ ಸೈನಿಕರು ಬೆತ್ತಲೆಯಾಗಿ ನಿಂತಾಗ ಸುಂದರವಾಗಿ ಕಂಡು ಬಂದರು. ಕಡೆಗೆ ನಮ್ಮಗಳ ಸರದಿ ಬಂದಿತು. ನನ್ನ, ತಾಯಿಯು ಮತ್ತು ಇತರ ಸ್ತ್ರೀಯರ ವಸ್ತ್ರಗಳನ್ನು ಬಿಚ್ಚಿ ನಗ್ನರನ್ನಾಗಿ ಮಾಡಿದರು.

ಶ್ರದ್ಧೆ ಮತ್ತು ತಾಳ್ಮೆಯಿಂದ ಎಲ್ಲರ ಉಡಿಗೆಗಳನ್ನು ಬಿಚ್ಚಿದ, ಅವರ ಕಾರ್ಯವು ಶ್ಲಾಘನೀಯವಾಗಿತ್ತು. ಎಲ್ಲಕ್ಕಿಂತಲೂ ನಮ್ಮಗಳಿಗೆ ಆಶ್ಚರ್ಯ ವನ್ನುಂಟು ಮಾಡಿದ್ದೆಂದರೆ, ನಾವು ಪಿಚಕಾರಿಯ ತುದಿಯನ್ನು ಮಾತ್ರ ಒಳಗೆ ಬಿಟ್ಟುಕೊಳ್ಳುವ ಸ್ಥಳಕ್ಕೆ ಬೆಟ್ಟನ್ನು ತೂರಿಸಿದ್ದು. ಇದೊಂದು ವಿಚಿತ್ರ ಸಂಪ್ರದಾಯವಿರಬಹುದೆಂದು ಕೊಂಡೆವು. ಒಂದೊಂದು ದೇಶದ ಪದ್ಧತಿಯು ಒಂದೊಂದು ರೀತಿ. ಒಬ್ಬರ ಸಂಪ್ರದಾಯವು ಇನ್ನೊಬ್ಬರಿಗೆ ವಿಚಿತ್ರವಾಗಿ ಕಾಣಬರುತ್ತದೆ. ಅವರ ಸಂಪ್ರದಾಯ ಪದ್ಧತಿಯನ್ನು ಖಂಡಿ ಸಲು, ತೆಗಳಲು ನಾವಾರು ? ಈ ಜಾಗದಲ್ಲಿ ನಾವು ವಜ್ರ, ವೈಢೂರ್ಯ ಮುಂತಾದ ಬೆಲೆ ಬಾಳುವ ಹರಳುಗಳನ್ನು ಇಟ್ಟುಕೊಂಡಿರಬಹುದೆಂದು ಹೀಗೆ ಮಾಡಿದರೆಂದು ಅನಂತರ ತಿಳಿದು ಬಂದಿತು. ಈ ಸಂಪ್ರದಾಯವು ಆದಿಕಾಲದಿಂದ ಸಮುದ್ರಯಾನಮಾಡುವವರಲ್ಲಿ ನಡೆದು ಬಂದಿದೆ. ಮಾಲ್ಟ ದೇಶದ ಯೋಧರುಗಳು ಕೂಡಾ ತುರುಷ್ಕರನ್ನು ಸೆರೆಹಿಡಿದಾಗ ಇದೇ ರೀತಿ ಮಾಡುತ್ತಾರೆ. ಅದರಲ್ಲೂ ತುರುಷ್ಕ ಸ್ತ್ರೀಯರನ್ನು ಈ ರೀತಿ ವಿಶ್ವದ ಎಲ್ಲೆಡೆಗಳಲ್ಲೂ ಪರೀಕ್ಷಿಸುತ್ತಾರೆ.

ನಾನು ಮತ್ತು ನನ್ನಮ್ಮ ಗುಲಾಮರಾದ ಮೇಲೆ ಪಟ್ಟ ಕಷ್ಟಗಳನ್ನೆಲ್ಲ

ವಿವರಿಸಲು ಇಷ್ಟವಿಲ್ಲ. ಸ್ತ್ರೀಯರು ರೂಪವತಿಯರಾಗಿದ್ದರೆ ಕೆಲವು ವಿಷಯ ಗಳಲ್ಲಿ ಅನುಕೂಲವಾಗುವಾಗುತ್ತದೆ. ಕೆಲವು ವಿಚಾರಗಳಲ್ಲಿ ಸಹಿಸಲಸಾಧ್ಯ ವಾದ ಕಷ್ಟಗಳಿಗೆ ಈಡಾಗುತ್ತಾರೆ. ನಮ್ಮಮ್ಮ, ಜೊತೆಯಲ್ಲಿದ್ದ ಶ್ರೀಮಂತ ಮಹಿಳೆಯರೆಲ್ಲರಿಗಿಂತ ಸುಂದರಳಾಗಿದ್ದಳು. ಮೊರಾಕೋ ದೇಶದ ಅತ್ಯಂತ ಸುಂದರ ಯುವತಿ ಎಂಬುವಳಿಗಿಂತ ನಮ್ಮ ಸಖಿಯರು ಎಷ್ಟೋ ಚನ್ನಾಗಿದ್ದರು. ನಾನು ದೇವಲೋಕದ ಕನ್ಯೆಯಂತೆ ಎಲ್ಲರ ಮನಸ್ಸನ್ನೂ ಆಕರ್ಷಿಸಿದೆ. ಮಸ್ಸಾಕರದ ರಾಜಕುಮಾರನ ಭೋಗಕ್ಕೆ ಮುಡುಪಾಗಿದ್ದ ನನ್ನ ದೇಹವು ಸಮುದ್ರಗಳ್ಳರ ಪಾಲಾಯಿತು. ಹಡಗಿನ ನಾಯಕನು ನೋಡಲು ರಾಕ್ಷಸನಂತೆ ಘೋರವಾಗಿದ್ದನು. ನನಗೆ ಏನೋ ಮೆಹರ್‌ಬಾನಿ ತೋರಿಸುತ್ತಿರುವಂತೆ ಕಳಿದು ಕೊಂಡಿದ್ದ. ಪಾಲಸ್ಟ್ರೀನಾದ ರಾಜಕುಮಾರಿ ಯಾಗಿದ್ದ ನನ್ನ ತಾಯಿ ಮತ್ತು ನಾನು ಮೊರಾಕೊವನ್ನು ಸೇರುವುದರಲ್ಲಿ ಹಡಗುಗಳ್ಳರ ದೌರ್ಜನ್ಯವನ್ನು ಸಹಿಸಿಕೊಂಡಿದ್ದನ್ನು ನೋಡಿದರೆ ನಾವು ಗಟ್ಟಿಮುಟ್ಟಯಾಗಿಯೇ ಇದ್ದಿರಬೇಕು. ಎಲ್ಲ ಗುಲಾಮರಾದ ಸ್ತ್ರೀಯರಿಗೂ ಈ ರೀತಿ ಸಾಧಾರಣವಾಗಿ ಆಗುವುದರಿಂದ ಇದರಲ್ಲಿ ವಿಶೇಷವೇನಿಲ್ಲ. ಹೆಚ್ಚು ಹೇಳಲೂ ಹೋಗುವುದಿಲ್ಲ.

ನಾವು ದಡವನ್ನು ತಲುಪಿದಂತೆ ನಮ್ಮ ಹಡಗಿನಲ್ಲಿದ್ದ ಸಂಪತ್ತನ್ನು ಅಪಹರಿಸಲು ಶತೃಗಳು ಆಕ್ರಮಿಸಿದರು. ಮೊದಲು, ತಂದಿದ್ದ ಚಿನ್ನ, ಬೆಳ್ಳಿ, ವಜ್ರ ವೈಢೂರ್ಯ, ರತ್ನ ಮುಂತಾದ ಅಮೂಲ್ಯ ಪದಾರ್ಥಗಳನ್ನು ಅಪಹರಿ ಸಿದ ಮೇಲೆ ನಮ್ಮ ಸರದಿ ಬಂದಿತು. ಮೊದಲು ಹಣ. ಅದಾದ ಮೇಲೆ ಪ್ರಶಸ್ತ ವಾದ ವಸ್ತುವೆಂದರೆ ಹೆಂಗಸು. ಉತ್ತರದಲ್ಲಿ ವಾಸಿಸುವ ನಮ್ಮ ಜನಗಳಿಗೆ ಮಿತಿಮೀರಿದ ಸ್ತ್ರೀಲಲಾಸೆ, ಚಾಪಲ್ಯ ಇವರುಗಳಿಗೆ, ನಮ್ಮವರನ್ನು ಹೋಲಿಸಿ ದರೆ ನಮ್ಮವರ ಧಮನಿಗಳಲ್ಲಿ ರಕ್ತಕ್ಕೆ ಬದಲು ಹಾಲುಹರಿಯುತ್ತದೆಂದು ಹೇಳಬಹುದು. ಕ್ರೂರ ಮೃಗಗಳಾದ ಹಾವು, ಸಿಂಹ, ಹುಲಿಗಳಂತೆ ನಾವು ಯಾರಿಗೆ ಸೇರಬೇಕೆಂದು ನಿರ್ಧರಿಸಲು, ಒಬ್ಬ ಮೂರ್ ನನ್ನ ತಾಯಿಯು ಒಂದು ರೆಟ್ಟೆಯನ್ನು ಹಿಡಿದೆಳೆದನು. ಸಮುದ್ರಗಳ್ಳರ ಕಡೆಯವನು ಇನ್ನೊಂದು ರಟ್ಟೆಯನ್ನು ಹಿಡಿದೆಳೆದನು. ಇನ್ನೊಬ್ಬ ಮೂರ್ ಒಂದು ಕಾಲನ್ನು ಹಿಡಿದೆಳೆದಾಗ ಮತ್ತೊಬ್ಬ ಹಡಗುಗಳ್ಳನು ಮತ್ತೊಂದು ಕಾಲನ್ನು

ಹಿಡಿದೆಳೆದನು. ಇದೇ ರೀತಿ ಎಲ್ಲ ಹೆಂಗಸರುಗಳ ಗತಿಯೂ ಆಯಿತು. ಇವರ ಸೆಳೆದಾಟದಲ್ಲಿ ಅಟ್ಟೆಗಳೂ ಕೈಕಾಲುಗಳು ಕಿತ್ತು ಹೋದವು. ಹಡಗಿನ ನಾಯಕನು ನನ್ನನ್ನು ಬೆನ್ನಿನ ಹಿಂದೆ ನಿಲ್ಲಿಸಿಕೊಂಡು, ಮೇಲೆ ಬೀಳಲು ಬಂದ ಮೂವರನ್ನು ಕೈಲಿಹಿಡಿದ ಬಾಗಿದ ಚೂರಿಯಿಂದ ಆವೇಶ ಬಂದವನಂತೆ ತಿವಿದು ಸಾಯಿಸತೊಡಗಿದನು. ನನ್ನ ತಾಯಿಯು ಛಿದ್ರ ಛಿದ್ರವಾದುದನ್ನು ಅಲ್ಲೇ ನಿಂತು ನೋಡಿದೆ. ಸೆರೆಯಾಗಿದ್ದ ನಮ್ಮ ಸೈನಿಕರು, ನಾವಿಕರು, ನಮ್ಮ ಯಜಮಾನ ಎಲ್ಲರೂ ಮೃತರಾದರು. ನಾನು ಹೆಣದ ರಾಶಿಯ ಮಧ್ಯೆ ಮೂರ್ಛೆ ಹೋದೆ.

ಬಹು ಕಷ್ಟದಿಂದ ಕೈಕಾಲುಗಳ ರಾಶಿಯ ಮಧ್ಯದಿಂದ ಎದ್ದು ಹತ್ತಿರ ದಲ್ಲೇ ಹರಿಯುತ್ತಿದ್ದ ನದಿಯ ದಡದಲ್ಲಿದ್ದ ಕಿತ್ತಳೆಯ ಮರದಡಿಯಲ್ಲಿ ಹೋಗಿ ಕುಳಿತೆ. ಸ್ವಲ್ಪ ಹೊತ್ತಿಗೆ ಮುಂಚೆ ನಡೆದ ಒಂದೊಂದು ದುರ್ಘಟ ನೆಯೂ ಮನಸ್ಸಿನ ಚಿತ್ರಪಟದಲ್ಲಿ ಸರಿದು ಪುನಃ ಪ್ರಜ್ಞೆ ತಪ್ಪಿತು. ಅರ್ಧ ಸ್ಮೃತಿ, ಅರ್ಧ ಮೂರ್ಛೆ. ಏಳಲು ಕೂಡ ನಿಶ್ಯಕ್ತಳಾಗಿದ್ದೆ. ಯಾರೋ ನನ್ನ ದೇಹವನ್ನು ಅಪ್ಪಿ ಭಾರಬಿಟ್ಟಂತೆ ತೋರಿತು. ಕಣ್ಣು ಬಿಟ್ಟು ನೋಡಿದೆ. ಸುಂದರನಾದ ಯುವಕನೊಬ್ಬನು ಇಟಾಲಿಯನ್ ಭಾಷೆಯಲ್ಲಿ 'ಪುರುಷತ್ವ ವನ್ನು ಕಳೆದುಕೊಳ್ಳುವುದಕ್ಕಿಂತ ನರಕ ಮತ್ತೊಂದಿಲ್ಲ' ಎಂದು ತನ್ನಲ್ಲೇ ಗೊಣಗಿದನು.

ಇಟಾಲಿಯನ್ ಭಾಷೆ ಮಾತನಾಡಿದ್ದನ್ನು ಕೇಳಿ ಮನಸ್ಸಿಗೆ ಹರ್ಷ ವಾಯಿತು. ಆದರೆ ನನ್ನ ಭಾಗಕ್ಕೆ ಇನ್ನೂ ಹೆಚ್ಚಿನ ದೌರ್ಭಾಗ್ಯವು ಕಾದಿತ್ತು. ನಡೆದುದೆಲ್ಲವನ್ನೂ ಅವನಿಗೆ ವಿವರಿಸಿದೆ. ಅವನು ನನ್ನನ್ನು, ಹತ್ತಿರದಲ್ಲಿದ್ದ ಮನೆಗೆ ಎತ್ತುಕೊಂಡು ಹೋಗಿ, ಆಹಾರ, ನೀರನ್ನು ಕೊಟ್ಟು ಉಪಚರಿಸಿ, ನೆಟ್ಟ ನೋಟದಿಂದ ನೋಡಿ, ಇಷ್ಟು ಸುಂದರಳಾದ ಯುವತಿಯನ್ನು ತಾನು ನೋಡೇ ಇಲ್ಲವೆಂದು ಹೇಳಿದನು. ಪಾಪ! ಅವನ ಭಾಗಕ್ಕೆ ನಾನು ಪ್ರಯೋಜನಕ್ಕೆ ಬಾರದ ವಸ್ತುವಾಗಿದ್ದೆ. ಅವನ ಆಸೆಯ ಹರಿಗೋಲು ಮನದಲ್ಲೇ ಉಳಿಯಿತು.

ಅವನು ನಿಧಾನವಾಗಿ ತನ್ನ ಕಥೆಯನ್ನು ಹೇಳತೊಡಗಿದನು. “ನಾನು ಹುಟ್ಟಿದ್ದು ನೇಪಲ್ಸಿನಲ್ಲಿ. ಪ್ರತಿ ವರ್ಷ ಅಲ್ಲಿ ಎರಡು ಸಾವಿರ ಬಾಲಕರಿಗೆ ಶಸ್ತ್ರ ಚಿಕಿತ್ಸೆ ಮಾಡಿ ಷಂಡರನ್ನಾಗಿ ಮಾಡುತ್ತಾರೆ. ಕೆಲವರು ಚಿಕಿತ್ಸೆ ಮಾಡುವಾಗಲೇ ಮೃತರಾಗುವರು. ನಪುಂಸಕರನ್ನಾಗಿ ಮಾಡಿದರೆ ಧ್ವನಿ ಒಡೆಯದೆ ಹೆಂಗಸರ ಕಂಠದಂತೆ ಮಂಜುಳವಾಗಿರುತ್ತದೆ ಶಸ್ತ್ರ ಚಿಕಿತ್ಸೆ ಹೊಂದಿದ ಹುಡುಗರನ್ನು ಶ್ರೀಮಂತರು ತಮ್ಮ ಅಂತಃಪುರದಲ್ಲಿ ಕೆಲಸಕ್ಕೆ ಸೇರಿಸಿಕೊಳ್ಳುತ್ತಾರೆ. ಮತ್ತೆ ಕೆಲವರನ್ನು ರಾಜ್ಯಪಾಲರು ತಮ್ಮ ಸಿಬ್ಬಂದಿಯಲ್ಲಿ ಸೇರಿಸಿಕೊಳ್ಳುವರು. ನನ್ನ ಮೇಲೆ ನಡೆಸಿದ ಶಸ್ತ್ರ ಚಿಕಿತ್ಸೆಯು ಅತಿ ಜಯಪ್ರದಾಯಕವಾಗಿತ್ತು. ಪ್ಯಾಲಸ್ಟ್ರೀನ ರಾಜಕುಮಾರಿಯು ಖಾಸಗಿ ಛಾಪಲಿನ (ಚರ್ಚ್, ದೇವಾಲಯ) ಗಾಯಕ ವೃಂದದಲ್ಲಿ ನಿಯಮಿತನಾದೆ.

“ನಮ್ಮ ತಾಯಿಯ ಛಾಪಲಿನಲ್ಲೆ ?”.

“ನಿಮ್ಮ ತಾಯಿ ? ಹಾಗಾದರೆ ಆರು ವರ್ಷದ ಹುಡುಗಿಯಾಗಿರುವವರೆವಿಗೂ ಎತ್ತಿಕೊಂಡು ಆಡಿಸುತ್ತಿದ್ದ ರಾಜಕುಮಾರಿ ನೀನೇನಾ ?”.

“ಹೌದು. ಅವಳೇ ನಾನು.” ಇಲ್ಲಿಗೆ ನೂರು ಮಾರು ದೂರದಲ್ಲಿರುವ ಹೆಣಗಳ ರಾಶಿಯಲ್ಲಿ ನನ್ನ ತಾಯಿಯ ಕೈಕಾಲುಗಳು ತುಂಡು ತುಂಡಾಗಿ, ಬಿದ್ದಿದ್ದಾಳೆ.....”

ನಡೆದುದೆಲ್ಲವನ್ನೂ ಮತ್ತೊಮ್ಮೆ ವಿವರಿಸಿದೆ. ಅವನು “ನನ್ನನ್ನು ಕ್ರೈಸ್ತಮತದ ರಾಜನೊಬ್ಬನು ಮೊರಾಕೋ ರಾಜನ ಹತ್ತಿರ ರಾಯಭಾರಿಯಾಗಿ ಕಳುಹಿಸಿದ್ದಾನೆ ನಮ್ಮ ದೊರೆಯು ಇತರ ಕ್ರೈಸ್ತಮತೀಯ ರಾಜರುಗಳ ವ್ಯಾಪಾರವನ್ನು ಹಾಳುಮಾಡಲು ಮುಸಲ್ಮಾನ ರಾಜನಿಗೆ ಗುಂಡು, ಮದ್ದುಗಳನ್ನು ಸರಬರಾಜು ಮಾಡಬೇಕೆಂದಿದ್ದಾನೆ. ನನ್ನ ಕೆಲಸವು ಮುಗಿಯಿತು. ಇಲ್ಲಿಂದ ಇಟಲಿಗೆ ಹಿಂತಿರುಗುತ್ತಿದ್ದೇನೆ. ನಿನ್ನನ್ನೂ ಜೊತೆಗೆ ಕರೆದುಕೊಂಡು ಹೋಗುತ್ತೇನೆ” ಎಂದನು.

ಇಟಲಿಗೆ ಕರೆದುಕೊಂಡು ಹೋಗುವುದಕ್ಕೆ ಬದಲು ಆಲ್ಜೀರ್ಸ್‌ಗೆ ಕರೆದುಕೊಂಡು ಹೋಗಿ, ರಾಜ್ಯಾಧಿಕಾರಿಗೆ ಅಧಿಕ ಲಾಭಕ್ಕೆ ನನ್ನನ್ನು ಮಾರಿದನು. ಆಗ ಹೊಸದಾಗಿ ಪ್ಲೇಗ್ ಸಾಂಕ್ರಾಮಿಕ ರೋಗವು

ಯೂರೋಪ್, ಉತ್ತರ ಆಫ್ರಿಕಾ ದೇಶಗಳಲ್ಲಿ ಹರಡಿ ಲಕ್ಷಾಂತರ ಜನರು ಮೃತರಾಗುತ್ತಿದ್ದರು. ನನಗೂ ಪ್ಲೇಗ್ ತಗಲಿತು. ನನಗೆ ಆಗಿದ್ದ ವಯಸ್ಸಾದರೂ ಎಷ್ಟು? ಹದಿನಾರು ಅಲ್ಲದೆ ನಿತ್ಯ ಬಲತ್ಕಾರದ ವ್ಯಭಿಚಾರಕ್ಕೆ ತುತ್ತಾಗಿದ್ದೆ. ದೇಹದಲ್ಲಿ ಶಕ್ತಿಯೇ ಇರಲಿಲ್ಲ ಜೊತೆಗೆ ನನ್ನ ತಾಯಿಯ ಕೈಕಾಲುಗಳನ್ನು ಅಮಾನುಷೀಯವಾಗಿ ಕಿತ್ತುಹಾಕಿದ್ದನ್ನು ಕಣ್ಣಾರೆ ನೋಡಿ ಮನಸ್ಸು ಜರ್ಜರಿತವಾಗಿತ್ತು. ನನ್ನನ್ನು ಮಾರಿದವನೂ, ಕೊಂಡವನೂ ಎಲ್ಲರೂ ರೋಗಕ್ಕೆ ತುತ್ತಾಗಿ ಮಡಿದರು. ನನ್ನದು ಗಟ್ಟಿಜೀವ, ಬದುಕಿಕೊಂಡೆ. ನಾನು ಇನ್ನೂ ಕಷ್ಟಗಳನ್ನು ಅನುಭವಿಸಬೇಕಾಗಿತ್ತು. ನನ್ನ ಜೊತೆ ಜನಾನದಲ್ಲಿದ್ದವರು ಕೂಡ ರೋಗದಿಂದ ಸತ್ತರು.

ಪ್ಲೇಗ್ ಹರಡಿದ ಮೊದಲ ದಿವಸವೇ ಗುಲಾಮರನ್ನೆಲ್ಲಾ ಮಾರಲಾಯಿತು. ವ್ಯಾಪಾರಿಯೊಬ್ಬನು ನನ್ನನ್ನು ಕೊಂಡು ಟ್ಯೂನಿಸ್ಸಿಗೆ ಕೊಂಡೊಯ್ದು ಟ್ರಿಪೋಲಿಗೆ ಮಾರಿದನು. ಟ್ರಿಪೋಲಿಯಿಂದ ಅಲೆಕ್ಸಾಂಡ್ರಿಯಾಕ್ಕೆ ಮಾರಾಟವಾದೆ. ಅಲೆಕ್ಸಾಂಡ್ರಿಯಾದಿಂದ ಸ್ಮೈರ್ನಾ, ಸ್ಮೈರ್ನಾದಿಂದ ಕಾನ್‌ಸ್ಟಾಂಟಿನೋಪಲ್ಲಿಗೆ. ಕಡೆಗೆ ಜನ್ನೆಜಾರಿಯ ಆಗಾ ನನ್ನನ್ನು ಕೊಂಡನು.

ಆಗಾ ಮಹಾ ವಿಷಯಲಂಪಟ. ಅವನ ಕಾಮ ಪಿಪಾಸೆಗೆ ಮಿತಿಯೆಂಬುದೇ ಇರಲಿಲ್ಲ. ಪಾಲುಮಿಟೋಯ ಎಂಬ ಸಣ್ಣ ದ್ವೀಪದಲ್ಲಿ ನಮ್ಮನ್ನೆಲ್ಲಾ ಇಟ್ಟನು. ದ್ವೀಪದ ಸಂರಕ್ಷಣೆಗೆ ಇಪ್ಪತ್ತು ಜನ ಸೈನಿಕರು, ಇಬ್ಬರು ರಾಕ್ಷಸರಂತಿದ್ದ ಷಂಡರನ್ನು ನಿಯಮಿಸಿದ್ದ. ಆಗಾ ಮಹಾ ಪರಾಕ್ರಮಿ. ಲೆಕ್ಕವಿಲ್ಲದಷ್ಟು ರಷ್ಯನರನ್ನು ಕೊಂದನು. ರಷ್ಯನರು ಅಷ್ಟೇ ಉತ್ಸಾಹದಿಂದ ತುರುಷ್ಕರನ್ನು ಕೊಂದರು. ಅಜೋವ್ ಅದ್ವಿತೀಯ ಯೋಧ. ಅವನು ಕಾಮಿನಿ ಕಾಂಚನಗಳಿಗೆ ಮನಸೋಲುತ್ತಿರಲಿಲ್ಲ. ತುರುಷ್ಕರನ್ನು ಸದೆಬಡೆಯಬೇಕೆಂಬುದೊಂದೇ ಹಟ. ಆಗಾನ ಸೈನ್ಯವು ಪಲಾಯನ ಮಾಡುವಂತೆ ಸದೆಬಡಿದು ನಾವಿದ್ದ ದ್ವೀಪವನ್ನು ಸುತ್ತುಗಟ್ಟಿ, ಕೋಟೆಯ ಒಳಗೆ ಆಹಾರ ಬರಗೊಡದೆ ಎಲ್ಲರೂ ಉಪವಾಸವಿರುವಂತೆ ಮಾಡಿದನು. ದ್ವೀಪವನ್ನು ಸಂರಕ್ಷಿಸುತ್ತಿದ್ದ ಜನ್‌ಜೀರಿಗಳು ಎಂತಹ ಕಷ್ಟಪರಿಸ್ಥಿತಿ ಒದಗಿದರೂ ಶರಣಾಗತರಾಗುವುದಿಲ್ಲ

ವೆಂದು ಪಣತೊಟ್ಟಿದ್ದರು. ಆ ಕೋಟೆಯಲ್ಲಿ ತಿನ್ನಲು ಆಹಾರವಿಲ್ಲದಿದ್ದುದ ರಿಂದ ಇಬ್ಬರು ಷಂಡರನ್ನು ಕೊಂದು ಭಕ್ಷಿಸಿದರು. ಎಷ್ಟು ಕಾಲ ಉಪವಾಸ ವಿರಲು ಸಾಧ್ಯ? ಕಡೆಗೆ ದಿನಕ್ಕೊಬ್ಬಳು ಹೆಂಗಸನ್ನು ತಿನ್ನಲು ನಿರ್ಧರಿಸಿದರು.

ನಮ್ಮ ಹತ್ತಿರ ಒಬ್ಬ ಸಾಧುವಾದ ಇಮಾಂ ಇದ್ದನು. ವಾಚಾಳಿ. ಸೈನಿಕರು ನಮ್ಮನ್ನು ತಿನ್ನುವುದು ಮಹಾ ಪಾಪವೆಂದು ಹೇಳಿ, ಅಷ್ಟು ಹಸಿ ವಾದರೆ ಒಬ್ಬ ಹೆಂಗಸಿನ ನಿತಂಬವನ್ನು ಕತ್ತರಿಸಿ ತಿನ್ನಬಹುದು, ಹೆಂಗಸರ ನಿತಂಬವು ರುಚಿಯಾಗಿರುವುದಲ್ಲದೆ ಸಾಯುವುದಿಲ್ಲ; ಒಂದೊಂದೇ ಅಂಗವನ್ನು ಕಬಳಾಯಿಸಿ ಹೆಚ್ಚು ಕಾಲ ಸಂರಕ್ಷಿಸಬಹುದು, ಅಷ್ಟರಲ್ಲಿ ದಯಾಮಯನಾದ ಅಲ್ಲಾ ದಾರಿ ತೋರಿಸುತ್ತಾನೆಂದು ಸಮಾಧಾನವನ್ನು ಹೇಳಿದನು.

ನರಭಕ್ಷಕರಾಗಿದ್ದ ಸೈನಿಕರು ಹಸಿವನ್ನು ನೀಗಿಸಿಕೊಳ್ಳಲು ನಮ್ಮ ಒಂದೊಂದು ಪಿರ್ರೆಯನ್ನು ಕತ್ತರಿಸಿದಾಗ ಆದ ಯಮಯಾತನೆ ಹೇಳಲು ಸಾಧ್ಯವಿಲ್ಲ. ಶಸ್ತ್ರ ಚಿಕಿತ್ಸೆಯಾದ ಮೇಲೆ, ಮುಲ್ಲಾ ನಮಗೆಲ್ಲಾ ಮುಸಲ್ಮಾನ ಹುಡುಗರಿಗೆ ಸುನ್ನಿಯಾಗುತ್ತಲೂ ಹಚ್ಚುವ ಮುಲಾಮನ್ನು ಸವರಿದನು. ನಾನು ನೋವಿನಿಂದ ಸತ್ತೇಹೋಗುತ್ತೇನೆಂದು ತಿಳಿದುಕೊಂಡೆ. ಹೆಂಗಸ ರೆಲ್ಲಾ ಏಳಲಿಕ್ಕೆ ಆಗದಂತೆ ಸಾವಿನ ಘಳಿಗೆಯನ್ನು ಎದುರು ನೋಡುತ್ತಾ ಮಲಗಿದರು.

ಸೈನಿಕರು ನಮ್ಮ ದೇಹದ ಭಾಗವನ್ನು ತಿಂದು ಹಸಿವನ್ನು ಅಡಗಿಸಿ ಕೊಳ್ಳುತ್ತಿದ್ದಂತೆ ತೆಪ್ಪಗಿದ್ದ ದೋಣಿಗಳಲ್ಲಿ ರಷ್ಯನರು ಬಂದಿಳಿದರು. ನಮ್ಮ ಸೈನಿಕರು ನಾಗಾಲೋಟ ಕಿತ್ತರು. ರಷ್ಯದ ಸೈನಿಕರು ನಾವು ಇದ್ದ ಪರಿಸ್ಥಿತಿಯನ್ನು ಕೂಡ ಲೆಕ್ಕಿಸಲಿಲ್ಲ. ಸಾಧಾರಣವಾಗಿ ಎಲ್ಲ ದೇಶದ ಸೈನ್ಯ ಪಡೆಗಳಲ್ಲೂ ಫ್ರೆಂಚ್ ವೈದ್ಯರುಗಳಿರುತ್ತಾರೆ. ಅವರುಗಳಲ್ಲಿ ಒಬ್ಬನು ನನ್ನನ್ನು ಬಹಳ ಚೆನ್ನಾಗಿ ನೋಡಿಕೊಂಡನು. ನಮಗೆಲ್ಲಾ ವ್ರಣವು ವಾಸಿಯಾ ಯಿತು. ಫ್ರೆಂಚ್ ಡಾಕ್ಟರು ನನ್ನಲ್ಲಿ ಅನುರಕ್ತನಾಗಿರುಕ್ತನಾಗಿರುವುದಾಗಿ ತಿಳಿಸಿದನು. ಶತೃಗಳು ಮುತ್ತಿದಾಗ ಜೀವಂತನಾಗಿ ಕೋಟೆಯನ್ನು ಕಾಪಾ ಡಲು ಕೊಯ್ದು ತಿನ್ನುವುದು ಸರ್ವೇ ಸಾಧಾರಣವಂತೆ. ಡಾಕ್ಟರು ನಮಗೆಲಾ ಹರ್ಷಚಿತ್ತರಾಗಿರಬೇಕೆಂದು ಸಮಾಧಾನ ಹೇಳಿದನು.

ಗುಣ ಹೊಂದಿದ ಮೇಲೆ ನನ್ನ ಜೊತೆಯಲ್ಲಿದ್ದ ಸ್ತ್ರೀಯರನ್ನು ಮಾಸ್ಕೋವಿಗೆ ಕಳುಹಿಸಿದರು. ನಾನು ಒಬ್ಬ ಶ್ರೀಮಂತ ಬೋಯರೊಡನೆ ಹೋಗಬೇಕಾಯಿತು. ಅವನು ನನ್ನನ್ನು ತೋಟದ ಕೆಲಸಕ್ಕೆ ನಿಯಮಿಸಿದನು. ರಾಜಾಸ್ಥಾನದಲ್ಲಿ ಗಲಭೆಯಾಗಿ ಗಾಡಿಯ ಚಕ್ರವು ಮುರಿದು ನನ್ನ ಯಜಮಾನನು ಸತ್ತುಹೋದನು ನಾನು ಇದೇ ಸಮಯವೆಂದು ಅಲ್ಲಿಂದ ಪಲಾಯನ ಮಾಡಿ ರಷ್ಯದ ಗಡಿಯನ್ನು ದಾಟಿ ರೀಗಾದ ಹೋಟೆಲಿನಲ್ಲಿ ಕೆಲಸಕ್ಕೆ ಸೇರಿದೆ. ರೀಗಾದಿಂದ ರೋಸ್ಟಾಕ್, ವಿಸ್‌ಮರ್, ಲಿಪ್ಜಿಗ್, ಕ್ಯಾಸೆಲ್ ಉಟ್ರೆಕ್ಟ್, ಲೈಡನ್, ಹೇಗ್, ರಾಟರ್‌ಡ್ಯಾಮ್ ಮುಂತಾದ ಕಡೆಗಳಲ್ಲಿ ಗಳಲ್ಲಿ ಹೋಟೆಲಿನಲ್ಲಿ ಕೆಲಸಮಾಡಿ ಕಡೆಗೆ ಇಲ್ಲಿಗೆ ಬಂದು ಕೆಲಸಕ್ಕೆ ಸೇರಿಕೊಂಡಿದ್ದೇನೆ. ಎಷ್ಟೋ ಸಲ ಸಾಯಬೇಕೆಂದೆನಿಸಿತು. ಆದರೆ ಬದುಕಿರಬೇಕೆಂದು ಆಸೆ. ಇದ್ದೇನೆ.

ಕೇವಲ ಅರ್ಧ ಹಿಂಭಾಗವಿದ್ದರೂ ಕೂಡ ಹೆಂಗಸು ಪ್ರಪಂಚದಲ್ಲಿ ಅನೇಕ ಸುಖಗಳನ್ನು ಅನುಭವಿಸಲು ಸಾಧ್ಯವಿದೆಯಲ್ಲವೆ ?.



# ಪ್ರತ್ಯಕ್ಷ ಪ್ರಮಾಣ

## ಪಂಚತಂತ್ರದಿಂದ

ಒಂದು ಹಳ್ಳಿಯಲ್ಲಿ ಬಡಗಿಯೊಬ್ಬನಿದ್ದನು. ಅವನ ಹೆಂಡತಿಯು ಮಿಂಡಗಾತಿಯೆಂದು ಸುತ್ತಮುತ್ತಲಿದ್ದವರು ಆಡಿಕೊಳ್ಳುತ್ತಿದ್ದರು. ಜನಗಳು ಮಾತನಾಡಿಕೊಳ್ಳುವುದನ್ನು ಕೇಳಿ "ಜನಗಳಿಗೆ ಇಷ್ಟು ಇದ್ದುದನ್ನು ಅಷ್ಟು ಮಾಡಿ ಹೇಳುತ್ತಾರೆ. ನಿಜವೋ ಸುಳ್ಳೋ ಕಣ್ಣಾರೆ ಕಂಡುಹಿಡಿಯ ಬೇಕು" ಎಂದುಕೊಂಡನು ಮನಸ್ಸಿಗೆ ಸಮಾಧಾನವಿರಲಿಲ್ಲ.

ಒಂದು ದಿವಸ ಪರೀಕ್ಷಿಸಲು ಒಂದು ತಂತ್ರವನ್ನು ಹೂಡಿದನು. "ಲೇ! ಪಕ್ಕದ ಹಳ್ಳಿಯಲ್ಲಿ ಕೆಲಸ ಸಿಕ್ಕಿದೆ ಕೆಲವು ದಿವಸಗಳು ಅಲ್ಲಿ ಇರಬೇಕಾಗುತ್ತದೆ. ನನಗೆ ತಿಂಡಿ ಮಾಡಿ ಕಟ್ಟಿಕೊಡು." ಎಂದು ಹೆಂಡತಿಗೆ ಹೇಳಿದನು. ಅವನು ಹೇಳಿದ್ದೇ ಸಾಕೆಂದು ಅವಳು ಅವನಿಗೆ ಪ್ರಿಯವಾದ ತಿಂಡಿಗಳನ್ನು ಮಾಡಿ ಬೇಗ ಮನೆ ಬಿಟ್ಟು ಹೋಗಲು ಆತುರಪಡಿಸಿದಳು. ಪತಿಯು ಕಣ್ಣಿಗೆ ಕಾಣಿಸದಂತೆ ದೂರ ಹೋಗುತ್ತಲೂ ತನ್ನ ಹೊಸ ಪ್ರಣಯಿಗೆ ಹೇಳಿ ಕಳುಹಿಸಿದಳು.

ಬಡಗಿಯು ಸಂಜೆಯವರೆಗೂ ಕಾಡಿನಲ್ಲಿದ್ದು ಇಳಿಗತ್ತಲಾದಂತೆ ಹೆಂಡತಿಯ ಕಣ್ಣಿಗೆ ಬೀಳದಂತೆ ಮೆಲ್ಲಗೆ ಮನೆಯನ್ನು ಹೊಕ್ಕು ಮಂಚದ ಕೆಳಗೆ ಬಚ್ಚಿಟ್ಟುಕೊಂಡನು ಕತ್ತಲಾದಂತೆ ಮಿಂಡನು ನೆಟ್ಟಗೆ ತನ್ನದೇ ಮನೆ ಇದ್ದ ಹಾಗೆ ಪ್ರವೇಶಿಸಿ, ಬಟ್ಟೆಗಳನ್ನು ಬಿಚ್ಚಿ ಹಾಸಿಗೆಯ ಮೇಲೆ ಕಾಲು ಚಾಚಿ ಮಲಗಿದನು. ಸ್ವಲ್ಪ ಹೊತ್ತಾಗಲು ಯುವತಿಯು ಮನೆಯನ್ನು ಪ್ರವೇಶಿಸಿ, ಬಾಗಿಲ ಚಿಲಕವನ್ನು ಹಾಕಿ, ನಲ್ಲನಿಗೆ ತನ್ನ ಅಂಗಾಂಗಗಳ ಸೌಂದರ್ಯವನ್ನು ತೋರಲು ದಿಟ್ಟತನದಿಂದ ಉಟ್ಟ ಬಟ್ಟೆಯನ್ನು ಕಿತ್ತೊಗೆದು, ಸ್ವೇಚ್ಛಾಪರಳಾಗಿ ಆಲಂಗಿಸಿದಳು. ಪತಿಗೆ ಇಬ್ಬರನ್ನೂ ಚೂರಿಯಿಂದ ಇರಿದು

ತಿವಿದು ಬಿಡೋಣವೇ ಎನ್ನುವಷ್ಟು ಕೋಪವು ಬಂದಿತು. ಇದ್ದ ಕಡೆ ಯಿಂದಲೇ ಎಲ್ಲವನ್ನೂ ನೋಡಿ ಶಿಕ್ಷಿಸಬೇಕೆಂದು ಕೋಪವನ್ನು ತಡೆದು ಕೊಂಡನು.

ಹಾಸಿಗೆಯಲ್ಲಿ ಮಲಗಿದಂತೆ ಗಂಡನ ದೇಹವು ಅವಳ ಕಾಲಿಗೆ ತಗಲಿತು. ಭಯದಿಂದ ಏನು ಮಾಡಬೇಕೋ ತೋರಲಿಲ್ಲ. ಇನಿಯ ನಿಗೆ ಆತುರ. ಸೆಳದಪ್ಪಿದನು. ಆದದ್ದು ಆಗಲಿ ಎಂದು ಮೆಲ್ಲನೆ ಅವನ ಕಿವಿಯಲ್ಲಿ "ತಡಿಯಿರೀಂದ್ರೆ" ಅವನು ಇಲ್ಲೇ ಅವಿಸಿಕೊಂಡಿದ್ದಾನೆ. ನಾನು ಮಾತನಾಡುವವರೆಗೂ ಸುಮ್ಮನಿರು ಎಂದು ಉಸುರಿದಳು.

ಪ್ರಿಯತಮ "ಯಾಕೆ?" ಎಂದನು.

ಯುಪತಿಯು ಗಟ್ಟಿಯಾಗಿ "ಯಾಕೆ ಅಂದರೆ ಇವತ್ತು ಬೆಳಗ್ಗೆ ದೇವ ಸ್ಥಾನಕ್ಕೆ ದೇವಿಯ ದರ್ಶನ ಮಾಡಲು ಹೋಗಿದ್ದೆ. ಆಗ ಆಕಾಶವಾಣಿ ಯೊಂದು 'ನಿನ್ನನ್ನು ನೋಡಿದರೆ ನನಗೆ ಬಹಳ ಪರಿತಾಪವಾಗುತ್ತದೆ. ಇನ್ನು ಆರು ತಿಂಗಳಲ್ಲಿ ನೀನು ವಿಧವೆಯಾಗುತ್ತಿ' ಎಂದಿತು. ನನಗೆ ಆಕಾಶವಾಣಿ ಯನ್ನು ಕೇಳಿ ಬರಸಿಡಿಲು ಬಡಿದಂತಾಯಿತು. ದುಃಖದಿಂದ "ಹಾಗಾದರೆ ಈ ಗಂಡಾಂತರದಿಂದ ಪಾರಾಗಿ, ಪತಿಯನ್ನು ಉಳಿಸಿಕೊಳ್ಳಲು ಏನು ಮಾಡ ಬೇಕು. ಪರಿಹಾರವೇನು ?' ಎಂದು ಕೇಳಿದೆ. ಅದಕ್ಕೆ ದೇವಿಯು ನಿನ್ನ ಮಾಂಗಲ್ಯವು ಉಳಿಯಲಿಚ್ಛಿಸುವೆಯೋ ಆದಲ್ಲಿ ಪರಪುರುಷನಿಗೆ, ಸಂತೋಷದಿಂದ ಸ್ವೇಚ್ಛೆಯಾಗಿ ನಿನ್ನ ದೇಹವನ್ನು ಅರ್ಪಿಸು ನಿನ್ನ ಪತಿಯು ತಲೆದೋರಿರುವ ಗಂಡಾಂತರದಿಂದ ಪಾರಾಗುವುದು ಮಾತ್ರವಲ್ಲ, ಇತರ ಪುರುಷರು ಜೀವಂತವಾಗಿರುವುದಕ್ಕಿಂತ ಹೆಚ್ಚಿನ ಕಾಲ ಬದಕಿರುತ್ತಾನೆ. ಆರೋಗ್ಯಶಾಲಿಯಾಗಿ ನಿಮ್ಮ ಕುಟುಂಬ ಜೀವನವು ಸಂತೋಷದಾಯಕ ವಾಗಿರುತ್ತದೆ" ಎಂದಳು. ದಯವಿಟ್ಟು ನೀವು ನನ್ನ ಮಾಂಗಲ್ಯದ ಭಾಗ್ಯ ವನ್ನು ಕಾಪಾಡಿ, ನನ್ನ ಪತಿಯು ಸಾಧಾರಣವಾಗಿ ಪುರುಷರು ಬದಕುವುದ ಕ್ಕಿಂತ ಹೆಚ್ಚಿನ ಕಾಲ ಜೀವಂತನಾಗಿ ಬಾಳುವಂತೆ ಮಾಡಲು ನನಗೆ ಸಹಾಯ ಮಾಡಿ ಪುಣ್ಯವನ್ನು ಕಟ್ಟಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ" ಎಂದಳು.

ಯುವಕನು ಗಂಭೀರವಾಗಿ, "ಹಾಗೆಯೇ ಆಗಲಿ" ಎಂದು ಹೊಸ ಹುರುಪಿನಿಂದ ಪ್ರಾರಂಭಿಸಿದನು.

ಕಾರ್ಯವು ಮುಗಿದು ಪ್ರೇಮಿಗಳಿಬ್ಬರೂ ತೆಪ್ಪಗೆ ವಿಶ್ರಮಿಸಿಕೊಳ್ಳುತ್ತಿದ್ದಂತೆ, ಪತಿಯು ಮಂಚದ ಕೆಳಗಿನಿಂದ ಎದ್ದು ಬಂದು "ಭಲೇ! ಮೆಚ್ಚಿದೆ! ನಿಜವಾಗಿ ನೀನು ಸಾಧ್ವೀಮಣಿ!" ಎಂದು ಯುವಕನನ್ನು ನೋಡಿ "ನೀನು ಯಾರೋ ಗೊತ್ತಿಲ್ಲ ನೀನು ಮಾಡಿದ ಕಾರ್ಯವು ಶ್ಲಾಘನೀಯವಾದುದು! ಇಬ್ಬರು ಎದ್ದು ಬನ್ನಿ, ಲಕ್ಷಣವಾಗಿ ಕುಡಿದು, ತಿಂದು ಇಂದಿನ ಶುಭಕಾರ್ಯವನ್ನು ಕೊಂಡಾಡೋಣ" ಎಂದನು.



# ಸ್ತ್ರೀಯ ಮನಸ್ಸಿನಂತರಾಳವನ್ನು ಕಂಡವರಾರು ?

## ಇಟಾಲಿಯನ್ ಜಾನಪದ ಕಥೆ

ಬಹಳ ಹಿಂದಿನ ಮಾತು. ಶ್ರೀಮಂತನೊಬ್ಬನಿದ್ದ. ಅವನ ಮಡದಿಯ ರೂಪವು ರಂಭೆಯನ್ನು ನಾಚಿಸುವಂತಹದು. ಶ್ರೀಮಂತನು ಹೆಂಡತಿಯನ್ನು ಹೃದಯದ ದೇವತೆಯೆಂದು ಆರಾಧಿಸುತ್ತಿದ್ದನು. ಅವನ ಪ್ರೀತಿ ಅಷ್ಟು ಗಾಢವಾಗಿತ್ತು. ರೂಪವತಿಯಾದ ಹೆಂಡತಿಯನ್ನು ಕಟ್ಟಿಕೊಂಡವರಿಗೆಲ್ಲಾ ಒಂದೇ ಚಿಂತೆ ಬೇರೆಯವರಾರಾದರೂ ತಮ್ಮ ಹೆಂಡತಿಯ ಮೇಲೆ ಕಣ್ಣು ಹಾಕಿಯಾರೂಂತ ಎಲ್ಲಿಲ್ಲದ ಅನುಮಾನ.

ಶ್ರೀಮಂತನಿಗೆ ಒಂದು ದಿವಸ ಕಣ್ಣು ಬೇನೆ ಪ್ರಾರಂಭವಾಗಿ ಕಣ್ಣೇ ಕಾಣದಂತಾಯಿತು. ಹೀಗಾಗಿದ್ದು ಅವನ ದುರಾದೃಷ್ಟವೋ ಅಥವ ದೇವರಿಗೆ ಹಾಗೆ ಮಾಡಬೇಕೆಂದು ಆಸೆಯಾಯಿತೋ ತಿಳಿಯದು.

ಶ್ರೀಮಂತನಿಗೆ ಮೊದಲೇ ಅನುಮಾನ ಪ್ರಕೃತಿ. ಕಣ್ಣು ಕಳೆದುಕೊಂಡ ಮೇಲೆ ಕೇಳಬೇಕೆ ! ಎಲ್ಲಿಯಾದರೂ ಹೋದಾಳೆಂದು ಎಡಬಿಡದೆ ಅವಳ ಸಮೀಪದಲ್ಲಿಯೇ ಇರುತ್ತಿದ್ದನು. ಅವಳಿಗೂ ಎಲ್ಲೂ ಹೋಗಕೂಡದೆಂದು ಸುಗ್ರೀವಾಜ್ಞೆಯನ್ನು ಮಾಡಿದನು.

ಅದೇ ಊರಿನಲ್ಲಿ ಯುವಕನೊಬ್ಬನಿದ್ದನು. ಅವನಿಗೆ ಇವಳ ಮೇಲೆ ಮೊದಲಿನಿಂದ ಕಣ್ಣಿತ್ತು. ಶ್ರೀಮಂತನು ಎಡಬಿಡದೆ ಸದಾ ಅವಳ ಸಮೀಪದಲ್ಲೇ ಇರುತ್ತಿದ್ದುದರಿಂದ ಮಾತನಾಡಲು ಕೂಡ ಅವಕಾಶವಿರಲಿಲ್ಲ

ಯುವಕನು ತನ್ನನ್ನು ಕಂಡು ಮುಗ್ಧನಾಗಿರುವುದನ್ನು ನೋಡಿ ಯುವತಿಯು " ನಾನೇನು ಮಾಡಲಿ ? ನನಗೂ ನಿನ್ನನ್ನು ಕಂಡರೆ ಪ್ರೀತಿಯೆ. ಗಂಡನು ಸದಾ ಹಿಂದು ಹಿಂದೇ ಬೆನ್ನಿಗೆ ಅಂಟಿಹಾಕಿಕೊಂಡ ಭೂತದ ಹಾಗೆ ಓಡಾಡುತ್ತಿರುತ್ತಾನೆ. ನನ್ನನ್ನು ಒಂದು ನಿಮಿಷ ಕೂಡ ಬಿಟ್ಟಿರುವುದಿಲ್ಲ " ಎಂದು ಉಸಿರ್ಗರೆದು ಹೇಳಿದಳು.

ಯುವಕನಿಗೆ ದಿಕ್ಕೇ ತೋಚದಂತಾಯಿತು. ಮುಖವು ಸಪ್ಪಗಾಯಿತು. ಅವಳಿಗೋಸ್ಕರ ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಾಗಿ ಹೇಳಿದನು.

ಯುವತಿಗೆ, ಯುವಕನನ್ನು ನೋಡಿ ಪರಿತಾಪವಾಯಿತು. ಯುವಕನ ಮನದಾಸೆಯನ್ನು ಈಡೇರಿಸಲು ಮನಸ್ಸು ತವಕಗೊಂಡಿತು. ಅವಳಿಗೋ ಅಸಾಧ್ಯ ಬುದ್ಧಿ ! ರಂಧ್ರವಿರುವ ಉದ್ದನೆಯ ಬೊಂಬೊಂದನ್ನು ತೆಗೆದುಕೊಂಡು ಬೇಲಿಯಿಂದ ಆಚೆ ನಿಂತಿದ್ದ ಯುವಕನ ಕಿವಿಯ ಹತ್ತಿರ ಇಟ್ಟು, "ನಿನ್ನನ್ನು ನೋಡಿದರೆ ಅಯ್ಯೋ ಅನ್ನಿಸುತ್ತದೆ. ಒಂದು ಉಪಾಯವನ್ನು ಕಂಡುಹಿಡಿದಿದ್ದೇನೆ. ನಮ್ಮ ಮನೆಯ ಹಿತ್ತಲಲ್ಲಿ ಒಂದು ಪಿಯರ್ಸ್ ಹಣ್ಣಿನ ಮರವಿದೆ. ನೀನು ಆ ಮರದ ಮೇಲೆ ಯಾರ ಕಣ್ಣಿಗೂ ಬೀಳದಂತೆ ಹತ್ತಿ ಕುಳಿತಿಕೊ. ಆ ಮರದಲ್ಲಿ ಅಸಾಧ್ಯವಾದ ಹಣ್ಣುಗಳು ಜಗಿಯುತ್ತಿವೆ. ಅಲ್ಲೇ ಕಾದಿದ್ದರೆ ನಾನು ನಿನ್ನ ಹತ್ತಿರ ಬರುತ್ತೇನೆ" ಎಂದಳು.

ಅವಳು ತಿಳಿಸಿದ್ದೇ ತಡ, ನೆಟ್ಟಗೆ ಬೇಲಿ ಹಾರಿ ತೋಟದಲ್ಲಿ ನುಗ್ಗಿ ಮಂಗನ ಹಾಗೆ ಮರವನ್ನು ಹತ್ತಿ ಮನದನ್ನೆಗಾಗಿ ಕಾದು ಕುಳಿತನು.

ಯುವತಿಯು ಪತಿಯ ಜೊತೆ ತೋಟದಲ್ಲಿ ಅಡ್ಡಾಡಲು ಹೊರಟಳು. ಪಿಯರ್ಸ್ ಮರದ ಹತ್ತಿರ ನಿಂತು, "ರೀ ! ಹಣ್ಣುಗಳು ಎಷ್ಟೊಂದು ಜಗೀತಿವೆ ನೋಡಿ !" ಎಂದಳು. ಪತಿಯು "ಅಷ್ಟೇ ತಾನೆ, ಕೆಳಗೆ ಬಿದ್ದಿರುವುದನ್ನು ಆರಿಸಿಕೊಂಡರೆ ಆಯಿತು. ನಾನೇ ಬೇಕಾದರೆ ಆರಿಸಿಕೊಡುತ್ತೇನೆ." ಎಂದನು. ಯುವತಿಯು "ಉದರಿರೋ ಹಣ್ಣು ಏನು ಚನ್ನ ? ನಾನೇ ಮರದ ಮೇಲೆ ಹತ್ತಿ ಕಿತ್ತುಕೊಳ್ಳುತೇನೆ. ಕಿತ್ತ ಹಣ್ಣನ್ನು ತಿನ್ನಬೇಕಾದರೆ ನನಗೆ ತುಂಬಾ ಇಷ್ಟ !" ಎಂದು ಮರವನ್ನು ಏರಿದಳು. ಗಂಡನು, ಅವಳನ್ನು ಹಿಂಬಾಲಿಸಿ ಯಾರಾದರೂ ಮರವನ್ನು ಏರಿಯಾರೆಂದು ಅನುಮಾನದಿಂದ ಮರದ ಬುಡದಲ್ಲೇ ಹೋಗಿ ನಿಂತನು.

ಅವಳಿಗಾಗಿ ಕಾದಿದ್ದ ಯುವಕನು ಬಾಹುಗಳಿಂದ ಬಿಗಿದಪ್ಪಿದನು. ಸಂತೋಷದಿಂದ ಕಾಲ ಕಳೆದರು. ಅವರ ಪ್ರೇಮೋತ್ಸಾಹದಲ್ಲಿ ಅನೇಕಲ್ಲಿನಂತೆ ಪಿಯರ್ಸ್ ಹಣ್ಣುಗಳು ಪತಿಯ ತಲೆಯ ಮೇಲೆ ಒಂದೇ ಸಮನಾಗಿ ಉದುರಿದುವು.

ಗಂಡನು " ಲೇ ! ಮೇಲೇನು ಮಾಡುತ್ತಿದ್ದಿ ? ಗಿಡವನ್ನೇ ಮುರಿದು ಹಾಕುವ ಹಾಗೆ ತೋರುತ್ತಲ್ಲಾ " ಎಂದನು. ಹೆಂಗಸು ಏನೂ ಇಲ್ಲ ರೀ.... ಆ ಕೊಂಬೆಯಲ್ಲಿ ಎಷ್ಟು ಹಣ್ಣುಗಳಿವೆ ಗೊತ್ತಾ .... ರೆಂಬೆಯನ್ನು ಅಲ್ಲಾಡಿಡಿಸದೆ ಕೀಳುವ ಹಾಗೆಯೇ ಇಲ್ಲ." ಎಂದಳು.

ಸೃಷ್ಟಿಕರ್ತ ಪರಮಾತ್ಮನೂ ಮತ್ತು ಸಂತ ಪೀಟರ್ ಈ ದೃಶ್ಯವನ್ನು ನೋಡುತ್ತಿದ್ದರು. ಸಂತ ಪೀಟರ್ ದೇವರ ಕಡೆ ತಿರುಗಿ " ಭಗವಾನ್ ! ಆ ಹೆಂಗಸು ಗಂಡನಿಗೆ ಮೋಸಮಾಡುತ್ತಿರುವುದನ್ನು ನೋಡು. ಗಂಡನಿಗೆ ಅವಳು ದ್ರೋಹಮಾಡುವುದು ಕಾಣಿಸುವಂತೆ ದಯವಿಟ್ಟು ಕಣ್ಣುಗಳನ್ನು ಕರುಣಿಸು. " ಎಂದು ಬೇಡಿಕೊಂಡನು.

ಪರಮಾತ್ಮನು ನಕ್ಕು " ಸೈಂಟ್ ಪೀಟರ್ ! ನಿನಗೆ ಹೆಂಗಸಿನ ವಿಚಾರ ಗೊತ್ತಿರುವುದು ಇಷ್ಟೆ ! ಅವನಿಗೆ ಕಣ್ಣು ಬರುವಂತೆ ಮಾಡಿದರೆ ಅವಳು ತಾನು ಮಾಡುತ್ತಿರುವುದು ಸರಿಯೆಂದು ಬೇರೆ ಏನಾದರೂ ಸಬೂಬನ್ನು ಹೇಳುತ್ತಾಳೆ .... ಸ್ತ್ರೀಯ ಬುದ್ಧಿಯಂತರಾಳವನ್ನು ಕಂಡುಹಿಡಿಯುವುದು ಯಾರಿಂದಲೂ ಸಾಧ್ಯವಿಲ್ಲ. ಬೇಕಾದರೆ ನೀನೇ ನೋಡು " ಎಂದು ಪತಿಗೆ ಕಣ್ಣುಗಳು ಬರುವಂತೆ ಕರುಣಿಸಿದನು.

ಗಂಡನು ಕತ್ತನ್ನೆತ್ತಿ ಅವಳು ಮಾಡುತ್ತಿದ್ದುದನ್ನು ನೋಡಿ ಸಿಟ್ಟಿದ್ದು " ಕುಲಗೆಟ್ಟ ಹೆಂಗಸೆ ! ಆ ಮನುಷ್ಯನ ಜೊತೆ ನೀನೇನು ಮಾಡುತ್ತಿದ್ದಿ ! ಪತಿಗೆ ಮೋಸ ಮಾಡುತ್ತೀಯಾ ?.... ಕೆಳಗಿಳಿದು ಬಾ ನೋಡಿಕೋತೇನೆ " ಎಂದು ಘರ್ಜಿಸಿದನು.

ಹೆಂಗಸು ಶಾಂತಳಾಗಿ " ಚನ್ನಾಗಿ ಹೇಳ್ತೀರಾ ! ನೀವು ಕೋಪಮಾಡಿಕೊಳ್ಳುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ನಾನು ಹೀಗೆ ಮಾಡದಿದ್ದರೆ ನಿಮಗೆ ಕಣ್ಣು ಎಲ್ಲಿಂದ ಬರುತ್ತಿತ್ತು." ಎಂದು ನುಡಿದಳು.

ಮಡದಿಯು ಹೇಳಿದ ಮಾತು ಪತಿಗೆ ಸಮಂಜಸವಾಗಿ ತೋರಿತು. ತೃಪ್ತಿ, ಸಂತೋಷವೂ ಆಯಿತು.

ಹೆಂಗಸರು ತಮ್ಮ ಸತೀತ್ವವನ್ನು ಉಳಿಸಿಕೊಳ್ಳಲು ಏನು ಬೇಕಾದರೂ ಮಾಡಿಯಾರು ಎಂಬುದಕ್ಕೆ ಇದೇ ಸಾಕ್ಷಿ.



# ಮಾನನಷ್ಟ ಮೊಕದ್ದಮೆ

ಬರೆದವರು : **ಆನೊರೆ ಡಿ ಬಾಲ್ಜಾಕ್**

ಪ್ರೋರ್ಟಲಿನ್ನಿನ ನ್ಯಾಯಾಧೀಶನು ಬುದ್ಧಿಶಾಲಿ, ವಿದ್ವಾಂಸ. ಮೇಧಾವಿ. ಹಾಸ್ಯಗಾರ. ಅನೇಕ ವೇಳೆ ಅವನು ಕೊಡುತ್ತಿದ್ದ ತೀರ್ಪು ನಗುವನ್ನು ತರುವಂತಿತ್ತು. ರಸಋಷಿ. ಜೀವನದಲ್ಲಿ ಕಲೆಯನ್ನು ಕಂಡಿದ್ದನು. ಹಳ್ಳಿಯ ಹೆಂಗಸು ಮನೆ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದಳು. ನೋಡುವುದಕ್ಕೆ ಕಟ್ಟುಮಸ್ತಾಗಿ ಮೈ ಕೈಕಾಲು ತುಂಬಿಕೊಂಡು ಲಕ್ಷಣವಾಗಿದ್ದಳು ದಿನವೆಲ್ಲಾ ದೂರುಗಳನ್ನು ಕೇಳಿ, ತೀರ್ಪನ್ನು ಕೊಟ್ಟು ತಲೆ ಕೆಡಸಿಕೊಂಡಿದ್ದ ನ್ಯಾಯಾಧೀಶನಿಗೆ ಸಂಜೆ ಹಗುರವಾಗುವ ರೀತಿ ನಡೆದುಕೊಳ್ಳುತ್ತಿದ್ದಳು. ಜಾಕ್ವಲೀನ್ - (ಅದು ಅವಳ ಹೆಸರು) ಳನ್ನು ನ್ಯಾಯಾಧೀಶನು ಕೇವಲ ಮನೆಯ ಕೆಲಸಕ್ಕೆ ಮಾತ್ರವಲ್ಲ ಬೇರೊಂದಕ್ಕೂ ಮಡಗಿಕೊಂಡಿದ್ದಾನೆಂದು ಊರಿನ ಜನರಿಗೆಲ್ಲಾ ಗೊತ್ತಿದ್ದರೂ, ಅವನ ಮೇಲೆ ಅಭಿಮಾನ ಮತ್ತು ಗೌರವವಿದ್ದುದರಿಂದ ವಿಶಾಲ ಹೃದಯದಿಂದ ಕ್ಷಮಾರ್ಹವೆಂದು ಲಘುವಾಗಿ ತೆಗೆದುಕೊಂಡಿದ್ದರು.

ಒಂದು ದಿವಸ ತುಂಬು ಸ್ತನಗಳ ಹುಡುಗಿಯೊಬ್ಬಳು ನ್ಯಾಯಸ್ಥಾನವನ್ನು ಪ್ರವೇಶಿಸಿದಳು. ರಾತ್ರಿಯೆಲ್ಲಾ ಜಾಕ್ವೀನಳೊಡನೆ ಸಂತೋಷದಿಂದ ಕಾಲ ಕಳೆದಿದ್ದರೂ ವಯಸ್ಸಾಗಿದ್ದ ನ್ಯಾಯಾಧೀಶನು ಅವಳ ಸೌಂದರ್ಯವನ್ನು ಮನಸ್ಸಿನಲ್ಲೇ ಮೆಚ್ಚಿಕೊಂಡು,

“ ಏನು ಸಮಾಚಾರ?” ಎಂದು ಆಸನದಿಂದ ಎದ್ದು ಬಂದು ನಗುತ್ತಾ ಅವಳ ಮೃದುವಾದ ಕೈಗಳನ್ನು ಅದುಮಿ ಬಾಹುಗಳಿಂದ ಆಲಂಗಿಸಿದನು.

ನ್ಯಾಯಾಧೀಶನ ಬಾಹುಗಳಿಂದ ಬಿಡಿಸಿಕೊಂಡು ಯುವತಿಯು “ ನ್ಯಾಯಾಧೀಶರೇ ! ನನಗೆ ಅನ್ಯಾಯವಾಗಿದೆ. ದೂರು ಕೊಡಲು ಬಂದಿದ್ದೇನೆ ” ಎಂದಳು.

"ಯಾರು ಏನು ಮಾಡಿದರು ? ಇದೇ ಜೀವನದ ಸತ್ಯ ಮಗು ! ಹೀಗೆ ನಡೆದುಕೊಂಡರೇ ಸ್ವರ್ಗಸುಖವು ಸಿಗುತ್ತದೆ. ಅದಕ್ಕೆ ಬದಲು ದೂರು ಕೊಡಲು ಬಂದಿದ್ದೀಯಲ್ಲಾ ! ಯಾರಾದರೂ ನಿನಗೆ ಏನಾದರೂ ಮಾಡಿದ್ದರೆ ಅದಕ್ಕೆ ನೀನು ಕೃತಕೃತ್ಯಳಾಗಿರಬೇಕು. ನನಗೇನೋ ನೀನು ಬಂದು ದೂರು ಕೊಡುವುದು ಸರಿತೋರುವುದಿಲ್ಲ" ಎಂದನು ನ್ಯಾಯಾಧೀಶ.

"ಸ್ವಾಮಿ ! ನಾನು ಅಗಸರವಳು. ನನಗೆ ಅನ್ಯಾಯ ಮಾಡಿರುವರು ಸರ್ ಡಿ ಫೂ. ಅವರ ನಡವಳಿಕೆ ...."

"ಯಾರು ? ಅರಮನೆ ಪಾರುಪತ್ತೇಗಾರನಾದ ಸರ್ ಡಿ ಫೂನಾ ? ನಿಜವನ್ನು ಹೇಳುವುದಾದರೆ ನಿನಗೆ ನಿಯತ್ತಿಲ್ಲ. ಸರ್ – ಡಿ ಫೂ ಮೇಲೆ ದೂರು ಹೇಳುವುದನ್ನು ನೋಡಿದರೆ...."

"ಅವರು ಬಲಾತ್ಕಾರ ಮಾಡಿದರು."

"ಬಲಾತ್ಕಾರ ಮಾಡಿದರು ? ಅದದ್ದೇನು ಹೇಳು".

ಅಗಸಗಿತ್ತಿಯು ಆದುದೆಲ್ಲವನ್ನೂ ವಿವರಿಸಿದಳು. ಮೊದಲು ಒಗೆಯಲು ಕೆಲವು ಬಟ್ಟೆಗಳನ್ನು ಕೊಟ್ಟನಂತೆ. ಬಟ್ಟೆಗಳನ್ನು ಒಗೆದು ಮನೆಗೆ ತೆಗೆದುಕೊಂಡು ಹೋಗಿ ಕೊಟ್ಟು ಹಣವನ್ನು ಕೇಳಿದಾಗ ಅವನು ನಗುತ್ತಾ ಹಣವೇನು ಮಹಾ ! ಅದಕ್ಕೂ ಅತ್ಯಂತ ಅಮೂಲ್ಯವಾದ ತೃಪ್ತಿಕರವಾಗುವಂತಹುದನ್ನು ಕೊಡುತ್ತೇನೆ" ಎಂದನು. ಅವನು ಹೇಳಿದ್ದೆಲ್ಲಾ ಸುಳ್ಳು. ಅವನು ಕೊಟ್ಟದ್ದು ಚಿನ್ನವೂ ಅಲ್ಲ, ಬೆಳ್ಳಿಯೂ ಅಲ್ಲ. ಒಗದಿದ್ದಕ್ಕೆ ಬದಲಾಗಿ ಕೊಟ್ಟದ್ದಕ್ಕೆ ಅರ್ಧ ಗಂಟೆಯ ಕಾಲ ಹಿಡಿಸಿತಂತೆ.

ಅಗಸಗಿತ್ತಿಯು ರಸವತ್ತಾಗಿ ವಿವರಿಸುವುದನ್ನು ಬರೆಯಲು ಸಾಧ್ಯವಿಲ್ಲ. ಬರೆದ ಪಕ್ಷದಲ್ಲಿ ಓದುಗರ ಕೈಗೆ ಗ್ರಂಥವು ಸಿಗುವ ಸಂಭವವೂ ಇಲ್ಲ. ಶೃಂಗಾರ ಕಥೆಗಳನ್ನು ಕೇಳಬೇಕೆಂದರೆ ನ್ಯಾಯಾಧೀಶನಿಗೆ ಬಹಳ ಉತ್ಸಾಹ. ಕೌತುಕದಿಂದ ಕಿವಿಗೊಟ್ಟು ಕೇಳಿ ಕಡೆಗೆ 'ಕಥೆ ಕೇಳುವುದಕ್ಕೆ ಕಿವಿಗೆ ಹಿತವಾಗಿದೆ. ಅಷ್ಟು ಹುಮ್ಮಸ್ಸಿಂದ ಕೊಟ್ಟ ಪ್ರತಿಫಲವನ್ನು ಪಡೆಯುವಾಗ ನಿನಗೆ ಸಂತೋಷವಾಗಲಿಲ್ಲವೇ ?" ಎಂದನು.

" ಖಂಡಿತವಾಗಿ ಸಂತೋಷವಾಗಲಿಲ್ಲ. ಅದಕ್ಕೋಸ್ಕರವೇ ನಾನು ಒಂದು ಸಾವಿರ ಕ್ರೌನ್ ನಷ್ಟ ಕಟ್ಟಿಕೊಡಬೇಕೆಂದು ಕೇಳುತ್ತೇನೆ."

" ನಂಬಲಿಕ್ಕೇ ಸಾಧ್ಯವಿಲ್ಲ. ಸರ್ – ಡಿ ಫೂ ಇನ್ನೂ ಚಿಕ್ಕವನು. ಗಟ್ಟಿಮುಟ್ಟಾಗಿದ್ದಾನೆ. ಅವನು ನಿನಗೆ ಸಂತೋಷವನ್ನು ತರುವಂತೆ ವರ್ತಿಸಿಲ್ಲಾಂದರೆ ಆಶರ್ಯವಾಗುತ್ತದೆ. ಅವನು ಈ ಕಲೆಯಲ್ಲಿ ಮಹಾ ಚತುರ. ಕವಿ ಓವಿಡ್ (ಲಾಟಿನ್ ಕವಿ) ಕೂಡ ನಾಚಿಕೊಳ್ಳುವ ರೀತಿ ಪ್ರೇಮಕಲಾ ಪುಂಗವ. ಅನೇಕ ಯುವತಿಯರು ಅವನ ಸಂಗವನ್ನು ಬೆಳಸಿ ತೃಪ್ತಿ ಸಂತೋಷಗಳನ್ನು ಪಡೆಯಲು ಕಾತುರರಾಗಿದ್ದಾರೆ. ಹೀಗಿರುವಾಗ ನೀನು ಹೇಳುವುದರಲ್ಲಿ ಅರ್ಥವೇ ಇಲ್ಲ! ಸಂತೋಷವಾಗಲಿಲ್ಲವಂತೆ ಆಶ್ಚರ್ಯ! ನಂಬುವುದಕ್ಕೇ ಸಾಧ್ಯವಿಲ್ಲ!".

"ಮಹಾಶಯರೆ! ನೀವು ನಂಬದಿದ್ದಲ್ಲಿ, ನಿಮ್ಮ ಜಾಕ್ವಿಲಿನಳನ್ನು ಯಾವಾಗಲೂ ಈ ರೀತಿ ಉಪಹಾರ ಕೊಟ್ಟಾಗ ಸಂತೋಷವಾಗುತ್ತದೆಯೋ? ಎಂದು ಕೇಳಿ" ಎಂದಳು.

" ಕೇಳುತ್ತೇನೆ–ಕೇಳುತ್ತೇನೆ" ಎಂದು ಮೇಜಿನ ಮೇಲಿದ್ದ ಗಂಟೆಯನ್ನು ಬಾರಿಸಿದನು. ಜಾಕ್ವಿಲಿನ್ ಬಂದಳು. ನ್ಯಾಯಾಧೀಶನು ಆಗಸಗಿತ್ತಿಯು ಕೇಳಿದ ಪ್ರಶ್ನೆಯನ್ನು ಕೇಳಿದನು.

"ನನಗೆ ಇದು ಪ್ರಿಯವೇ ಆಗಿದ್ದರೂ ಸಂತೋಷವನ್ನು ತರದೆ ಇರುವಂತಹ ಸನ್ನಿವೇಶಗಳೂ ಅನುಭವವಾಗಿದೆ. ಚಿಕ್ಕವಳಾಗಿದ್ದಾಗ ಅನೇಕ ವೇಳೆ ದುಃಖವಾಗಿರುವುದೂ ಜ್ಞಾಪಕವಿದೆ. ಸಂತೋಷವಾಗದಿದ್ದಲ್ಲಿ ಇವಳಿಗೆ ಹಣವು ಖಂಡಿತವಾಗಿ ಸಲ್ಲಬೇಕಾಗಿತ್ತು.

" ನಿಜವಾಗಿ ಅವನು ಬಲಾತ್ಕಾರ ಪಡಿಸಿದ್ದೇ ಆದರೆ .... " ಎಂದಳು ಜಾಕ್ವಿಲಿನ್.

ನ್ಯಾಯಾಧೀಶನು "ಒಪ್ಪಿದೆ. ಈಗ ಬಲಾತ್ಕಾದ ವಿಷಯನ್ನು ಪರಿಶೀಲಿಸೋಣ. ಜಾಕ್ವಿಲೀನ್! ಸೂಜಿ-ದಾರವನ್ನು ತೆಗೆದುಕೊಂಡು ಬಾ" ಎಂದನು.

ಜಾಕ್ವಿಲೀಳು ಸೂಜಿ ಮತ್ತು ದಾರವನ್ನು ತಂದು ಕೊಡುತ್ತಲೂ, ನ್ಯಾಯಾಧೀಶನು ಸೂಜಿಯನ್ನು ತನ್ನ ಕೈಯಲ್ಲಿ ಹಿಡಿದು, ದಾರವನ್ನು ಅಗಸಗಿತ್ತಿಯ ಕೈಲಿಕೊಟ್ಟು "ದಯವಿಟ್ಟು, ನಿನ್ನ ಕೈಯಲ್ಲಿರುವ ದಾರದಿಂದ ಈ ಸೂಜಿಯನ್ನು ಪೋಣಿಸು." ಎಂದನು.

"ಯಾಕೆ ಒಡೆಯಾ?"

"ಕಾರಣವಿದೆ. ನಾನು ಹೇಳಿದ ಹಾಗೆ ಮಾಡು. ದಾರವನ್ನು ಈ ಸಣ್ಣ ಕಣ್ಣಲ್ಲಿ ತೂರಿಸು. ಸೂಜಿಯನ್ನು ನಿನಗೆ ಕಾಣಿಸುವ ಹಾಗೆ ಹಿಡಿದು ಕೊಳ್ಳುತ್ತೇನೆ."

"ಅಷ್ಟೇ ತಾನೆ" ಎಂಬಂತೆ ಕೈಯನ್ನು ಒದರಿ, ಸೂಜಿಯ ಕಣ್ಣಿನಲ್ಲಿ ದಾರವನ್ನು ಪೋಣಿಸಲು ಹತ್ತಿರ ಸರಿದು, ದಾರವನ್ನು ಕಣ್ಣಿನ ಹತ್ತಿರ ತೆಗೆದು ಕೊಂಡು ಹೋದಳು. ನ್ಯಾಯಾಧೀಶನು ಕೈಯನ್ನು ಸ್ವಲ್ಪ ಪಕ್ಕಕ್ಕೆ ಸರಿಸಿದನು. ಪುನಃ ಪ್ರಯತ್ನಿಸಿದಳು. ಪುನಃ ಅದೇ ರೀತಿಯಾಯಿತು. ಎಷ್ಟು ಪ್ರಯತ್ನಪಟ್ಟರೂ ಆಗಲಿಲ್ಲ. ನ್ಯಾಯಾಧೀಶನು ಆ ಕಡೆ ಈ ಕಡೆ ಸರಿಸುತ್ತಲೇ ಇದ್ದನು. ಅಗಸಗಿತ್ತಿಯು ಕೋಪದಿಂದ ಕೈಯನ್ನು "ಅಲ್ಲಾಡಿಸದೆ ಒಂದೇ ಕಡೆ ಇಟ್ಟು ಕೊಳ್ಳದಿದ್ದರೆ ಪೋಣಿಸಲು ಸಾಧ್ಯವಿಲ್ಲ" ಎಂದಳು.

ನ್ಯಾಯಧೀಶನು ನಕ್ಕು "ನಿಜ! ನೀನೂ ಇದೇ ರೀತಿಮಾಡಿರಬೇಕು. ಅದಕ್ಕೇನೆ ಸರ್ ಡಿಫೂಗೆ ಸಾಧ್ಯವಾಗದೆ ಇರಬೇಕು. ಬಲಾತ್ಕಾರವನ್ನು ಮಾಡಿದನಲ್ಲವೆ? ಛೀ! ಈ ವಿಚಾರದಲ್ಲಿ ತಾಳ್ಮೆಯಿರಬೇಕು ಎಂದು ಯಾರಾದರೂ ಹೇಳಿದಲ್ಲಿ ಅದನ್ನು ವಿಚಾರಮಾಡುವುದಕ್ಕೂ ನನಗೆ ತಾಳ್ಮೆಯಿಲ್ಲ" ಎಂದನು.

"ತಡಿಯಿರಿ! ನಿಮ್ಮ ತೀರ್ಪು ಸರಿಯಾಗಿಲ್ಲ! ಚನ್ನಾಗಿ ಹೊಲಿಯುವ ಅನುಭವಶಾಲಿಯಾದ ಚಿಪ್ಪಿಗನು ಕೂಡ ದಾರವು ಬಗ್ಗಿಕೊಂಡಿದ್ದರೆ, ಮೆತ್ತಗಿದ್ದರೆ ಪೋಣಿಸಲಿಕ್ಕೆ ಸಾಧ್ಯವಿಲ್ಲವೆಂದು ಹೇಳಿರುವುದನ್ನು ಕೇಳಿದ್ದೇನೆ" ಎಂದಳು.

"ಹೌದಾ? ಮತ್ತಿನ್ನೇನು ಕೇಳಿದ್ದಿ?"

"ದಾರಕ್ಕೆ ಮೇಣವನ್ನು ಹಚ್ಚಿ ನೆಟ್ಟಗೆ ಮಾಡಿದರೆ ಪೋಣಿಸಲು ಸಾಧ್ಯ. ದಯವಿಟ್ಟು ಇನ್ನೊಂದು ಸಲ ನನಗೆ ಅವಕಾಶಕೊಡಿ."

ಹುಡುಗಿಯ ಯುಕ್ತಿಯುತವಾದ ಉತ್ತರವನ್ನು ಕೇಳಿ ನ್ಯಾಯಾಧೀಶನಿಗೆ ನಗುಬಂದಿತು. ಮನಸ್ಸಿನಲ್ಲೇ ಶ್ಲಾಘಿಸಿ, ಸೂಜಿಯನ್ನು ಪುನಃ ಕೈಯಲ್ಲಿ ತೆಗೆದುಕೊಂಡು, 'ಸರಿ ಹಾಗೇ ಮಾಡು' ಎಂದನು. ಈ ಸಲ ಅಗಸಗಿತ್ತಿಯು ತಕ್ಷಣ ದಾರವನ್ನು ಪೋಣಿಸಲು ಹೋಗಲಿಲ್ಲ ಸೂಜಿಯನ್ನು ಉದ್ದೇಶಿಸಿ ಮೃದುವಾಗಿ " ಚಿನ್ನಾ .... ನೀನು ನೋಡಲು ತೆಳುವಾಗಿ, ಪುಟ್ಟದಾಗಿ ಎಷ್ಟು ಚನ್ನಾಗಿದ್ದೀಯಾ ಗೊತ್ತಾ ?.... ನಿನ್ನ ಮುದ್ದಾದ ಕಣ್ಣಗಳನ್ನು ನೋಡಿದರೆ ಮೈರೋಮಾಂಚನವಾಗುತ್ತದೆ. ನನ್ನ ಮನಸ್ಸನ್ನು ಸೂರೆಗೊಳ್ಳುತ್ತದೆ. ಬಾ .... ಹತ್ತಿರ ಸರಿ .... ಇಷ್ಟು ಕೇಳಿಕೊಂಡರೂ ಸುಮ್ಮನಿದ್ದೀಯಲ್ಲಾ! ನೋಡಿದಿಯಾ " ಎಂದಳು. ನ್ಯಾಯಾಧೀಶನಿಗೆ ಅವಳ ಮಾತುಗಳು ವಿನೋದವಾಗಿ ಕಂಡು ಬಂದವು. ಕೈಯನ್ನು ದಾರದ ಹತ್ತಿರ ತೆಗೆದುಕೊಂಡು ಹೋದಂತೆ ಅಗಸಗಿತ್ತಿಯು ಅವನ ಕೈಯನ್ನು ಹಿಡಿದು "ಸಿಕ್ಕಿ ಬಿದ್ದೆ ! ನೋಡಿದಿಯಾ ! ಚಿನ್ನಾ ! ಚಿನ್ನಾ !" ಎಂದು ನೆಟ್ಟಗೆ ಮಾಡಿದ್ದ ದಾರವನ್ನು ಸೂಜಿಯ ಕಣ್ಣಿನಲ್ಲಿ ಪೋಣಿಸಿಯೇ ಬಿಟ್ಟಳು.

ಅವತ್ತಿನ ದಿವಸದ ನ್ಯಾಯಾಧೀಶನ ದಿನಚರಿಯ ಪುಸ್ತಕದಲ್ಲಿ ಸರ್ ಡಿ ಫೂ ನೂರು ಕ್ರೌನ್ ನಷ್ಟವನ್ನು ಕಟ್ಟಿಕೊಡಬೇಕೆಂದು ದಾಖಲಾಗಿದ್ದಿತು. ಅವಳು ಕೇಳಿದಷ್ಟು ಸಾವಿರ ಕ್ರೌನ್ (ಅಧಿಕೃತವಾಗಿ ಈ ವಿಷಯವು ದಾಖಲೆಯಾಗಿಲ್ಲ) ಗಳಲ್ಲಿ ಉಳಿದ ಒಂಭೈನೂರು ಕ್ರೌನ್‌ಗಳನ್ನು ಒಂಬತ್ತು ಜನ ಶ್ರೀಮಂತರು ಬೇರೆ ಬೇರೆ ದಿನಗಳಲ್ಲಿ ನೂರು ರೂಪಾಯಿಗಳ ಕಂತಿನಲ್ಲಿ ಸಲ್ಲಿಸಿದರಂತೆ.



# ಅಳುವ ನಾಯಿ

ಬರೆದವರು : **ಪೆಟ್ರಸ್ ಅಲ್ಫಾನ್ಸಸ್**

ಶ್ರೀಮಂತನೊಬ್ಬನಿಗೆ ರೂಪವತಿಯೂ ಸುಗುಣೆಯೂ ಶೀಲವಂತಳೂ ಆದ ಮಡದಿಯೊಬ್ಬಳಿದ್ದಳು. ಶ್ರೀಮಂತನಿಗೊಂದು ಸಲ ರೋಮಿಯೋನಲ್ಲಿ ದೇವಾಲಯಗಳನ್ನು ನೋಡಬೇಕೆಂದೆನಿಸಿತು. ಹೆಂಡತಿಯ ಮೇಲೆ ಯಾವ ರೀತಿಯ ಅನುಮಾನವೂ ಇಲ್ಲದಿದ್ದುದರಿಂದ ಕಾವಲು ಹಾಕಲಿಲ್ಲ. ಅವಳು ಹೊರಗೆ ಹೋಗಿ ಸುತ್ತಾಡಿಕೊಂಡು ಬರಲು ನಿರ್ಬಂಧವನ್ನೂ ಪಡಿಸಲಿಲ್ಲ. ಏಕೆಂದರೆ ಅವನು ಹೆಂಡತಿಯ ಮನಸ್ಸನ್ನು ಚನ್ನಾಗಿ ಅರಿತುಕೊಂಡಿದ್ದನು. ಪತಿಯು ಪ್ರಯಾಣ ಬೆಳಸಿದ ಮೇಲೆ ಒಂದು ದಿವಸ ಅವಳು ಸುತ್ತಾಡಲು ಹೊರಗೆ ಹೊರಟಳು. ಇವಳ ರೂಪಲಾವಣ್ಯವನ್ನು ಕಂಡು ಯುವಕನೊಬ್ಬನು ಮನಸೋತನು. ಮನವನ್ನೊಲಿಸಿಕೊಳ್ಳಲು ಪುಷ್ಪಗಳನ್ನು ಕಳುಹಿಸಿದನು. ಚಿನ್ನ-ಬೆಳ್ಳಿಯ ಒಡವೆಗಳನ್ನು ಕಳುಹಿಸಿದನು. ಎಲ್ಲವೂ ಹಿಂತಿರುಗಿ ಬಂದವು. ಯುವತಿಯು ಯಾವ ವಿಧದಲ್ಲೂ ಚಂಚಲಳಾಗಲಿಲ್ಲ. ಯುವಕನು ಅವಳನ್ನೇ ನೆನೆಯುತ್ತಾ ಹಂಚಿ ಕಡ್ಡಿ ಹಾಗೆ ಆಗಿಬಿಟ್ಟನು.

ಒಂದು ದಿವಸ ಯುವಕನು ತನ್ನ ಪ್ರೇಯಸಿಯ ವಿಚಾರವನ್ನೇ ಯೋಚಿಸುತ್ತಾ ನಡೆಯುತ್ತಿದ್ದ ಹಾಗೆ ವೃದ್ಧ ಸ್ತ್ರೀಯೊಬ್ಬಳು ಎದುರಾದಳು. ಯುವಕನನ್ನು ನೋಡಿ "ನಿನ್ನ ಗುರುತೇ ಸಿಕ್ಕಲಿಲ್ಲ. ಇದೇನು ಹೀಗೆ ಆಗಿಬಿಟ್ಟೆದ್ದಿ. ಏನಾದರೂ ಆಗಿದ್ದಲ್ಲಿ ವೈದ್ಯನಿಗಾದರೂ ತೋರಿಸಬಾರದಾ? ಖಾಯಿಲೆ ಹೆಚ್ಚಾದರೆ ಒಳ್ಳೆಯದಲ್ಲಪ್ಪ! ಚಿಕ್ಕ ವಯಸ್ಸು. ನಿಮಗೆಲ್ಲಾ ಉದಾಸೀನ ಹೆಚ್ಚು. ಹೇಗಿದ್ದೋನು ಹೇಗಾಗಿಬಿಟ್ಟೆದ್ದಿ." ಎಂದು ತಲೆಯನ್ನಲ್ಲಾಡಿಸಿದಳು. ಮೊದಲಿನಿಂದಲೂ ವೃದ್ಧಳು ಪರಿಚಯವಿದ್ದುದರಿಂದ ಎಲ್ಲವನ್ನೂ ಹೇಳಿಕೊಂಡನು. ಅವಳು ತಲೆ ತೂಗಿ ಸ್ವಲ್ಪ ಹೊತ್ತು ಯೋಚಿಸಿ "ಇಷ್ಟೇ ತಾನೆ? ಮೊದಲೇ ನನಗೇಕೆ ತಿಳಿಸಲಿಲ್ಲ. ಅವಳು ಕಣ್ಣೆತ್ತಿ

ಕೂಡ ನೋಡಿಲ್ಲಾಂದೆಯಲ್ಲವೇ ? ಅವಳ ಅಹಂಕಾರವನ್ನು ಮುರೀತೀನಿ. ಅವಳೇ ನಿನಗೆ ಹೇಳಿಕಳುಹಿಸುವ ಹಾಗೆ ಮಾಡುತ್ತೇನೆ. ನೀನು ಏನೂ ಯೋಚನೆ ಮಾಡಬೇಡ " ಎಂದು ಆಶ್ವಾಸನೆಯನ್ನಿತ್ತಳು.

ಅಜ್ಜಮ್ಮನ ಮನೆಯಲ್ಲಿ ಒಂದು ಹೆಣ್ಣು ನಾಯಿಯಿತ್ತು. ಮನೆಗೆ ಬಂದ ವಳೇ ಅದನ್ನು ಮೂರು ದಿವಸಗಳು ಅನ್ನ ನೀರು ಹಾಕದೆ ಮಲಗುವ ಕೊಠಡಿಯಲ್ಲಿ ಹಾಕಿ ಬೀಗ ಹಾಕಿದಳು. ನಾಲ್ಕನೆಯ ದಿವಸ ತುಂಬಾ ಮೆಣಸು ಅರಿದು ಹಾಕಿದ ರೊಟ್ಟಿಯನ್ನು ಮುಂದಿಟ್ಟಳು. ಹಸಿವಿನಿಂದ ಬಳ ಲಿದ ನಾಯಿ ಗಬಗಬನೆ ತಿಂದುಬಿಟ್ಟಿತು. ಅನಂತರ ನಾಯಿಗೆ ಸರಪಳಿಯನ್ನು ಹಾಕಿ ಯುವತಿಯ ಮನೆಯ ಮುಂದೆ ಕರೆದುಕೊಂಡು ಹೊರಟಳು. ಯುವ ತಿಗೂ ಅಜ್ಜಮ್ಮನ ಪರಿಚಯವಿತ್ತು. ಅವಳಿಗೂ ಮನೆಯಲ್ಲಿ ಪತಿಯಿಲ್ಲದೆ ಬೇಸರವಾಗಿತ್ತು. ಮಾತನಾಡಲು ಯಾರೂ ಇರಲಿಲ್ಲ. ಆಕಸ್ಮಾತ್ತಾಗಿ ಅಜ್ಜ ಮ್ಮನು ಮನೆಯ ಮುಂದೆಯೇ ಹೋಗುತ್ತಿರುವುದನ್ನು ನೋಡಿ ಕೈ ಬೀಸಿ ಕರೆದಳು.

ಅಜ್ಜಮ್ಮನು ನಾಯಿಯೊಡನೆ ಮನೆಯನ್ನು ಪ್ರವೇಶಿಸಿದಳು. ನಾಯಿಯ ಕಣ್ಣುಗಳಲ್ಲಿ ಒಂದೇ ಸಮನಾಗಿ ನೀರು ಸುರಿಯುತ್ತಿರುವುದನ್ನು ನೋಡಿ ' ಅಜ್ಜೀ ! ನಾಯಿ ಅಳುವುದನ್ನು ನಾನು ನೋಡೇ ಇಲ್ಲ ಆಶ್ಚರ್ಯ! " ಎಂದಳು.

ಅಜ್ಜಿಯ ಕಣ್ಣುಗಳಲ್ಲಿ ಎರಡು ಬಿಂದು ಕಣ್ಣೀರು ಕಾಣಿಸಿಕೊಂಡಿತು. ತಲೆ ತೂಗಿ ಕಣ್ಣನ್ನು ಒರಸಿಕೊಂಡು ಏನು ಹೇಳಲಮ್ಮ ! ಹಣೆಯ ಬರಹ. ವಿಧಿ ಬರದಿದ್ದನ್ನು ಅನುಭವಿಸಲೇಬೇಕು. ತಪ್ಪಿಸಲು ಸಾಧ್ಯವೆ ? ನಾಯಿ ಏಕೆ ಅಳುತ್ತಿದೆ ಎಂದು ಕೇಳಬೇಡ. ಹೇಳಲು ಹೋದರೆ ಅರ್ಧದಲ್ಲಿ ನನಗೇ ಪ್ರಾಣ ಹೋದರೂ ಹೆಚ್ಚಲ್ಲ ಅವಕ್ಕೇ ನಾನು ಎಲ್ಲೂ ಹೊರಗೇ ಹೋಗುವುದಿಲ್ಲ. ಅದೊಂದು ಕಥೆ. ನಿನಗ್ಯಾಕೆ ಅದರ ಸುದ್ದಿ " ಎಂದು ನಿಟ್ಟುಸಿರುಬಿಟ್ಟಳು. ಯುವತಿಗೆ ಕಾರಣವನ್ನು ತಿಳಿದುಕೊಳ್ಳಲು ಕುತೂಹಲ ವಾಯಿತು.

ಮುದುಕಿಯನ್ನು ಒತ್ತಾಯಮಾಡಿ ಕೇಳಿದಳು.

ಮುದುಕಿಯು ಕಣ್ಣೀರು ಸುರಿಸುತ್ತಾ ಈ ಮುಂದೇದು ಒಂದು ಕಾಲದಲ್ಲಿ ಚೆನ್ನಾಗಿಯೇ ಇತ್ತು. ಇದು ಮತ್ತಾರೂ ಅಲ್ಲ ನನ್ನ ಮಗಳೇ. ಮುದ್ದಾಗಿ ರತಿಯ ಹಾಗೆ ಇದ್ದಳು. ಮದುವೆಯಾಗಬೇಕೆಂದು ಪ್ರೀತಿಸಲು ಬಂದ ಯುವಕರುಗಳನ್ನು ಕಣ್ಣೆತ್ತಿ ಕೂಡ ನೋಡುತ್ತಿರಲಿಲ್ಲ. ತಾನು ಮಹಾ ಪರಿಶುದ್ಧಳಾಗಿರಬೇಕೆಂದು ಹಟ. ನಾವು ಮೊದಲಿದ್ದ ಮನೆ ಹತ್ತಿರ ಒಬ್ಬ ಯುವಕನಿದ್ದ. ಮನ್ಮಥ ಇದ್ದ ಹಾಗಿದ್ದ. ವಿದ್ಯೆಯಲ್ಲಾಗಲೀ, ರೂಪದಲ್ಲಿಯಾಗಲೀ, ಗುಣದಲ್ಲಿ ಆಗಲೀ, ಹಣದಲ್ಲಿ ಆಗಲೀ ಯಾವದಕ್ಕೂ ಕಡಿಮೆ ಇರಲಿಲ್ಲ. ಇವಳನ್ನು ಕಂಡು ಮೋಹಿಸಿದನು. ಅವನು ಯಾವ ಯಾವ ವಿಧದಲ್ಲಿ ಕೇಳಿಕೊಂಡರೂ ಜಗ್ಗಲಿಲ್ಲ. ಅವಳದೇ ಹಟ. ಕಡೆಗೆ ಹುಡುಗನು ಅದೇ ಯೋಚನೆಯಲ್ಲಿ ಹಾಸಿಗೆ ಹಿಡಿದನು. ದೇವತೆಗಳಿಗೆ ಅವನ ಮೇಲೆ ಕರುಣೆ ಬಂದು ನನ್ನ ಮಗಳನ್ನು ನಾಯಿ ಆಗುವ ಹಾಗೆ ಶಾಪಕೊಟ್ಟರು. ಈಗ ಮುಂದೇದಕ್ಕೆ ಹೇಳಿಕೊಳ್ಳಲು ಬಾಯಿಲ್ಲ. ಕಣ್ಣೀರು ಸುರಿಸಿ ಪರಿತಾಪ ಪಡುತ್ತಿದೆ. ಏನಮ್ಮಾ ಮಾಡಲಿ? ಯಾರ ಹತ್ತಿರ ಹೇಳಿಕೊಳ್ಳಲಿ'' ಎಂದು ಬಿಕ್ಕಿ ಬಿಕ್ಕಿ ಅತ್ತಳು.

ಯುವತಿಯ ಮುಖವು ಬಿಳಚಿ ಕೊಂಡಿತು. "ಅಯ್ಯೋ! ದೇವರೇ! ಹೀಗೂ ಆಗುತ್ತದಾ....ಅಜ್ಜಿ! ನನಗೆ ಹೆದರಿಕೆಯಾಗುತ್ತಿದೆ. ಒಬ್ಬನು ನನ್ನನ್ನು ಪೀಡಿಸುತ್ತಿದ್ದಾನೆ ಅವನಿಗೆ ನನ್ನ ಮೇಲೆ ಪ್ರೀತಿಯುಂಟಾಗಿದೆ ಇತ್ತೀಚಿಗೆ ಬಹಳ ಇಳಿದು ಹೋದ ಹಾಗೆ ಕಾಣಿಸುತ್ತದೆ. ನಾನು ನಮ್ಮ ಪತಿಗೆ ದ್ರೋಹಮಾಡಬಾರದೆಂದು ನಿರಾಕರಿಸುತ್ತಿದ್ದೇನೆ" ಎಂದಳು.

"ನೀನು ಮಾಡುತ್ತಿರುವುದು ತುಂಬಾ ತಪ್ಪಮ್ಮಾ. ಈ ರೀತಿ ನಿರಾಕರಿಸುವುದು ಸರಿಯಲ್ಲ ಯಾವ ಯಾವ ಹೊತ್ತಿನಲ್ಲಿ ಏನೇನು ಆಗುತ್ತದೋ ತಿಳಿದವರಾರು? ನಿನಗೂ ಹೀಗೆ ನಾಯಾಗಿ ಅಳುವುದು ಇಷ್ಟವಿಲ್ಲ ತಾನೆ'' ಎಂದಳು.

"ಹಾಗಾದರೆ ಅಜ್ಜಿ ದಯವಿಟ್ಟು ಆ ಯುವಕನು ಸಿಕ್ಕರೆ, ಅವನಿಗೆ ಇನ್ನೂ ನನ್ನ ಮೇಲೆ ಇಷ್ಟವಿದ್ದಲ್ಲಿ ಮನೆಗೆ ಬರಹೇಳುತ್ತೀಯಾ? ಇಷ್ಟು ಮಾಡಿದರೆ ಬಹಳ ಉಪಕಾರಮಾಡಿದಂತೆ ನಿನ್ನ ಮಗಳಿಗೆ ಆದದ್ದನ್ನು ಕೇಳಿ ನನಗೆ ಏಕೋ ಬಹಳ ಹೆದರಿಕೆಯಾಗುತ್ತಿದೆ."

# ಪ್ರತೀಕಾರ

ಬರೆದವರು : **ಜೂಲಿ ಬರ್ಬೆ ಡಿ'ಆರೆವೆಲಿ**

ಎಂದಿಗಿಂತ ಮುಂಚಿತವಾಗಿಯೇ ಕ್ಲಬ್ಬಿನಿಂದ ಹೊರಬಿದ್ದೆ. ಆಫೀಸರು ಗಳು (ಸೈನ್ಯಾಧಿಕಾರಿಗಳು) ಹೆಚ್ಚು ಹಣವಿಟ್ಟು ಇಸ್ಪೀಟ್ ಆಡುತ್ತಿದ್ದರು. ಅಸಾಧ್ಯ ಸೆಕೆ. ಸೂರ್ಯನು ಇನ್ನೂ ಅಸ್ತನಾಗಿರಲಿಲ್ಲವೆಂದು ತೋರುತ್ತದೆ. ಪುಡಿಕಾ ಹೆಚ್ಚು ಬಟ್ಟೆಗಳನ್ನು ತೊಟ್ಟಿರಲಿಲ್ಲ. ಅವಳ ಅಂದವಾದ ಬಾಹು ಗಳು ಬಿಸಿಗಾಳಿಯಲ್ಲಿ ಬೆಂದು ಹೋಗುತ್ತಿದ್ದಂತೆ ತೋರಿತು. ಅವಳ ಆಕರ್ಷಕವಾದ ತೋಳುಗಳನ್ನು ನಾನು ಎಷ್ಟೋ ಸಲ ಸ್ಟ್ರಾಬೆರಿ (ಮೇಲ್ಭಾಗ ದಲ್ಲಿ ಹಳದಿಯ ಬೀಜಗಳು ತುಂಬಿರುವ ಕೆಂದು ಬಣ್ಣದ ಒಂದು ಬಗೆಯ ತಿರಳುಹಣ್ಣು, ನೆಲ ಮುಳ್ಳು ಹಣ್ಣು) ಹಣ್ಣನ್ನು ಕಚ್ಚುವಂತೆ ಕಚ್ಚಿದ್ದೇನೆ. ಅವಳ ಮಾಟವಾದ ಕತ್ತು ಮತ್ತು ಭುಜಗಳನ್ನು ಬಾಗಿ ಚುಂಬಿಸುವಂತೆ ತಗಲುತ್ತಿದ್ದ ಕೇಶರಾಶಿಯು ನನ್ನ ಕಣ್ಣುಗಳನ್ನು ಸೂರೆಗೈದಿತು. ಮೇಜಿನ ಮೇಲೆ ಮಲಗಿದಂತೆ ಅರ್ಧಬಾಗಿ ಪತ್ರವನ್ನು ಬರೆಯುತ್ತಿದ್ದಳು. ಅವಳು ಕುಳಿತ ಭಂಗಿ, ಅಂಗಾಂಗ ಸೌಷ್ಟವ ಅತ್ಯಂತ ಆಕರ್ಶಿಸೀಯವಾಗಿತ್ತು. ಬಹುಶಃ ಇದೂ ಪತಿಯನ್ನು ಮೋಸಗೊಳಿಸಲು ಹೊಸ ಯುವನೋ ಪ್ರಿಯ ತಮನಿಗೆ ಇಬ್ಬರೂ ಗುಪ್ತವಾಗಿ ಸಂಧಿಸಲು ಸೂಚಿಸುವ ಪತ್ರವೇ ಆಗಿರ ಬೇಕು. ಪತಿ ಮೇಜರ್ ಯಾದೋವ್‌ಗೆ ಇವಳ ಚಲನವಲನಗಳೆಲ್ಲಾ ತಿಳಿ ದಿದ್ದರೂ, ಒಪ್ಪಿಗೆಯನ್ನು ಸೂಚಿಸುವ ರೀತಿ ಮೌನವಾಗಿಯೇ ಇರುತ್ತಿದ್ದನು. ನಾನು ಪ್ರವೇಶಿಸುತ್ತಿದ್ದಂತೆ ಕಾಗದವನ್ನು ಲಕ್ಕೋಟೆಯಲ್ಲಿ ಮಡಿಸಿಟ್ಟು, ಉರಿಯುತ್ತಿದ್ದ ಮೊಂಬತ್ತಿಗೆ ಅರಗನ್ನು ಹಿಡಿದಿದ್ದಳು. ಉರಿಯುವ ಅರಗಿನಿಂದ ಬಿಳಿ, ನೀಲವರ್ಣದ ನಾಲಿಗೆಗಳೆದ್ದವು. ನನ್ನ ಕಡೆ ತಿರುಗದೆ "ಮೇಜರ್ ಎಲ್ಲಿ?" ಎಂದು ಎಂದಿನಂತೆ ಅರ್ಥಗರ್ಭಿತವಾಗಿ ಕೇಳಿದಳು. ಪರ

ಪುರುಷರ ಎದುರಿನಲ್ಲಿ ಯಾವಾಗಲೂ ಅವಳ ಭಾವ ಭಂಗಿ ಮಾತು ಒಂದೇ ರೀತಿ.

"ಸ್ನೇಹಿತರೊಂದಿಗೆ ಹೆಚ್ಚು ಹಣವಿಟ್ಟು ಜೂಜಾಡುತ್ತಿದ್ದಾನೆ."

ಅವಳ ಕಪೋಲಗಳು ಕೆಂಪೇರಿದವು "ಹಾಗಾದರೆ ಅವನ ಮನಸ್ಸು ಕೆಟ್ಟಿರಲು ಬೇರೇನೋ ಕಾರಣವಿರಬೇಕು" ಎಂದಳು.

ಪುಡಿಕಾ ನನ್ನ ಮನಸ್ಸಿನ ಓಟವನ್ನು ಅರಿತು "ಸಧ್ಯ! ನನ್ನ ಮೇಲಿದ್ದ ವ್ಯಾಮೋಹವು ತಣ್ಣಗಾಯಿತು!" ಎಂದು ಕರಗಿದ ಅರಗನ್ನು ಲಕ್ಕೋಟಿಗೆ ಒತ್ತಿ "ಸ್ವಲ್ಪ ಹೊತ್ತಿಗೆ ಮುಂಚೆ ಅರಗು ಉರಿಯುತ್ತಿತ್ತು. ಈಗ ತಣ್ಣಗಾಗಿದೆ." ಎಂದು ಲಕ್ಕೋಟೆಯನ್ನು ತಿರುಗಿಸಿ ವಿಳಾಸವನ್ನು ಬರೆಯಲುಪಕ್ರಮಿಸಿದಳು.

ನಾನು ಅಸೂಯೆಪಡಲಿಲ್ಲ ಯಾರಿಗೆ ಬರಿಯುತ್ತಿದ್ದಳೋ ನೋಡೋಣವೆಂದು ಕುತೂಹಲ ಅಷ್ಟೆ. ಬಗ್ಗಿ ನೋಡಿದೆ. ಆದರೆ ನೋಡಲು ಹೋದಾಗ ನನ್ನ ಕಣ್ಣು ಎಷ್ಟೋ ಬಾರಿ ಚುಂಬನದ ಮಳೆಗರಿದ ಸ್ತನದ್ವಯಿಗಳ ಮಧ್ಯದ ಕಣಿವೆಯಲ್ಲಿ ನೆಟ್ಟಿತು. ನಾನು ದೃಷ್ಟಿಸಿ ನೋಡಿರುವುದನ್ನು ಅರಿತು ಬರಿಯುವುದನ್ನು ನಿಲ್ಲಿಸಿ ತಲೆಯನ್ನೆತ್ತಿ ನನ್ನ ಮುಖವನ್ನು ನೋಡಿದಳು. ಅವಳ ಅರೆತೆರೆದ ಕೆಂಪು ಚಂದುಟಿಗಳಿಗೆ ನನ್ನ ಆಸೆ ಎಲ್ಲವನ್ನೂ ಒಮ್ಮೆಲೇ ಹೊರ ಸೂಸುವಂತೆ ಒತ್ತಿ ಮುತ್ತಿಟ್ಟೆ.

ಅವಳದು ಹಾವಿನ ಕಿವಿ. ತಕ್ಷಣ ಎದ್ದು "ಮೇಜರ್ ಬರುತ್ತಿದ್ದಾನೆ ಎಲ್ಲೋ ತುಂಬಾ ಹಣವನ್ನೇ ಕಳೆದುಕೊಂಡಿರಬೇಕು. ಮನೆಗೆ ಬಂದು ರಾದ್ಧಾಂತಮಾಡುತ್ತಾನೆ. ಬೇಗ ಅವಿತಿಕೋ" ಎಂದು ಬಟ್ಟೆ ಇಟ್ಟಿದ್ದ ಬೀರುವಿನ ಬಾಗಿಲು ತೆರೆದು, ನಾನು ಒಳಗೆ ಹೋಗುತ್ತಲೂ ಮುಚ್ಚಿದಳು.

ಅವಳು ಉಟ್ಟ ಬಟ್ಟೆಯು ಮುಖಕ್ಕೆ ಬಡಿದಾಗ ಅವಳೊಡನೆ ಸುಖವಾಗಿ ಕಳೆಯಬಹುದಾಗಿದ್ದ ಕಾಲವು ಮಿಂಚಿಹೋಯಿತಲ್ಲಾ ಎಂದು ಮತ್ತಷ್ಟು ಕೋಪವೇ ಬಂದಿತು. ಆದರೆ ಅವಳು ಹೇಳಿದ್ದು ನಿಜ, ಮೇಜರು ಒಳಗೆ ಬಂದನು. ಅವನಿಗೆ ಹೆಂಡತಿಯ ಮೇಲೆ ಬಹಳ ಅನುಮಾನ. ದುರಾದೃಷ್ಟಕ್ಕೆ ಹೆಸರು ಮತ್ತು ವಿಳಾಸವನ್ನು ಬರಿಯುವುದಕ್ಕೆ ಹೋದಾಗ ಅವಳ

ಅಧರಗಳನ್ನು ಚುಂಬಿಸಿದ್ದರಿಂದ ಲಕ್ಕೋಟೆಯು ಮೇಜಿನ ಮೇಲೆಯೇ ಇತ್ತು.

"ಆ ಕಾಗದ ಯಾರಿಗೆ ?" ಎಂದು ಘರ್ಜಿಸಿದನು ಮೇಜರ್.

"ಇಟಲಿಗೆ ಪತ್ರ ಬರೆಯುತ್ತಿದ್ದೇನೆ" ಎಂದು ಉತ್ತರವಿತ್ತಳು ಪುಡಿಕಾ.

ಅವಳು ಯಾವ ರೀತಿಯ ಉದ್ವೇಗವನ್ನೂ ಸೂಚಿಸದೆ ಶಾಂತ ಚಿತ್ತದಿಂದ ಉತ್ತರ ಹೇಳಿದ್ದನ್ನು ಕಂಡು ಮೇಜರ್ ಮರುಳಾಗಲಿಲ್ಲ.

"ಶುದ್ಧ ಸುಳ್ಳು....ನಿನ್ನ ಪ್ರೈಯೆಲ್ಲಾ ಬರಿಯ ಸುಳ್ಳು" ಎಂದು ಗುಡುಗಿದನು ಮೇಜರ್. ಗಂಡ-ಹೆಂಡಿರು ಪರಸ್ಪರ ಯಾವ ರೀತಿ ಜೀವನವನ್ನು ಕಳೆಯುತ್ತಿರುವರೆಂಬುದು ಆಗ ನನಗೆ ಅನುಭವವಾಯಿತು. ಇಬ್ಬರೂ ಕುಪಿತರಾಗಿದ್ದರು. ಮೇಜರ್ ಕಾಗದವನ್ನು ತೆಗೆದು ಓದಿನೋಡಲು ಒತ್ತಾಯ ಪಡಿಸಿರಬೇಕು. ಹೆಂಡತಿಯು ಸಾಧ್ಯವಿಲ್ಲವೆಂದು ಪತ್ರವನ್ನು ಕೈಗೆ ತೆಗೆದು ಕೊಂಡಳು. ಮೇಜರ್ ಮಹಾಬಲಶಾಲಿ. ಅವಳ ಕೈಲಿದ್ದ ಪತ್ರವನ್ನು ಕಿತ್ತುಕೊಂಡು ಪತ್ರವನ್ನು ಓದಿಕೊಂಡನು. ಮೇಲೆ ವಿಳಾಸ ಬರೆದಿರಲಿಲ್ಲ. ಮೇಜರಿಗೆ ಅಸಾಧ್ಯವಾಗಿ ಕೋಪ ಬಂದಿರಬೇಕು. ಕುತೂಹಲವೂ ಆಗಿರಬೇಕು.

"ನನ್ನ ಕೈ ಮುರಿಯುತ್ತಿದ್ದಿ....ನೀನು ಮನುಷ್ಯನಲ್ಲ ಮೃಗ ...ಮೃಗ" ಎಂದಳು ಪುಡಿಕಾ.

ಕಾಗದವು ಕೇವಲ ಪ್ರಿಯತಮನಿಗೆ ಗೊತ್ತಾದ ಸ್ಥಳದಲ್ಲಿ ಬಂದು ಕಾಣಲು ಕರೆಯಿತ್ತ ಓಲೆ. ಮೇಜರ್ ಅನಕ್ಷರಸ್ಥ ಕೋಚ್ ವ್ಯಾನಿನಂತೆ ಹೊಲಸು ಭಾಷೆಯಲ್ಲಿ ಬೈದನು. ಅವಳು ಅವನಿಗೆ ಏನೂ ಕಡಿಮೆಯಾಗಿರಲಿಲ್ಲ. ಅವನನ್ನು ವಿಚಾರಿಸುವ ರೀತಿ ಬೈದಳು. ಅವಳು ಕೊಡುತ್ತಿದ್ದ ಉತ್ತರ ಒಂದೊಂದೂ ಹುಣ್ಣಿನ ಮೇಲೆ ಮೆಣಸಿನಕಾಯಿ ಪುಡಿ ಸವರಿದಂತೆ ಇತ್ತು. ಅವಳು 'ಇಲ್ಲ', 'ಖಂಡಿತ ಇಲ್ಲ', 'ಖಂಡಿತವಾಗಿಲ್ಲ' ಎಂದು ಪದೇ ಪದೇ ಹೇಳುತ್ತಿದ್ದಾಗ ಅವನ ಕಿವಿಗೆ ಕಾದ ಎರಕ ಹುಯ್ದಂತೆ ಬೀಳುತ್ತಿತ್ತು. ಹಿಂದೆ ಪ್ರೀತಿಸಲಿಲ್ಲ, ಇಂದು ಪ್ರೀತಿಸುತ್ತಿಲ್ಲ, ಮುಂದೆಂದೂ ಪ್ರೀತಿಸುವುದಿಲ್ಲ

ಮೆದು ಅವನ ಹೃದಯದ ಮೇಲೆ ಅನೂನುಶೀಯನಾಗಿ ಉನ್ಮತ್ತಳಾಗಿ ಹಾಡುತ್ತಾ ಕುಣಿಯುವಂತ್ತಿತ್ತು ಅವಳ ಮಾತಿನ ಸರಣಿ

ಅವನು “ ಹಾಗಾದರೆ ನಮ್ಮ ಮಗು ? ”

“ ನಮ್ಮ ಮಗು ! ಅದು ನಿಮ್ಮ ಮಗುವೆ ?” ಎಂದು ಅವಹೇಳನ ಮಾಡುವಂತೆ ವ್ಯಂಗವಾಗಿ ನಗುತ್ತಾ ಕೇಳಿದಳು.

“ ಹಾಗಾದರೆ ಅದು ಯಾರ ಮಗು. ನಾಯಿ ?”

ಅವಳು ನಗುತ್ತಲೇ “ ನಿನಗೆ ಊಹಿಸಲು ಸಾಧ್ಯವೇ ಇಲ್ಲ ” ಎಂದು ನೂರು ಬಾರಿಯಾದರೂ ಹೇಳಿರಬೇಕು. ಕಡೆಗೆ ರಾಗವಾಗಿ ಹಾಡುವುದಕ್ಕೆ ಪ್ರಾರಂಭಿಸಿದಳು. ಅವಳ ದೃಷ್ಟಿಯಲ್ಲಿ ಅವನನ್ನು ಯಾವ ರೀತಿ ಕಾಣುತ್ತಿರುವುದಾಗಿ ಸೂಚಿಸಲು ತನ್ನ ಪ್ರಿಯತಮರ ಪಟ್ಟಿಯನ್ನೇ ಹೇಳಿದಳು. ಆ ಪಟ್ಟಿಯಲ್ಲಿ ಅವನ ಸಹೋದ್ಯೋಗಿಗಳ ಹೆಸರುಗಳೆಲ್ಲಾ ಇದ್ದುವು.

“ ಇವರ ಜೊತೆಯೆಲ್ಲಾ ಸಹವಾಸ ಮಾಡಿದ್ದೇನೆ. ನಿನ್ನ ಮಗೂಂತ ಪ್ರೀತಿಸುತ್ತೀಯಲ್ಲಾ ಅದು ನಿನ್ನದೇಂತ ತಿಳಿದುಕೊಂಡಿದ್ದೀಯಾ ? ಮಂಕ ! ಶುದ್ಧ ಮಂಕ ನೀನು ! ಅದು ನಾನು ಮನಸಾರ ಪ್ರೀತಿಸುವನ ಮಗು. ಅವನಾರು ಊಹಿಸಬಲ್ಲೆಯಾ ?.... ನಿನಗೆ ಊಹಿಸಲು ಸಾಧ್ಯವೇ ಇಲ್ಲ !” ಎಂದಳು ಪುಡಿಕಾ.

ಅವಳು ಹೇಳುತ್ತಿದ್ದುದು ಬರಿಯ ಸುಳ್ಳು. ಈ ರೀತಿ ಹೇಳಿದಲ್ಲಿ ಮೋಜರಿಗೆ ಚೂರಿಯಿಂದ ಇರಿದಂತಾಗುತ್ತದೆಂದು ಅವಳಿಗೆ ಚೆನ್ನಾಗಿ ಗೊತ್ತಿತ್ತು. ಅಷ್ಟಕ್ಕೇ ನಿಲ್ಲಿಸಲಿಲ್ಲ. ನಿಧಾನವಾಗಿ “ ನಿನಗೆ ಊಹಿಸಲಿಕ್ಕೆ ಆಗಲಿಲ್ಲವಲ್ಲನೆ ? ... ಹಾಗಾದರೆ ತೆಪ್ಪಗಿರು. ಯಾರು ಗೊತ್ತಾ ? ಕ್ಯಾಪ್ಟನ್ ಮಿಸ್ಚಿಲ್ ಗ್ರಾಂಡ್ ?” ಎಂದಳು

ಮುಕ್ಕಾಲು ಪಾಲು ಅವಳು ಸುಳ್ಳು ಹೇಳುತ್ತಿರಬೇಕು. ನನಗೇ ಅನುಮಾನ ಬಂದಿತು. ಅವಳು ನನ್ನ ಹೆಸರನ್ನು ಹೇಳಿದಾಗ ಗುಂಡು ಬೀರುವಿನ ಬಾಗಿಲಲ್ಲಿ ರಂಧ್ರವನ್ನು ಕೊರೆದು ನನ್ನ ಗುಂಡಿಗೆಗೆ ಹೊಡೆದಂತಾಯಿತು.

ಕತ್ತು ಹಿಸಕಿದ ಮೇಲೆ ಸ್ವಲ್ಪ ಹೊತ್ತು ವಿಚಿತ್ರವಾದ ಶಾಂತ ವಾತಾವರಣವು ಆವರಿಸುವಂತೆ ಮೌನ. ಯಾರೋ ಕೆಟ್ಟ ಧ್ವನಿಯಲ್ಲಿ ಚೀರಿದಂತೆ ಶಬ್ದ. ಈ ರೀತಿ ಚೀರಿದುದನ್ನು ಕೇಳಿದ್ದೇ ಇಲ್ಲ. ಯುದ್ಧ ಭೂಮಿಯಲ್ಲಿ ಘಾಯಗೊಂಡವರ ಆರ್ತನಾದವನ್ನು ಕೇಳಿದ್ದೇನೆ. ಆದರೆ ಈ ಆರ್ತನಾದವು ಎದೆ ನಡುಗಿಸಿತು. ಬಾಗಿಲನ್ನು ತಳ್ಳಿಕೊಂಡು ಹೊರಬಂದೆ. ಎದುರಿಗೆ ಕಂಡ ದೃಶ್ಯವನ್ನು ಎಂದೆಂದಿಗೂ ಮರೆಯುವಂತೆಯೇ ಇಲ್ಲ. ಪುಡಿಕಾ ಸ್ವಲ್ಪ ಹೊತ್ತಿಗೆ ಮುಂಚೆ ಕಾಗದವನ್ನು ಬರೆಯುತ್ತಿದ್ದ ಕುಳ್ಳ ಮೇಜಿನ ಮೇಲೆ ಅಂಗತ್ತಲಾಗಿ ಮಲಗಿದ್ದಳು. ಮೇಜರ್ ಬಾಗಿ ಅವಳನ್ನು ಬಲವಾಗಿ ವಜ್ರ ಮುಷ್ಟಿಯಿಂದ ಒತ್ತಿ ಹಿಡಿದುಕೊಂಡಿದ್ದನು. ಅವಳ ಬಟ್ಟೆಗಳೆಲ್ಲಾ ಅಸ್ತವ್ಯಸ್ತವಾಗಿ ಪಕ್ಕಕ್ಕೆ ಸರಿದಿದ್ದವು. ಅವಳ ಅಂದವಾದ ನಗ್ನ ದೇಹವು ಸರ್ಪದಂತೆ ಚಟಪಟ ಒದ್ದಾಡುತ್ತಿತ್ತು. ಮೇಜಿನ ಮೇಲೆ ಕ್ಯಾಂಡಲ್ ಉರಿಯುತ್ತಿತ್ತು. ಪಕ್ಕದಲ್ಲಿ ಅರಗೂ ಇತ್ತು. ಮತ್ತೊಂದು ಕೈಲಿ ಅವನೇನು ಮಾಡುತ್ತಿದ್ದ ? ಇವುಗಳನ್ನು ನೋಡೇ ಅವನಿಗೆ ಅಮಾನುಷೀಯ ಕ್ರೂರ ಕಲ್ಪನೆಯು ಮನಸ್ಸಿಗೆ ಹೊಳೆದಿರಬೇಕು. “ ನೀನು ಪಾಪ ಮಾಡಿದ ಸ್ಥಳಕ್ಕೆ ಪ್ರತೀಕಾರ ಇದೇ ” ಎಂದನು.

ನಾನು ಕತ್ತಿಯನ್ನು ಹಿಡಿದು ಮುನ್ನುಗ್ಗಿ ಬಲವಾಗಿ ಕತ್ತಿಯ ಹಿಡಿಯ ವರೆಗೂ ಇರುವ ಅಲಗು, ದೇಹವಲ್ಲಿ ಹೋಗುವಂತೆ ಇರಿದೆ.



# ಚೀಲದ ತುಂಬಾ ಸತ್ಯ

## " ಕಾಂಟೆ ಪಾಪುಲ್ಯಾರಿ ಬಸೆ ಬ್ರಿಟನೆ " ಯಿಂದ

ಒಂದಾನೊಂದು ಕಾಲದಲ್ಲಿ ಫ್ರಾನ್ಸಿನಲ್ಲಿ ಒಬ್ಬ ರಾಜನನಿದ್ದನು. ಅವ ಳಿಗೆ ಒಬ್ಬಳೇ ಮಗಳು. ಅನುಪಮ ಸುಂದರಿ. ಅಸಾಧ್ಯ ಬುದ್ಧಿ. ಎಂತಹ ಜಟಿಲವಾದ ಒಗಟುಗಳನ್ನಾದರೂ ನಿಮಿಷಾರ್ಧದಲ್ಲಿ ಬಿಡಿಸಿ ಹೇಳುತ್ತಿದ್ದಳು. ಅಸಾಧಾರಣ ಪ್ರತಿಭೆ ಅವಳಿಗೆ. ವಯಸ್ಸಿಗೆ ಬಂದ ಮೇಲೆ ತನಗೆ ಬಿಡಿಸ ಲಾಗದಂತಹ ಒಗಟನ್ನು ಹೇಳಿದವನನ್ನೇ ಕೈಹಿಡಿಯುವುದಾಗಿ ಹೇಳಿದಳು. ತನ್ನನ್ನು ವರಿಸಲು ಬಂದವನು ಹೇಳಿದ ಒಗಟನ್ನು ಅವಳು ಬಿಡಿಸಿದಲ್ಲಿ ಯುವಕನು ಮರಣದಂಡನೆಗೆ ಗುರಿಯಾಗುತ್ತಿದ್ದನು.

ಸೋತಲ್ಲಿ ಸಾವು ಸ್ವತಃಸಿದ್ಧವಾಗಿದ್ದರೂ ರಾಜಕುಮಾರಿಯ ರೂಪ ಲಾವಣ್ಯಕ್ಕೆ ಮರುಳಾಗಿ ದೂರ ದೂರ ದೇಶಗಳಿಂದಲೂ, ಮತ್ತು ಸಮೀಪ ಪ್ರದೇಶಗಳಲ್ಲಿದ್ದವರೂ ಬಂದರು. ಅವರು ಹೇಳಿದ ಒಗಟುಗಳನ್ನು ಕ್ಷಣಾರ್ಧದಲ್ಲಿ ರಾಜಕುಮಾರಿಯು ಬಿಡಿಸಿ ಹೇಳುತ್ತಿದ್ದಳು. ಸೋತವರು ಮರಣದಂಡನೆಗೆ ಈಡಾಗುತ್ತಿದ್ದುದರಿಂದ ಅರಮನೆಯ ಮುಂದಲ ಅಂಗಣವು ರುದ್ರಭೂಮಿ ಯಂತೆ ಭೀಕರವಾಗಿ ಕಾಣಬರುತ್ತಿತ್ತು.

ಅಲ್ಲಿಗೆ ಅನತಿ ದೂರದಲ್ಲಿ ಕೌಂಟೆಸ್ ಕೆಬ್ರಿನಿಕಳ ಏಕಮಾತ್ರ ಪುತ್ರನು ವಾಸಿಸುತ್ತಿದ್ದನು. ಒಂದು ದಿವಸ ಬೇಟೆಯಾಡಿ ಹಿಂತಿರುಗುತ್ತಿದ್ದಾಗ ದಾರಿ ಯಲ್ಲಿ ಕುಳ್ಳಗೆ ದಪ್ಪದಪ್ಪಸಾಗಿದ್ದ ಒಬ್ಬ ಸೈನಿಕನು ರಸ್ತೆಯಲ್ಲಿ ನಡೆದು ಹೋಗುತ್ತಿರುವುದನ್ನು ಕಂಡನು. ಅವನು ನಡೆದು ಹೋಗುತ್ತಿದ್ದ ರೀತಿ ಯನ್ನು ನೋಡಿ ಆಕರ್ಷಿತನಾಗಿ ಮಾತನಾಡಿಸಿದನು. ಇಬ್ಬರೂ ಮಾತನಾ ಡುತ್ತಾ ಹೋಗುತ್ತಿದ್ದಂತೆ ಸೈನಿಕನು, " ನೀನು ರಾಜಕುಮಾರಿಯನ್ನು ಮದುವೆಯಾಗುವ ಯೋಚನೆ ಮಾಡಿದ್ದೀಯಾ ? ಎಂದು ಕೇಳಿದನು.

“ ನನಗೇನೋ ಇಷ್ಟವೇ ಆದರೆ ನನ್ನಮ್ಮ ಹೋಗಗೊಡುವುದಿಲ್ಲ ” ಎಂದನು.

“ ನಿನಗೆ ಏನಾದರೂ ಒಗಟಿಗಳು ಗೊತ್ತಾ ?” ಎಂದು ಕೇಳ್ಳನು ಕೇಳುತ್ತಲೂ, ಕೆಬ್ರಿನಿಕ್ ಕೆಲವು ಒಗಟಿಗಳನ್ನು ಹೇಳಿದನು. ಸೈನಿಕನು ಒಂದೆರಡು ನಿಮಿಷ ಯೋಚಿಸಿ ಉತ್ತರವನ್ನು ಹೇಳಿ “ನೋಡಿದಾ ! ಆದಕ್ಕೇ ನಿಮ್ಮಮ್ಮ ನಿನಗೆ ಹೋಗಕೂಡದೆಂದು ಹೇಳುತ್ತಾಳೆ. ನಾಳೆ ಬೆಳಗ್ಗೆ ನನ್ನ ಜೊತೆ ಬಂದರೆ ನಿನಗೆ ಸಹಾಯ ಮಾಡಬಲ್ಲೆ ” ಎಂದನು.

ಯುವಕನು ಹಿಗ್ಗಿ ಒಪ್ಪಿಕೊಂಡನು. ಇಬ್ಬರೂ ತಡಮಾಡದೆ ಮನೆಗೆ ಹಿಂತಿರುಗಿದರು. ತಾಯಿಗೆ ಇಬ್ಬರೂ ತಮ್ಮ ಉದ್ದೇಶವನ್ನು ಹೇಳುತ್ತಲೂ ಕೌಂಟೆಸ್ ಮೌನವಾಗಿದ್ದಳು. ಮರುಮಾತನಾಡಲಿಲ್ಲ. ಬೇಡವೆಂದರೂ ಹೋಗಲು ಮನಸ್ಸು ಮಾಡಿರುವುದರಿಂದ ತನ್ನ ಮಾತನ್ನು ಕೇಳುವುದಿಲ್ಲ ವೆಂದು ಚನ್ನಾಗಿ ಗೊತ್ತಿತ್ತು. ನಿದ್ದೆ ಬರುತ್ತದೆಂದು ಎದ್ದು ಕೊಠಡಿಗೆ ಹೋಗಿ ಅತ್ಯಂತ ಕಟುವಾದ ವಿಷವನ್ನು ತಯಾರಿಸಿದಳು. ಬೆಳಗ್ಗೆ ಇಬ್ಬರೂ ಹೊರಡಲು ಕುದುರೆಯನ್ನು ಏರುತ್ತಿದ್ದಂತೆ, ತಾಯಿ ಎರಡು ಗ್ಲಾಸು ಗಳಲ್ಲಿ ವೈನನ್ನು (ದ್ರಾಕ್ಷಾರಸ) ಹಿಡಿದು ತಂದು. “ ನೀವು ಈಗಲೇ ಹೋಗ ಬೇಕೆಂದು ಮನಸ್ಸು ಮಾಡಿದ್ದೀರ. ಹೋಗುವುದಕ್ಕೆ ಮುಂಚೆ ಇದನ್ನು ಸ್ವೀಕರಿಸಿ. ತಾಯಿ ಮಗನನ್ನು ಬೀಳ್ಕೊಡುವ ಮುನ್ನ ಕೊಡುವ ಉಪ ಹಾರ ” ಎಂದು ಕೊಟ್ಟಳು.

ಆವಳ ಮುಖದಲ್ಲಿ ಕೋಪ ಮತ್ತು ದುಃಖ ಎರಡೂ ಒಡೆದು ಕಾಣಿಸು ತ್ತಿತ್ತು. ಪೆಟಿಟ್ ಜೀನ್ (ಸೈನಿಕನ ಹೆಸರು) ಮೆಲ್ಲನೆ ಯುವಕನ ಕಿವಿಯಲ್ಲಿ ‘ ಇವನ್ನು ಕುಡಿಯಬೇಡ. ಕುದುರೆಯ ಕಿವಿಯಲ್ಲಿ ಸುರಿ” ಎಂದನು.

ಇಬ್ಬರೂ ಆವಳಿಗೆ ಕಾಣದಂತೆ ಹಾಗೆಯೇ ಮಾಡಿ ತಾಯಿಗೆ ಹೋಗಿ ಬರುತ್ತೇವೆಂದು ಹೇಳಿ ಹೊರಟರು. ತಾಯಿ ಅವರುಗಳಿಗೆ ಕೈ ಬೀಸಿದಳು. ಆವಳ ಮುಖದಲ್ಲಿ ಆಶ್ಚರ್ಯವು ಮೂಡಿತು. ಸಾಯಂಕಾಲದ ಹೊತ್ತಿಗೆ ಕುದುರೆಗಳಿಗೆ ವಿಷವೇರಿ ಸತ್ತುಹೋದುವು.

“ ಇದು ವೈನಿನ ಪ್ರಭಾವ ” ಎಂದನು ಪೆಟಿಟ್ ಜೀನ್.

ಅಲ್ಲಿಂದ ಪ್ರಸಃ ಹಿಂತಿರುಗಿ. ಒಂದು ಭೋಜನ ವಸತಿ ಗೃಹದಲ್ಲಿ ರಾತ್ರಿಯನ್ನು ಕಳೆದರು. ಬೆಳಗಾಗುತ್ತಲೂ ಇಬ್ಬರೂ ರಸ್ತೆಯಲ್ಲಿ ನಡೆದು ಹೋಗುತ್ತಿರುವಾಗ ಸತ್ತುಬಿದ್ದ ತಮ್ಮ ಕುದುರೆಗಳ ಹತ್ತಿರ ನಾಲ್ಕು ಮ್ಯಾಗ್‌ಪೈ (ಉದ್ದನೆಯ ಚೂಪು ತೋಕಯೂ, ಕಪ್ಪು, ಬಿಳುಪೂ ಕೂಡಿದ ಗರಿಗಳೂ ಉಳ್ಳ ಯೂರೋಪಿನ ಒಂದು ಜಾತಿಯ ಪಾರಿವಾಳ) ಗಳು ಹತ್ತಿರ ದಲ್ಲಿಯೇ ಸತ್ತುಬಿದ್ದಿದ್ದವು.

ಸೈನಿಕನು "ವಿಷದಿಂದ ಇವೂ ಸತ್ತುಬಿದ್ದಿವೆ. ಇಬ್ಬರೂ ಎರಡೆರಡು ಹಕ್ಕಿ ಗಳನ್ನು ತೆಗೆದುಕೊಂಡು ಹೋಗೋಣ. ಇವು ಉಪಯೋಗಕ್ಕೆ ಬರಬಹುದು" ಎಂದನು.

ಕಾಡನ್ನು ಸಮೀಪಿಸಿದಂತೆ ಹತ್ತಿರದಲ್ಲೇ ಇದ್ದ ರೊಟ್ಟಿಯಂಗಡಿಯ ಯಜಮಾನನನ್ನು ಕಾಡಿನ ಒಳಗೆ ಹಾದುಹೋಗುವ ದಾರಿಯನ್ನು ಕೇಳಿದರು ರೊಟ್ಟಿಯಂಗಡಿಯವನು ಕಾಡಿನಲ್ಲಿ ಆರು ಜನ ದರೋಡೆಕೋರರು ಸೇರಿ ಕೊಂಡಿರುವುದಾಗಿಯೂ, ಪ್ರಯಾಣ ಬೆಳಸುವುದು ಅಪಾಯಕರವೆಂದು ಸೂಚಿಸಿದನು.

ಪೆಟಿಟ್ ಜೀನ್ ಅವನಿತ್ತ ಎಚ್ಚರಿಕೆಯನ್ನು ಲಘುವಾಗಿ ತೆಗೆದು ಕೊಂಡು "ಕಾಡನ್ನು ದಾಟಲೇಬೇಕಾಗಿದೆ. ನನ್ನ ಮತ್ತು ಯಜಮಾನನ ಮೇಲೆ ನಿನಗೆ ದಯೆ ಇದ್ದರೆ ಸ್ವಲ್ಪ ರೊಟ್ಟಿಯ ಕಣಕವನ್ನು ಕೊಡು. ಮುಂದಿರುವ ಹೋಟೇಲಿಗೆ ಹೋಗಿ ಸೇರಿಕೊಳ್ಳುವುದಕ್ಕೆ ಮೊದಲೇ ಕತ್ತಲಾ ದಲ್ಲಿ ರಾತ್ರಿ ಊಟಕ್ಕಾಗುತ್ತದೆ" ಎಂದನು.

ರೊಟ್ಟಿಯಂಗಡಿಯವನು ಕಣಕವನ್ನು ಕೊಟ್ಟನು. ಜೀನ್ ಅವುಗಳಲ್ಲಿ ಎಂಟು ಕೇಕು (ಕಜ್ಜಾಯ) ಗಳನ್ನು ಮಾಡಿ ಅರ್ಧರ್ಧ ಸತ್ತ ಮಾಗ್ ಪೈಯನ್ನು ಹುದಿಗಿಟ್ಟನು.

ಇಬ್ಬರೂ ಕಾಡನ್ನು ಹೊಕ್ಕರು ಆರು ಜನ ದರೋಡೆಕೋರರು ಬೆಂಕಿಯ ಮುಂದೆ ಕಾಯಿಸಿಕೊಳ್ಳುತ್ತಾ ಕುಳಿತಿದ್ದರು ಕೆಬ್ರಿನಿಕ್ "ಕಳ್ಳ ರಂತೆ ತೋರುತ್ತದೆ'' ಎಂದು ಅವರ ಕಣ್ಣಿಗೆ ಬೀಳದಂತೆ ಮುಂದುವರಿಯ ಲೆತ್ನಿಸಿದನು.

ಪೆಟಿಟ್ ಜೆರ್ ನೆಟ್ಟಗೆ ಕಳ್ಳರು ಕುಳಿತಿದ್ದೆಡೆಗೆ ಹೋಗಿ "ನಾನೂ ಸ್ವಲ್ಪ ಬೆಂಕಿ ಕಾಯಿಸಿಕೊಳ್ಳಬಹುದಾ? ಈ ಕಾಡಿನಲ್ಲಿ ಕಳ್ಳರು ಸೇರಿಕೊಂಡಿದ್ದಾರಂತೆ. ಅವರನ್ನು ನೀವು ನೋಡಿದ್ದೀರಾ?" ಎಂದು ಕೇಳಿದನು.

ಕಳ್ಳರಿಗೆ ಅವನಾಡಿದ ಮಾತುಗಳನ್ನು ಕೇಳಿ ನಗು ಬಂದಿರಬೇಕು. ತಮ್ಮ ತಮ್ಮಲ್ಲೇ ಕಣ್ಣು ಮಿಟುಕಿಸಿ ಹಲ್ಲು ಕಿರಿದು "ಧಾರಾಳವಾಗಿ ಕಾಸಿಕೊಳ್ಳಬಹುದು" ಎಂದು ಅರ್ಥಗರ್ಭಿತವಾಗಿ ನಕ್ಕು ನುಡಿದರು.

ಪೆಟಿಟ್ ಜೆರ್ ಕುಳಿತುಕೊಂಡು, ಎಲ್ಲರಿಗೂ ತಂದಿದ್ದ ಕೇಕನ್ನು ಹಂಚಿದನು. ತಿಂದ ಸ್ವಲ್ಪ ಹೊತ್ತಿನಲ್ಲಿ ವಿಷವೇರಿ, ಕಳ್ಳರು ನರಳಾಡಿ ಸತ್ತು ಹೋದರು. ಪೆಟಿಟ್ ಅವರ ಹತ್ತಿರವಿದ್ದ ಹಣವನ್ನು ಜೇಬುಗಳಲ್ಲಿ ತುಂಬಿಕೊಂಡನು. ಅಂದೇ ರಾತ್ರಿ ಇಬ್ಬರೂ ನಡೆದು ಕಾಡನ್ನು ದಾಟಿ ಎರಡು ಉತ್ತಮವಾದ ಕುದುರೆಗಳನ್ನು ಕೊಂಡರು.

ಪೆಟಿಟ್ ಜೆರ್ ಇದ್ದಕ್ಕಿದ್ದಂತೆ "ಹಾ! ನನ್ನ ಹತ್ತಿರ ಇದೆ ಸಿಕ್ಕಿತು" ಎಂದನು.

"ಏನಿದೆ? .... ಏನು ಸಿಕ್ಕಿತು?".

"ಒಗಟಿ! .. ರಾಜಕುಮಾರಿಯನ್ನು ಕೇಳುವ ಒಗಟೆ. ಮತ್ತಿನ್ನೇನೂ ಅಲ್ಲ!.... ಈಗ ನಾವು ಅನುಭವಿಸಿದುದನ್ನೆಲ್ಲಾ ಕೇಳಿದರೆ ಮುಗಿಯಿತು. ಜಪ್ಪಯ್ಯಂದರೂ ಅವಳಿಗೆ ಒಗಟೆಯನ್ನು ಬಿಡಿಸಲು ಸಾಧ್ಯವೇ ಇಲ್ಲ".

"ಇದೂ ಒಂದು ಒಗಟೆಯಾ?...."

"ಅಷ್ಟೇ ನಿನಗೆ ಗೊತ್ತಿರುವುದು .... ಸ್ವಲ್ಪ ನಿಧಾನಿಸು. ಆತುರಪಡಬೇಡ .... ನೋಡು ... ನಾವು ಮನೆ ಬಿಟ್ಟಾಗ ಇದ್ದುದು ನಾಲ್ಕು. ನಾಲ್ಕರಲ್ಲಿ ಎರಡು ಸತ್ತವು. ಎರಡರಿಂದ ನಾಲ್ಕು ಸತ್ತವು. ನಾಲ್ಕನ್ನು ಎಂಟು ಮಾಡಿದೆವು. ಎಂಟರಲ್ಲಿ ಆರು ಮಂದಿ ಸತ್ತರು. ಕಡೆಗೆ ನಾವಿರುವುದು ನಾಲ್ಕೇ! ಇದು ಹೇಗೆ ಸಾಧ್ಯ?".

ಕೆಬ್ರಿನಿಕ್ಕಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಸೈನಿಕನು ಹೇಳಿದುದನ್ನು ಅದೇ ರೀತಿ ಉಚ್ಚರಿಸಲು ಕಷ್ಟವೇ ಆಯಿತು. ಮಂದಟ್ಟಾಗುವಂತೆ ಪುನಃ ಪುನಃ ಉಚ್ಚರಿಸಿಕೊಂಡನು.

ಅರಮನೆಯನ್ನು ತಲುಪಿದ ಸ್ವಲ್ಪ ಹೊತ್ತಿನಲ್ಲಿ ರಾಜಕುಮಾರಿಯು ಹೊರಗೆ ಬಂದಳು. ಅವಳ ಮುಖದಲ್ಲಿ ತನಗಿಂತ ಬುದ್ಧಿವಂತಳು ಪ್ರಪಂಚ ದಲ್ಲೇ ಇಲ್ಲವೆಂಬ ಅಹಂಕಾರವು ಎದ್ದು ಕಾಣಿಸುತ್ತಿತ್ತು. ಯುವಕನು ಒಗಟಿಯನ್ನು ಹೇಳಿದನು. ಅವಳ ಮುಖದಲ್ಲಿ ಅನುಮಾನವು ನೀಲಾ ಕಾಶದಲ್ಲಿ ಮೋಡವು ಒತ್ತಿ ಬಂದಂತೆ ಸುಳಿಯಿತು "ಎಲ್ಲಿ ಇನ್ನೊಂದು ಸಲ ಹೇಳು" ಎಂದಳು.

ಯುವಕನು ಅನೇಕ ಬಾರಿ ಹೇಳಿದ ಮೇಲೆ ರಾಜಕುಮಾರಿಯು ಯೋಚಿಸಿ ಮೂರು ದಿವಸಗಳ ವಾಯಿದೆಯನ್ನು ಕೇಳಿದಳು. ಯುವಕನಿಗೂ ಮತ್ತು ಸೈನಿಕನಿಗೂ ಅರಮನೆಯಲ್ಲೇ ಬಿಡಾರವನ್ನೇರ್ಪಡಿಸಲಾಯಿತು.

ರಾಜಕುಮಾರಿಯು ಅರಮನೆಯಲ್ಲಿದ್ದ ಗ್ರಂಥಗಳನ್ನೆಲ್ಲಾ ತಿರುವಿ ಹಾಕಿದಳು. ಯಾವ ಪುಸ್ತಕದಲ್ಲೂ ಈ ಒಗಟೆಗೆ ಸದುತ್ತರ ದೊರಕಲಿಲ್ಲ. ಕಡೆಗೆ ಸಖಿಯೊಬ್ಬಳನ್ನು ಕರೆದು ಹೇಗಾದರೂ ಮಾಡಿ ಯುವಕನ ಆಳಿನಿಂದ ಒಗಟೆಗೆ ಉತ್ತರವನ್ನು ತಿಳಿದುಕೊಳ್ಳಲು ಪ್ರಯತ್ನಿಸೆಂದು ಹೇಳಿ ಕಳುಹಿಸಿದನು.

ಕುಳ್ಳ ಪೆಟಿಟನು ಸಖಿಯನ್ನು ನಗುಮುಖದಿಂದ ಬರಮಾಡಿಕೊಂಡು, "ಏನು ಬೇಕು" ಎಂದು ಕೇಳಿದನು.

"ನನ್ನ ಯಜಮಾನತಿಯು ಒಗಟೆಗೆ ಉತ್ತರವು ನಿನಗೆ ಗೊತ್ತಿದೆಯಾ ಎಂದು ಕೇಳುತ್ತಾಳೆ".

"ಓಹೋ! ಗೊತ್ತು! ಆದರೆ ಹೇಳಲು ಸಾಧ್ಯವಿಲ್ಲ".

"ನೂರು ಡ್ಯೂಕೆಟ್ (ಚಿನ್ನದ ನಾಣ್ಯ) ಕೊಟ್ಟರೆ?" ಎಂದು ಹಣದ ಚೀಲವನ್ನು ಅವನ ಮುಖದ ಹತ್ತಿರ ಹಿಡಿದು ಅಲ್ಲಾಡಿಸಿದಳು.

ಪೆಟಿಟ್ ಜೀ಼ ಅಸಡ್ಡೆಯಿಂದ "ದುಡ್ಡು? ನನ್ನ ಹತ್ತಿರ ಬೇಕಾ ದಷ್ಟಿವೆ" ಎಂದು ಜೇಬಿಗೆ ಕೈ ಹಾಕಿ ಒಂದು ಹಿಡಿ ನಾಣ್ಯವನ್ನು ತೋರಿಸಿದನು.

"ಹಾಗಾದರೆ ನಿನಗೆ ಇನ್ನೇನು ಬೇಕು?".

ಪೆಟಿಟ್ ಜರ್ ಅವಳ ಅಂದವಾದ ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿ ನಕ್ಕು "ನೀನು ಮುದ್ದಾಗಿದ್ದೀ .... ಇವತ್ತು ರಾತ್ರಿ ಹತ್ತು ಗಂಟೆಗೆ ನನ್ನ ಕೊಠಡಿಗೆ ಬಾ. ಒಗಟಿಯನ್ನು ಬಿಡಿಸಿ ಹೇಳುವುದು ಮಾತ್ರವಲ್ಲ, ತಂದಿರುವ ಹಣವನ್ನು ನೀನೇ ಇಟ್ಟುಕೊಳ್ಳಬಹುದು" ಎಂದನು.

ಸಖಿಗೆ ಅವನ ಉದ್ದೇಶವು ಸರಿಯಾದುದಲ್ಲವೆಂದು ತೋರಿದರೂ "ರಾಜಕುಮಾರಿಯನ್ನು ಕೇಳುತ್ತೇನೆ" ಎಂದಳು. ಅವಳು ಕೊಠಡಿಯಿಂದ ಹೊರಬಿದ್ದ ತಕ್ಷಣ ಕುಳ್ಳ ಪೆಟಿಟನು ಯಜಮಾನನನ್ನು ಕಂಡು "ಇವತ್ತು ರಾತ್ರಿ ಹತ್ತು ಗಂಟೆಗೆ ನನ್ನನ್ನು ಕಾಣಲು ಒಬ್ಬರು ಬರುತ್ತಾರೆ ಅವರು ಬಂದ ಅರ್ಧ ಗಂಟೆಯಾದಂತೆ ನಾನು ಗಟ್ಟಿಯಾಗಿ ಕೆಮ್ಮುತ್ತೇನೆ. ನೀನು ಕಳ್ಳ! ಕಳ್ಳ! ಎಲ್ಲವನ್ನೂ ಕಸಿದುಕೊಂಡು ಹೋದನು" ಎಂದು ಕೋಪಗೊಂಡವನಂತೆ ನಿನ್ನ ಕೊಠಡಿಯಲ್ಲೇ ಸ್ವಲ್ಪ ಹೊತ್ತು ಶತಪಥ ತುಳಿದು ಅನಂತರ ಬಾಗಿಲು ತೆರೆದು ನನ್ನ ಕೊಠಡಿಯ ಕಡೆ ಮಹಡಿ ಮೆಟ್ಟಿಲನ್ನು ಶಬ್ದ ಮಾಡುತ್ತಾ ಹತ್ತಿ ಬರಬೇಕು" ಎಂದನು.

ಯಜಮಾನನಿಗೆ ಸೈನಿಕನು ಹೇಳಿದ್ದೊಂದೂ ಅರ್ಥವಾಗಲಿಲ್ಲ ಆದರೂ 'ಆಗಲಿ' ಎಂದನು. ಪೆಟಿಟನು ತನ್ನ ಕೊಠಡಿಗೆ ಹಿಂತಿರುಗಿ ಸಖಿಯು ಬರುವಿಕೆಯನ್ನೇ ಎದುರು ನೋಡುತ್ತಾ ಕುಳಿತನು.

ಹತ್ತು ಗಂಟೆ ಹೊಡೆಯುತ್ತಿದ್ದಂತೆ ಸಖಿಯು ಸೈನಿಕನ ಕೊಠಡಿಯ ಬಾಗಿಲನ್ನು ಮೆಲ್ಲನೆ ದಬ್ಬಿಕೊಂಡು ಒಳಗೆ ಪ್ರವೇಶಿಸಿದಳು.

ಸೈನಿಕನು ಆಶ್ಚರ್ಯಗೊಂಡವನಂತೆ ಹುಬ್ಬುಗಳನ್ನು ಮೇಲೆ ಮಾಡಿ "ಹೇಳಿದ ಸಮಯಕ್ಕೆ ಸರಿಯಾಗಿ ಚಾಚೂ ತಪ್ಪದೆ ಬಂದಿದ್ದಿ! ಭೇಷ್!" ಎಂದನು.

"ಒಗಟಿಗೆ ಬೇಗ ಉತ್ತರವನ್ನು ಹೇಳು" ಎಂದು ಸಖಿಯು ಕೇಳಿದಾಗ ಅವಳ ಕೆನ್ನೆಗಳು ಲಜ್ಜೆಯಿಂದ ಕೆಂಪೇರಿದ್ದವು.

"ಹೇಳುತ್ತೇನೆ .... ಹೇಳುತ್ತೇನೆ .... ಅವಸರವೇನು? ನೀನು ಎಷ್ಟು ಆಕರ್ಷಕವಾಗಿದ್ದೀ ಗೊತ್ತಾ?" ಎಂದು ಅವಳ ಸೊಂಟಕ್ಕೆ ಕೈ ಹಾಕಿದನು.

ಯುವತಿಯು ಹಿಂದಕ್ಕೆ ಸರಿದು "ಬೇಡ .... ಬೇಡ ...." ಎಂದಳು.

"ಹಾಗಾದರೆ ಒಗಟಿಗೆ ಉತ್ತರವನ್ನು ಹೇಳುವುದಿಲ್ಲ".

ಯುವತಿಯು ಹಾಗಾದರೆ ...." ಎಂದು ತುಟಯನ್ನು ಕಚ್ಚಿ, ಆಲಂಗಿಸಲು ಅನುಮತಿಯಿತ್ತಳು

"ಈಗಲಾದರೂ ಉತ್ತರವನ್ನು ಹೇಳು" ಎಂದಳು ಯುವತಿ.

"ಯಾಕೆ ಇಷ್ಟು ಅವಸರಾಂತ? ಹೇಳುವವರಿಗೂ ಸುಮ್ಮನಿರು. ಬೆಳಗಾಗುವ ಹೊತ್ತಿಗೆ ಹೇಳುತ್ತೇನೆ."

"ಬೆಳಗಾದ ಮೇಲೆ? .... ನಾನು ಈಗಲೇ ಹೋಗಬೇಕು".

"ಹಾಗಾದರೆ ನಿನ್ನಿಷ್ಟ! ನಾನು ಬೇಡಾಂತೇನೆಯೆ? ಒಗಟಿಗೆ ಉತ್ತರವು ಮಾತ್ರ ಸಿಗೊಲ್ಲ!".

ಅವಳ ಮನಸ್ಸು ಹಾಗೂ ಹೀಗೂ ಹೊಯ್ದಾಡಿತು. ರಾಜಕುಮಾರಿಯು ಕೋಪಕ್ಕೆ ಆಗ್ರಹಳಾಗಲು ಇಷ್ಟವಿರಲಿಲ್ಲ. ಅವಳ ಮನಸ್ಸನ್ನು ಸಂತೋಷಪಡಿಸಬೇಕೆಂದು ಆಸೆ. "ಸರಿ" ಎಂದಳು.

ಪೆಟಿಟ್ "ನಾನು ಹೆಂಗಸಿನ ಬಟ್ಟೆಯನ್ನು ಬೆಟ್ಟನ ತುದಿಯಿಂದ ಕೂಡ ಮುಟ್ಟುವುದಿಲ್ಲ. ನೀನೇ ಎಲ್ಲ ವಸ್ತ್ರಗಳನ್ನೂ ಬಿಚ್ಚು" ಎಂದು ಒತ್ತಾಯ ಪಡಿಸಿದರು.

ಅವಳು ತೊಟ್ಟ ಬಟ್ಟೆಗಳನ್ನೆಲ್ಲಾ ಮಂಚದ ಪಕ್ಕದ್ದಲ್ಲಿದ್ದ ಚಾಪೆಯ ಮೇಲೆ ಬಿಚ್ಚಿ ಹಾಸಿಗೆಯಲ್ಲಿ ಪವಡಿಸಿದಳು ಪೆಟಿಟನು ದೀಪವನ್ನು ಆರಿಸಿ ಅವಳ ಬಟ್ಟೆಗಳನ್ನೆಲ್ಲಾ ಬೇಗ ಬೇಗ ಗಂಟು ಕಟ್ಟಿ ಮಂಚದ ಕೆಳಗೆ ಎಸೆದನು. ಸೈನಿಕನು ಈ ರೀತಿ ಮಾಡಿದ್ದನ್ನು ಅವಳು ಗಮನಿಸಲಿಲ್ಲ

ಸ್ವಲ್ಪ ಹೊತ್ತಾಗುತ್ತಲೂ ಏಕೆಂದರೆ ಈ ಸಮಯದಲ್ಲಿ ಕಾಲ ಪರಿಜ್ಞಾನ ವಿರುವುದಿಲ್ಲ. ಪೆಟಿಟನು ಗಟ್ಟಿಯಾಗಿ ಕೆಮ್ಮಿದನು. ಕೆಳಗಡೆ ಯಾರೋ "ಕಳ್ಳ! ಕಳ್ಳ .... ಎಲ್ಲ ಹೊತ್ತು ಕೊಂಡು ಹೋದ" ಎಂದು ಗಟ್ಟಿಯಾಗಿ

ಕೂಗಿದಂತೆ ಶಬ್ದ. ಸ್ವಲ್ಪ ಹೊತ್ತಾಗಲೂ ಬಾಗಿಲನ್ನು ತೆರೆದು ಮಹಡಿ ಮೆಟ್ಟಲನ್ನು ಶಬ್ದಮಾಡುತ್ತಾ ಹತ್ತಿ ಬರುತ್ತಿರುವಂತೆ ಕೇಳಿಸಿತು.

" ಅದೇನು ಶಬ್ದ ? ಯಾರೋ ಇಲ್ಲಿಗೆ ಬರುತ್ತಿರುವಂತೆ ತೋರುತ್ತದೆ " ಎಂದು ಸಖಿಯು ಹೆದರಿ ಕೇಳಿದಳು.

" ಮತ್ತಾರೂ ಅಲ್ಲ. ಯಜಮಾನ. ಕುಡಿದಾಗ ಅವುಲೇರಿ ಈ ರೀತಿ ಹುಚ್ಚಾಪಟ್ಟೆ ಆಡುತ್ತಾನೆ " ಎಂದು ಶಾಂತವಾಗಿಯೇ ಹೇಳಿದನು ಕಳ್ಳ.

ಯುವತಿಯು ಎದ್ದು ಕುಳಿತು " ನನ್ನ ಬಟ್ಟೆಗಳೆಲ್ಲಿ ?" ಎಂದು ಕೇಳಿದಳು.

" ಕತ್ತಲಲ್ಲಿ ಎಲ್ಲಿ ಬಿದ್ದಿದೆಯೋ ಯಾರಿಗೆ ಗೊತ್ತು. ನೋಡು ಬಂದೇಬಿಟ್ಟ ! ಎಂದ ಕುಳ್ಳ. ಓಡಿ ಹೋಗು ".

ಯುವತಿಯು ಬಟ್ಟೆಗಳನ್ನೆಲ್ಲಾ ಅಲ್ಲೇ ಬಿಟ್ಟು ತನ್ನ ಕೊಠಡಿಗೆ ಓಡಿ ಹೋಗಿ ಸೇರಿಕೊಂಡಳು. ಅನಂತರ ಬೇರೆಯ ಬಟ್ಟೆಯನ್ನು ಹಾಕಿಕೊಂಡು ರಾಜಕುಮಾರಿಯ ಹತ್ತಿರ ಹೋಗಿ " ಅವನು ಮಹಾ ಕೊರವ. ದುಡ್ಡು ತೆಗೆದುಕೊಂಡು ಒಗಟಿಗೆ ಉತ್ತರವನ್ನೂ ಹೇಳಲಿಲ್ಲ " ಎಂದಳು.

ಮೂರನೆಯ ದಿವಸ ರಾಜಕುಮಾರಿಯು ತನ್ನ ಸಖಿಯರಲ್ಲಿ ಅತ್ಯಂತ ರೂಪವತಿಯಾದವಳ ಕೈಲಿ ನೂರೈವತ್ತು ಡ್ಯೂಕೆಟ್ಟುಗಳನ್ನು ಕೊಟ್ಟು ಕಳುಹಿಸಲು ನಿರ್ಧರಿಸಿದಳು. ಅವತ್ತು ಮೊದಲ ದಿವಸಕ್ಕಿಂತ ಸ್ವಲ್ಪ ತಡವಾಗಿಯೇ ಕುಳ್ಳನು ಕೆಮ್ಮಿದನು. ಕಡೆಗೆ ರಾಜಕುಮಾರಿಯೇ ಬಂದಳು. ಕುಳ್ಳನು ಸುಮಾರು ಒಂದು ಗಂಟೆಯ ಕಾಲ ಪ್ರೇಮಕೇಳಿಯಲ್ಲಿ ತೊಡಗಿದ್ದು, ಅನಂತರ ಕೆಮ್ಮಿದನು. ರಾಜಕುಮಾರಿಗೂ ಅದೇ ಗತಿಯಾಯಿತು.

ಮೂರು ದಿವಸಗಳ ವಾಯಿದೆಯಾದ ಮೇಲೆ ಬೆಳಗ್ಗೆ ಕೆಬ್ರಿನಿಕ್, ವಾಯಿದೆ ಮುಗಿಯಿತು. ಒಗಟಿಗೆ ಉತ್ತರವನ್ನು ಹೇಳಬೇಕೆಂದು ಹೇಳಿ ಕಳುಹಿಸಿದನು.

ರಾಜಕುಮಾರಿಯು "ಇನ್ನೊಂದು ಅರಿಕೆ. ಈ ಚೀಲದಲ್ಲಿ ಸತ್ಯವನ್ನು ತುಂಬಿ ತೆಗೆದು ಕೊಂಡು ಬಾ" ಎಂದಳು.

ಕೆಬ್ರಿನಿಕ್, ಸೈನಿಕನ ಮುಖವನ್ನು ನೋಡುತ್ತಾ "ಹಾಗೇ ಆಗಲಿ" ಎಂದನು.

ಮರುದಿವಸ ಬೆಳಗ್ಗೆ ಯುವಕನು ಏನು ಉತ್ತರವನ್ನು ಹೇಳುತ್ತಾನೊ ಕೇಳೋಣವೆಂದು ಜನರು ರಾಜಾಸ್ಥಾನದಲ್ಲಿ ಕಿಕ್ಕಿರಿದು ನೆರೆದಿದ್ದರು. ಯುವಕ ಮತ್ತು ಸೈನಿಕರಿಬ್ಬರೂ ತುಂಬಿದ ಚೀಲವನ್ನು ಹೊತ್ತು ತಂದು ಕೆಳಗಿಟ್ಟರು.

ದೊರೆಯು "ಈಗ ಸತ್ಯವನ್ನು ಪರೀಕ್ಷಿಸೋಣ" ಎಂದನು.

ಚೀಲದ ಬಾಯಿಯನ್ನು ಬಿಚ್ಚಿ ಲಂಗವನ್ನು ತೆಗೆದು ಕುಳ್ಳನು ದೊರೆಯ ಕಡೆ ತಿರುಗಿ "ಇದು ಮೊದಲನೆಯ ಸತ್ಯ. ಈ ಉಡಿಗೆ ಯಾರದೆಂದು ಹೇಳಬಲ್ಲಿರಾ?'' ಎಂದು ಏನೂ ಅರಿಯದವನಂತೆ ಕೇಳಿದನು.

ಯಾರು ಉತ್ತರ ಕೊಡಲಿಲ್ಲ. ಜೇ಼, ಸಖಿಯ ಕಡೆ ತಿರುಗಿ "ಮೂರು ದಿವಸಗಳಿಗೆ ಮೊದಲು ಈ ಲಂಗವನ್ನು ಹಾಕಿಕೊಂಡಿದ್ದಿಯಲ್ಲವೆ?" ಎಂದನು.

ಯುವತಿಯ ಮುಖವು ಲಜ್ಜೆಯಿಂದ ಕೆಂಪೇರಿತು. ತಲೆಯನ್ನು ತಗ್ಗಿಸಿ ಮೌನವಾಗಿ ನಿಂತಳು.

"ಇಕೋ ಈ ಒಳಕುಪ್ಪಸ. ಒಡ್ಯಾಣ'' ಎಂದು ಮತ್ತೊಂದು ಅಂದವಾದ ಒಳವೋಷಾಕವನ್ನು ಕೈಯಲ್ಲಿ ಹಿಡಿದು "ಇದಾರದು?" ಎಂದು ಕೇಳಿದನು. ನೆರೆದ ಜನರೆಲ್ಲರೂ ಹೊಟ್ಟೆ ಹುಣ್ಣಾಗುವ ರೀತಿ ನಕ್ಕರು. ಸಖಿಗೆ ಭೂಮಿ ಬಿರಕು ಬಿಟ್ಟು ತಾನೇಕೆ ಪಾತಾಳಕ್ಕೆ ಕುಸಿಯಬಾರದು ಎನ್ನುವಷ್ಟು ಅವಮಾನವಾಯಿತು. "ಮೊದಲನೆಯ ಸತ್ಯ ಸ್ಥಾಪಿಸಿಯಾಯಿತು. ಈಗ ಎರಡನೆಯದನ್ನು ಪರೀಕ್ಷಿಸೋಣ'' ಎಂದು ಅತ್ಯಂತ ಅಮೂಲ್ಯವಾದ ಲಂಗವನ್ನು ತೆಗೆದಾಗ ಮರುದಿವಸ ಬಂದವಳ ಕಪೋಲಗಳು ಕೆಂಪೇರಿದವು. ಮೂರು ಸತ್ಯಗಳೂ ಹೊರ ಬರುವವರೆಗೂ ಯಾರೂ ಆಸ್ಥಾನದಿಂದ ಕದಲಕೂಡದೆಂದು ರಾಜನು ಆಜ್ಞೆ ಮಾಡಿದನು.

ಪೆಟಿಟನು ಹೆಂಗಸಿನ ಮೇಲೆ ಸ್ವಲ್ಪವೂ ಪರಿತಾಪ ಪಡದೆ ಕೆಲವು ಪ್ರಶ್ನೆಗಳನ್ನು ಹಾಕಿ, ಅವಳು ಮೌನವಾಗಿದನ್ನು ಕಂಡು ತಾನೇ ನಾಟಕೀಯವಾಗಿ ಉತ್ತರವನ್ನು ಕೊಟ್ಟನು.

ಕಡೆಗೆ ಪೆಟಿಟ್ ಜೀನ್ "ಈಗ ಮೂರನೆಯ ಹಾಗೂ ಅಂತಿಮ ಸತ್ಯ" ಎಂದನು.

ರಾಜಕುಮಾರಿಯು ಎದ್ದು ನಿಂತು "ಸಿಲ್ಲಿಸು ಸಾಕು, ಸಾಕು. ಇದು ನನ್ನ ಆಜ್ಞೆ" ಎಂದಳು.

"ಆದರೆ ಮೂರು ಸತ್ಯಗಳನ್ನೂ ತುಂಬಿರಬೇಕೆಂದು ತಾವು ಆಜ್ಞಾಪಿಸಿದ್ದಿರಿ." ಎಂದು ಚೀಲದಲ್ಲಿ ಕೈ ಹಾಕಿದನು. ಎಲ್ಲರಿಗೂ ಚೀಲದಲ್ಲಿ ಏನಿದೆಯೋ ನೋಡಬೇಕೆಂದು ಕುತೂಹಲ.

ರಾಜಕುಮಾರಿಯು ಸರಸರ ಎದ್ದುಬಂದು ಜೀನನ ಕೈಹಿಡಿದು ತಡೆದು "ಸಾಕು ಚೀಲವನ್ನು ಮುಚ್ಚು" ಎಂದಳು.

ಎಲ್ಲರಿಗೂ ಆಶ್ಚರ್ಯವಾಯಿತು. ದೊರೆಗೂ ಈ ವಿಚಾರವಾಗಿ ಹೆಚ್ಚು ಮುಂದುವರಿಸುವುದು ಸೂಕ್ತವಲ್ಲವೆಂದು ತೋರಿತು.

"ರಾಜಕುಮಾರಿಯು ಹೇಳಿದ ಹಾಗೆ ಕೇಳು" ಎಂದು ಸೈನಿಕನಿಗೆ ಆಜ್ಞೆ ಮಾಡಿ ಯುವಕನ ಕಡೆ ತಿರುಗಿ "ಸೀನಾರ್ ಕೆಬ್ರಿನಿಕ್" ನೀನೇ ನನ್ನ ಅಳಿಯ. ನಿನ್ನನ್ನು ಸ್ವಾಗತಿಸುತ್ತೇನೆ" ಎಂದನು.

ಒಂದು ವಾರದಲ್ಲಿ ಮದುವೆಯಾತು. ತಿಂಗಳೊಳಗೆ ವೃದ್ಧರಾಜನು ಕಾಲಾಂತವಾಗಿ ಕೆಬ್ರಿನಿಕ್ ಗದ್ದಿಗೆಯನ್ನೇರಿದನು. ಜೀನನೇ ಅವನ ಪ್ರಧಾನಮಂತ್ರಿ.



# ಘಾಟಿ ಗಂಡ!!

## ಲಾ ಫಾರ್ ಟ್ರೀ

ಯಜಮಾನರಿಗೆ ಮನೆಯಲ್ಲಿ ಕೆಲಸ ಮಾಡುತ್ತಿದ್ದ ಹದಿನಾರು ವಯಸ್ಸಿನ ಹರೆಯದ ಹುಡುಗಿಯ ಮೇಲೆ ಕಣ್ಣು ಬಿತ್ತು. ಅವಳಿಗೆ ಪ್ರಣಯ ಪಾಠವನ್ನು ಹೇಳಿಕೊಡಲು ಹೆಚ್ಚು ಕಾಲ ಬೇಕಾಗಲಿಲ್ಲ. ಕಟ್ಟುಮಸ್ತಾಗಿ ಮುದ್ದಾಗಿದ್ದಳು. ಜೊತೆಗೆ ಚಿಕ್ಕ ವಯಸ್ಸು ಬೇರೆ. ಇನ್ನು ಕೇಳಬೇಕೆ? ಬೇಸಿಗೆಯಲ್ಲಿ ಉಷ್ಣಮಾಪಕ ಯಂತ್ರದಲ್ಲಿರುವ ಪಾದರಸವು ಮೇಲೇರುವಂತೆ ಅವಳ ಪಿಪಾಸೆ ಏರುತ್ತಿತ್ತು.

ಒಂದು ದಿವಸ ಹೆಂಡತಿಯು ಇನ್ನೂ ಮಲಗಿದ್ದಳು. ರಾಯರು ಹಾಸಿಗೆಯಿಂದೆದ್ದು ಹೊರಗೆ ಕೈ ತೋಟದಲ್ಲಿ ತಂಗಾಳಿ ಕುಡಿಯಲು ಹೊರಟರು. ಕೆಲಸದ ಹುಡುಗಿಯು ಹೂ ಕೀಳುತ್ತಿದ್ದಳು. ಅವತ್ತು ಅವರ ಮಡದಿಯ ಹುಟ್ಟಿದ ಹಬ್ಬ. ಹೂವಿನ ತುರಾಯಿ ಮಾಡಲು ಮುಂಚಿತವಾಗಿಯೇ ಎದ್ದಿದ್ದಳು. ರಾಯರು ಹುಡುಗಿಯ ಹತ್ತಿರ ಸರಿದು ಹಲ್ಲು ಕಿರಿಯುತ್ತಾ ಅವಳ ಸೊಬಗನ್ನು ಉದ್ಯಾನವನದಲ್ಲಿರುವ ಹೂಗಳಿಗೆ ಹೋಲಿಸಿದರು.

ಅವಳ ರೂಪ ಪುಷ್ಪವೇ ರೂಪವತ್ತಾಗಿ ಬಂದಂತೆ ಮನ ಮೋಹಕವಾಗಿತ್ತಂತೆ. ವರ್ಣನೆಯನ್ನು ಮಾಡುತ್ತಿದ್ದಂತೆ ಕೈಗಳು ಅವಳ ಮಾಟವಾಗಿದ್ದ ದೇಹದ ಮೇಲೆ ಚಲಿಸತೊಡಗಿದವು. ಹುಡುಗಿಯ ಮುಖವು ಕೆಂಪೇರಿತು. ಇಷ್ಟವಿಲ್ಲದವಳಂತೆ (ಅವರ ಕೈ ಚಲನೆಗೆ ಯಾವ ರೀತಿಯ ಅಡ್ಡಿ ಆತಂಕಗಳು ಬಾರದ ರೀತಿ) ತಳ್ಳಿದಳು. ಹಾಲು ಕೆನ್ನೆಗಳನ್ನು ಮೆದುವಾಗಿ ಜಿಗಟಿ, ಅಧರಗಳಿಗೆ ಮುತ್ತಿಟ್ಟರು. ಕಾಯದ ಕಾವು ಏರಿದಂತೆ ಕೈಹಿಡಿದು ಬೆಚ್ಚಗಿದ್ದ ತೋಟದ ನೆಲದ ಮೇಲೆಯೇ ಒಂದಾಗಿ ಆನಂದಿಸಿದರು.

ಗ್ರಹಚಾರ! ಅವರಿಬ್ಬರೂ ಮದನಕೇಳಿಯಲ್ಲಿ ಮಗ್ನರಾಗಿರುವಾಗ ಪಕ್ಕದ ಮನೆಯಲ್ಲಿರುವ ಹೆಂಗಸು ಕಿಟಕಿಯ ಪರದೆಯನ್ನು ಸರಿಸಿ ಕುತೂ

ಹಲದಿಂದ ನೋಡಬೇಕೆ ! ಅವಳು ನೋಡುತ್ತಿರುವುದನ್ನು ಇಬ್ಬರೂ ಕಂಡರು. ಹುಡುಗಿಯು ಮತ್ತೇನಾಗುವುದೋ ಎಂದು ಹೆದರಿದಳು. ರಾಯರು ಕೂಡ ಹೆದರಿದರು "ಚಿಂತೆಯಿಲ್ಲ. ಹೆದರಬೇಡ. ನೀನು ಮನೆಯೊಳಗೆ ಹೋಗು" ಎಂದು ಸಮಾಧಾನವನ್ನು ಹೇಳಿದರು.

ರಾಯರಿಗೆ ಅಸಾಧ್ಯ ಬುದ್ಧಿ. ಮನೆಯನ್ನು ಪ್ರವೇಶಿಸಿ ಮಲಗಿದ್ದ ಮಡದಿಯನ್ನು "ಲೇ, ಏನು ಇನ್ನೂ ಮಲಗಿದ್ದೀಯಾ ? ಏಳು ! ತೋಟದಲ್ಲಿ ಹೂಗಳು ಎಷ್ಟೊಂದು ಬಿಟ್ಟಿವೆ ಗೊತ್ತಾ ? ಹೋಗಿ ಸುತ್ತಾಡಿ ಬರೋಣ" ಎಂದು ಎಬ್ಬಿಸಿ ಕೈ ಹಿಡಿದು ಕರೆದುಕೊಂಡು ಹೋದರು.

ಪತ್ನಿಯ ಮುಖವನ್ನು ನೋಡಿ ನಗುತ್ತಾ 'ನಿನಗೂ ಈ ಹೂಗಳಿಗೂ ಏನು ವ್ಯತ್ಯಾಸ. ಎರಡೂ ಒಂದೇ ! ಹಾಗೆ ನೋಡಿದರೆ ನಿನ್ನ ರೂಪವು ಈ ಪುಷ್ಪಗಳನ್ನು ನಾಚಿಸುವಂತಿದೆ" ಎಂದು ಹೊಗಳಿದರು. ಮೊದಲಿನ ರೀತಿ ಮುತ್ತಿನ ಮಳೆ. ಮಡದಿಯ ಪ್ರತಿಭಟನೆ. ಕಡೆಗೆ ನೆಲದ ಮೇಲೆ ಮುಕ್ತಾಯ.

ಸಾಯಂಕಾಲ ಪಕ್ಕದ ಮನೆಯ ಹೆಂಗಸು, ಮನೆಗೆ ಬಂದು ಮೆಲ್ಲಗೆ ತಾನು ಕಂಡಿದ್ದೆಲ್ಲವನ್ನೂ ಸ್ವಾರಸ್ಯವಾಗಿ ವಿವರಿಸಿದಳು. ಯಜಮಾನರು ಪಕ್ಕದ ಕೋಣೆಯಲ್ಲಿ ಎಲ್ಲವನ್ನೂ ವೈಯ್ಯಲ್ಲಾ ಕಿವಿ ಮಾಡಿಕೊಂಡು ಕೇಳುತ್ತಾ ಕುಳಿತಿದ್ದರು. ಅವಳು ಹೇಳುತ್ತಿರುವಾಗ ಮಧ್ಯೆ ಮಧ್ಯೆ ಯಜಮಾನಿ ನಗುತ್ತಾ "ಸುಮ್ಮನಿರಿ ಸಾಕು, ಅದು ನಾನೇ ಕಾಣ್ರೀ' ಎಂದು ಪುನಃ ಪುನಃ ನಗುತ್ತಾ ಹೇಳುತ್ತಿದ್ದಳು.

ಯಜಮಾನರ ಮನಸ್ಸಿಗೆ ಒಂದು ರೀತಿ ಸಮಾಧಾನ ಸಂತೋಷಗಳಾದುವು. ತಮ್ಮಲ್ಲೇ ನಕ್ಕು ದೀರ್ಘ ನಿಶ್ವಾಸವನ್ನು ಬಿಟ್ಟರು.



# ಅಕ್ಷರಶಃ ನಿಜ

## ಜೀ್ ಟಿನೋನೇಡ

ರೋಮ್ ಪಟ್ಟಣದ ಕೋಟೆಯೊಳಗೆ ಅವೈಂಟೈನ್ ಬೆಟ್ಟದ ಬುಡದಲ್ಲಿ ವಿಚಿತ್ರವಾದ ಕಲ್ಲಿನ ವಿಗ್ರಹವೊಂದಿದೆ. ಮೇಲರ್ಧ ಭಾಗವು ಸಿಂಹಾಕಾರ, ಕೆಳಗಿನ ಭಾಗವು ಮನುಷ್ಯನಂತಿದೆ. (ನರಸಿಂಹನ ವಿಗ್ರಹದಂತೆ) ತೆರೆದ ಬಾಯಿ, ಕ್ರೂರವಾದ ದವಡೆ ಮತ್ತು ಹಲ್ಲುಗಳು. ಇವತ್ತಿಗೂ ಈ ವಿಗ್ರಹವು ಸತ್ಯ ಪರೀಕ್ಷೆಯ ಶಿಲೆಯೆಂದು ಪ್ರಸಿದ್ಧಿಯಾಗಿದೆ. ಹಿಂದಿನ ಕಾಲದಲ್ಲಿ ಜನರು ಯಾರ ಮೇಲಾದರೂ ದೂರು ಕೊಟ್ಟಲ್ಲಿ ಆಪಾದಿತನು ತನ್ನ ಬಾಹುವನ್ನು ಈ ವಿಗ್ರಹ ಬಾಯಲ್ಲಿಟ್ಟು ಸತ್ಯಪ್ರಮಾಣವನ್ನು ಮಾಡಬೇಕಾಗಿತ್ತು. ಹೇಳಿದ್ದು ಸುಳ್ಳಾಗಿದ್ದಲ್ಲಿ ವಿಗ್ರಹದ ಬಾಯಿ ಮುಚ್ಚುತ್ತಿತ್ತು. ಒಪ್ಪಿಕೊಳ್ಳುವವರೆಗೂ ಬಾಯನ್ನು ತೆಗೆಯುತ್ತಿರಲಿಲ್ಲ. ಆಪಾದಿತನು ನಿರಪರಾಧಿಯಾಗಿದ್ದಲ್ಲಿ ತೆರೆದ ಬಾಯಿಯು ತೆರೆದಂತೆಯೇ ಇರುತ್ತಿತ್ತು. ಆಪಾದಿತನು ನಿರಪರಾಧಿಯೆಂದು ವಿಮುಕ್ತನಾಗುತ್ತಿದ್ದನು.

ರೋಮ್ ನಗರದಲ್ಲಿ ಶ್ರೀಮಂತನೊಬ್ಬನಿದ್ದನು. ಅವನ ಹೆಸರು ಕ್ಯಾಪ್ಟನ್ ಸ್ಕಿಪಿಯೋ ಟೊರ್ಕಟಸ್. ಸೀಸರಿನ ವಂಶದವನೆಂದು ಹೇಳಿಕೊಳ್ಳುತ್ತಿದ್ದನು. ಅತ್ಯಂತ ರೂಪವತಿಯೂ ಶೀಲವಂತೆಯೂ ಆದ ಆನಿ ಸಬಲೀನಳನ್ನು ಮದುವೆಯಾದನು. ಅವಳಷ್ಟು ಸುಂದರಳಾದ ಯುವತಿಯು ರೋಮ್ ಪಟ್ಟಣದಲ್ಲೇ ಇರಲಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ವಯಸ್ಸು ಕೇವಲ ಇಪ್ಪತ್ತಮೂರು.

ಒಂದು ಸಲ ಟೊರ್ಕಟಸ್, ಡ್ಯಾನೂಬ್ ನದಿಯ ಸುತ್ತಮುತ್ತ ಮತ್ತು ಟ್ರಾನ್ಸಲ್ವೇನಿಯದ ಪ್ರಾಂತಗಳಲ್ಲಿ ದಂಗೆ ಎದ್ದ ಬರ್ಬರನನ್ನು (ರೋಮಕರು, ರೋಮನೇತರರನ್ನು ಬರ್ಬರರೆಂದು ಕರೆಯುತ್ತಿದ್ದರು. ಬರ್ಬರ ಎಂದರೆ

ಅನಾಗರೀಕ ಕಾಡುಜನವೆಂದು ಅರ್ಥ. ) ಅಡಗಿಸಲು ಹೋಗಬೇಕಾಗಿ ಬಂದಿತು.

ಬರ್ಬರರಿಗೂ, ರೋಮಕರಿಗೂ ಘೋರವಾದ ಯುದ್ಧವಾಗಿ ಅನೇಕ ರೋಮಕರು ಮಡಿದರು. ಈ ಪ್ರಾಂತಗಳು ರೋಮಿಗೆ ದೂರವಾಗಿದ್ದುದರಿಂದ, ಹಾಗೂ ರಸ್ತೆಗಳ ಸೌಕರ್ಯವಿಲ್ಲದಿದ್ದುರಿಂದ ಯುದ್ಧದಲ್ಲಿ ಯಾರು ಯಾರು ಮಡಿದರೆಂಬ ಸುದ್ದಿ ತಲುಪುವುದು ಕಷ್ಟವಾಗಿತ್ತು.

ಸಬಲೀನಳು ತನ್ನ ಗಂಡನು ಕೂಡ ಯುದ್ಧದಲ್ಲಿ ಮಡಿದಿರಬೇಕೆಂದು ದುಃಖದಿಂದ ಹಾಸಿಗೆ ಹಿಡಿದಳು. ರೋಮಿನಲ್ಲಿ ವೈದ್ಯರುಗಳ ಕೈಲೆಲ್ಲಾ ಔಷಧವನ್ನು ಕೊಡಿಸಿದರು. ರೋಗವು ಹೆಚ್ಚಾಯಿತೇ ಹೊರತು ತಗ್ಗಲಿಲ್ಲ. ಗ್ರೀಸಿನಿಂದ ಆಗತಾನೆ ವೈದ್ಯ ವಿದ್ಯೆಯನ್ನು ಕಲಿತು ಒಬ್ಬ ಯುವಕನು ಹಿಂತಿರುಗಿದ್ದಾನೆಂದು ಸುದ್ದಿ ಬಂದಿತು. ಅವನ ಹೆಸರು ಅರ್ಸಿನಿಯುಸ್ ರೂಫಸ್. ಹೊಸದಾಗಿ ಬಂದಿರುವ ವೈದ್ಯನು ರೋಮಕನೇ, ಅವನು ಹುಟ್ಟಿದ್ದೂ ರೋಮಿನಲ್ಲೇ ಎಂದು ತಿಳಿದು ಬಂದಿತು. ವೈದ್ಯನನ್ನು ಸಬಲೀನಳ ಮನೆಯವರು ಕರೆಕಳುಹಿಸಿದರು. ರೋಗಿಯನ್ನು ನೋಡಿದ ಮೊದಲ ದಿವಸವೇ ರೂಫಸ್‌ನ ತಲೆ ಕೆಟ್ಟಿತು. ಅವಳ ರೂಪಲಾವಣ್ಯಕ್ಕೆ ಮನಸೋತನು. ನಿತ್ಯ ರೋಗಿಯನ್ನು ಕೊಠಡಿಯಲ್ಲಿ ಏಕಾಂತವಾಗಿ ಪರೀಕ್ಷಿಸುತ್ತಿದ್ದ. ವೈದ್ಯನು ಪರೀಕ್ಷಿಸುತ್ತಿದ್ದಾಗ ಮನೆಯವರಾರೂ ಕೊಠಡಿಯನ್ನು ಪ್ರವೇಶಿಸುತ್ತಿರಲಿಲ್ಲ. ದಿನಗಳುರಳಿದಂತೆ ಸೊರಗಿದ್ದ ರೋಗಿಯ ರೂಪವನ್ನು ನೋಡಿ ಪ್ರೇಮಜ್ವಾಲೆಯು ಮತ್ತಷ್ಟು ಆವರಿಸಿತು. ಒಂದು ದಿನ ಧೈರ್ಯವನ್ನು ತಂದುಕೊಂಡು ಅವಳ ರೂಪಲಾವಣ್ಯವನ್ನು ಬಾಯಿತುಂಬ ಹೊಗಳಿ ತಾನು ಅನುರಕ್ತನಿರುವುದಾಗಿ ಹೇಳಿದನು. ಹೊಗಳಿದರೆ ಸಾಕು ಯಾವ ಹೆಂಗಸಿನ ತಲೆಯಾದರೂ ಕೆಡುತ್ತದೆ. ಅವನ ಮಾತುಗಳಿಗೆ ಸಬಲೀನಳು ಮನಸೋತಳು. ಇಬ್ಬರೂ ಪರಸ್ಪರ ಆಕರ್ಶಿತರಾದರು.

ಸಬಲೀನಳ ಮನಸ್ಸಿನಲ್ಲಿ ಆಂದೋಳನವೆದಿದ್ದು, ಪತಿಯು ಬದುಕಿರುವಾಗಲೇ ಪರಪುರುಷನೊಂದಿಗೆ ಸಹವಾಸಮಾಡುವುದು ಸರಿಯಾ? ಎಂದು ಕಾಡತೊಡಗಿತು. ಪತಿಗೆ ದ್ರೋಹಮಾಡುವುದು ತಪ್ಪೆಂದು ಮನಸ್ಸಿ

ನಲ್ಲಿದ್ದ ಕಿಚ್ಚನ್ನು ತಡೆದುಕೊಂಡಳು ಆದರೂ ಸತೀತ್ವಕ್ಕೂ, ದೇಹಾ ಕಾಂಕ್ಷೆಯು ಬಾಧೆಯು ಹೆಚ್ಚಾಗಿ ಕಾಡುತ್ತಿದ್ದುದರಿಂದ ನಲ್ಲನೊಡನೆ ನಲಿ ದಾಡುವ ಹಗಲು ಕನಸುಗಳನ್ನು ಹೆಣೆಯುತೊಡಗಿದಳು.

ಇಬ್ಬರೂ ಒಂದಾಗಲು ಹೆಚ್ಚು ದಿವಸಗಳು ಬೇಕಾಗಲಿಲ್ಲ. ಯಾರ ಕಣ್ಣಿಗೂ ಕಾಣಿಸದ ರೀತಿ ಸಂತೋಷದಿಂದ ಕಾಲವನ್ನು ಕಳೆಯತೊಡಗಿದರು. ಕ್ರಮೇಣ ಮನೆಯಲ್ಲಿದ್ದವರಿಗೆ ಅನುಮಾನವು ಬಂದಿತು. ಸಬಲೀನಳು ವೈದ್ಯನೊಂದಿಗೆ ಸಂಬಂಧವಿಟ್ಟು ಕೊಂಡಿದ್ದಾನೆಂದು ತಮ್ಮ ತಮ್ಮಲ್ಲೇ ಗುಸು ಗುಸು ಮಾತನಾಡತೊಡಗಿದರು. ಪತಿಯು ಜೀವಂತನಾಗಿರುವಾಗಲೇ ಈ ರೀತಿ ಸಂಬಂಧವಿಟ್ಟುಕ್ಕೊಂಡಿರುವುದು ಸರಿಯಲ್ಲವೆಂದು, ಟೊರ್ಕ್ಯಟಸ್ಸಿಗೆ "ತಕ್ಷಣ ರಜಾ ಹಾಕಿ ಹಿಂತಿರುಗಿ ಬಾ. ತುರ್ತಿನ ಕೆಲಸವಿದೆ" ಎಂದು ಹೇಳಿ ಕಳುಹಿಸಿದರು.

ಕ್ಯಾಪ್ಟನ್ ಹಿಂತಿರುಗಿ ಬಂದನು. ಒಡತಿ ಮತ್ತು ಒಡನಾಡಿಗಳಾಗ ರಾಜಮರ್ಯಾದೆಯಿಂದ ಬರಮಾಡಿಕೊಂಡರು ಆಪ್ತರು, ಸೆಬಲೀನಳು ಡಾಕ್ಟರೊಡನೆ ಸಹವಾಸವಿಟ್ಟುಕ್ಕೊಂಡಿದ್ದಾಳೆಂದು ದೂರು ಹೇಳಿದಾಗ ಟೊರ್ಕ್ಯಟಸ್ ನಂಬಲಿಲ್ಲ. ಅವನಿಗೆ ಹೆಂಡತಿಯ ಮೇಲೆ ಅವಿಚ್ಛಿನ್ನವಾದ ಪ್ರೀತಿ.

ತನ್ನ ಒಲವಿನ ರಾಣಿಯ ಮೇಲೆ ಯಾವ ರೀತಿಯ ಅನುಮಾನವೂ ಬಾರದ ರೀತಿ ಡಾಕ್ಟರು ಬರುವುದನ್ನೇ ನಿಲ್ಲಿಸಿದನು.

ಒಂದು ದಿವಸ ಟೊರ್ಕ್ಯಟಸ್ ಮಡದಿಗೆ ತಾನು ಪುನಃ ಯುದ್ಧ ಭೂಮಿಗೆ ಹೋಗಬೇಕಾಗಿದೆಯೆಂದು ಸೂಚಿಸಿ, ಸೆಬಲೀನ ! ಆದರೆ ನನ್ನ ಮನಸ್ಸು ಇತ್ತೀಚೆಗೆ ಏಕೋ ಸರಿಯಾಗಿಲ್ಲ ಎಂದನು.

ತನ್ನ ಮನಸ್ಸಿನಲ್ಲಿದ್ದ ಅಲ್ಲೋಲ ಕಲ್ಲೋಲವನ್ನು ಹಿಡಿದೊತ್ತಿ ಏನೂ ಅರಿಯದವಳಂತೆ ಆ ಶಂಕೆಯನ್ನು ತೋರ್ಪಡಿಸಿ "ಯಾಕೆ, ಏನಾ ಯಿತೂಂದೆ...." ಎಂದು ಕೇಳಿದಳು.

ಟೊರ್ಕ್ಯಟಸನು ಹಿಂಜರಿದು ಅರ್ಧ ಮನಸ್ಸಿನಿಂದ "ಮತ್ತೇನಿಲ್ಲ.... ನೋಡು....ನಮ್ಮ ಬಂಧು ಬಳಗದ ಜನರು ನಿನ್ನ ವಿಷಯವಾಗಿ ಏನೋನೋ

ಹೇಳುತ್ತಿದ್ದಾರೆ. ನಿನ್ನ ನಡವಳಿಕೆ ವಿಚಾರದಲ್ಲಿ ಅನುಮಾನ ಪಡುತ್ತಿದ್ದಾರೆ. ನೀನು ಎಂಥಹವಳು, ನಿನ್ನ ಮನಸ್ಸು ಎಷ್ಟು ನಿರ್ಮಲವಾದದ್ದು, ನನ್ನನ್ನು ಎಷ್ಟರ ಮಟ್ಟಿಗೆ ಪ್ರೀತಿಸುತ್ತಿ ಎಂಬುದು ನನಗೆ ಚನ್ನಾಗಿ ಗೊತ್ತಿದೆ. ಆದರೂ ಅವರುಗಳ ಅನುಮಾನವನ್ನು ಪರಿಹರಿಸಲು ಸತ್ಯ ಪರೀಕ್ಷೆಯ ವಿಗ್ರಹದ ಬಾಯಲ್ಲಿ ಕೈ ಇಟ್ಟು ಪ್ರಮಾಣಮಾಡಿ ಬಿಡು. ಅದರಿಂದ ನಷ್ಟವೇನೂ ಇಲ್ಲ. ಅವರ ಬಾಯಿಯನ್ನು ಮುಚ್ಚಿಸಬಹುದು. ನನಗೇನೋ ಈ ರೀತಿ ಪರೀಕ್ಷೆಮಾಡುವುದು ಖಂಡಿತವಿಲ್ಲ. ಆದರೂ ಬಂಧು ಬಳಗದವರನ್ನು ತೃಪ್ತಿ ಪಡಿಸಬೇಕಲ್ಲ! ’’ ಎಂದನು.

ಸುಳ್ಳು ಪ್ರಮಾಣಮಾಡಿದಲ್ಲಿ ನಿಜ ಹೇಳುವವರೆಗೂ ಜಪ್ಪಯ್ಯಾಂದರೂ ವಿಗ್ರಹವು ಬಿಡದು ಎಂಬುದನ್ನು ಅರಿತ ಸಬಲೀನಗೆ ಗುಂಡಿಗೆ ಹೆದರಿಕೆಯಿಂದ ಬಾಯಿಗೆ ಬಂದಂತೆ ತೋರಿತು. ಎದೆ ಡವಡವ ಹೊಡೆದುಕೊಂಡಿತು. ತನ್ನ ಮನಸ್ಸಿನಲ್ಲಾದ ಉಲ್ಬಣವನ್ನು ಸ್ವಲ್ಪವೂ ತೋರಿಸಿಕೊಳ್ಳದೆ ಅಷ್ಟೇ ತಾನೆ ಮಾಡಿದರೆ ಆಯಿತು. ಆದರೆ ಒಂದು ಈ ರೀತಿ ಪ್ರಮಾಣಮಾಡಿದಲ್ಲಿ ಸಂಬಂಧೀಕರಲ್ಲಾ, ನೀವು ನನ್ನ ನಡತೆಯ ವಿಷಯದಲ್ಲಿ ಅನುಮಾನ ಬಂದೇ ಈ ರೀತಿ ಮಾಡುತ್ತಿದ್ದೀರಿ ಎಂದು ಕೊಳ್ಳುವುದಿಲ್ಲವೆ?" ಎಂದು ಶಾಂತಚಿತ್ತ ದಿಂದ ಕೇಳಿದಳು.

" ಚಿಂತೆಯಿಲ್ಲ. ನೀನು ಪ್ರಮಾಣ ಮಾಡುತ್ತೀ ತಾನೆ ? "

ಮನಸ್ಸಿನಲ್ಲಿ, ಡಾಕ್ಟರನ್ನು ನೋಡಿ, ಈ ಗಂಡಾಂತರದಿಂದ ಪಾರಾಗಲು ಉಪಾಯವೇನೆಂದು ಸಮಾಲೋಚಿಸಬೇಕು ಎಂದು ಕೊಂಡು ಅನುಮಾನ ಪಡುತ್ತಾ " ಖಂಡಿತವಾಗಿ ಮಾಡುತ್ತೇನೆ. ಆದಷ್ಟು ಬೇಗ ಮಾಡಿದರೆ ಒಳ್ಳೆಯದು " ಎಂದು ಉತ್ತರಿಸಿದಳು.

ನರಸಿಂಹನ ಬಾಯಲ್ಲಿ ತನ್ನ ನಲ್ಲೆ ಬಾಹುವನ್ನು ಚಾಚಿ ಪ್ರಮಾಣ ವಚನವನ್ನು ತೆಗೆದು ಕೊಳ್ಳಲಿದ್ದಾಳೆಂದು ಕೇಳಿ ವೈದ್ಯನು ತತ್ತರಿಸಿದನು. ತಲೆಯೇ ಓಡಲಿಲ್ಲ. ಮನಸಿನಲ್ಲಿ ಸಬಲೀನಳ ಮೃದುವಾದ ಹಸ್ತವನ್ನು ವಿಗ್ರಹದ ಕ್ರೂರವಾದ ದಂಷ್ಟ್ರಗಳು ಒತ್ತಿ ಹಿಡಿವ ದೃಶ್ಯವು ಪದೇ ಪದೇ ಕಾಣಿಸಿ ಕೊಂಡಿತು. ನಲ್ಲೆಗೆಷ್ಟು ಅವಮಾನ! ತನಗೆಷ್ಟು ಅವಮಾನ! ಕಡೆಗೆ

ಮಂತ್ರ-ಮಾಟ ಮಾಡಿಸುವವನ ಹತ್ತಿರ ಹೋಗಿ ತನ್ನ ಮನಸ್ಸನ್ನು ಬಿಚ್ಚಿ ಹೇಳಿ ಇದಕ್ಕೇನು ಉಪಾಯವೆಂದು ಕೇಳಿದನು. ಮಂತ್ರವಾದಿಯು ಗುಣಾಕಾರ ಹಾಕಿ, ಗಂಭೀರವಾಗಿ, ದೈವೀಶಕ್ತಿ ತಿಳಿಸುವುದೇನೆಂದರೆ ನೀನು ಕಡು ಬಡವನಾದ ರೈತನಂತೆ ಹರಕಲು ಹಾಗೂ ಮಲಿನವಾದ ಬಟ್ಟೆಯನ್ನು ಉಟ್ಟು ವೇಷವನ್ನು ಬದಲಾಯಿಸಿಕೊಂಡು, ರೈತನಂತೆಯೇ ಕುಡಗೋಲು, ಗುದ್ದಲಿ, ಎಲ್ಲವನ್ನೂ ಹಿಡಿದು ರೈತರು ಮುಳ್ಳು ತೆಗೆಯಲು ಇಟ್ಟುಕೊಂಡಿರುತ್ತಾರಲ್ಲಾ ಚಿವಟ ಅದನ್ನು ಮಾತ್ರ ಮರೆಯಬೇಡ...."

"ಮುಳ್ಳು ...ಚಿವಟ?"

ಮಧ್ಯದಲ್ಲಿ ಮಾತನಾಡಿದ್ದನ್ನು ಕಂಡು ಅಸಹನೆಯನ್ನು ಸೂಚಿಸಿ "ಹೌದು ಮುಳ್ಳು....ಚಿವಟ... ನಾನು ಹೇಳುತ್ತಿರುವುದನ್ನು ಕೇಳುತ್ತಿದ್ದೀಯೋ ಇಲ್ಲವೋ ?.... ಜ್ಞಾಪಕವಿರಲಿ ಮುಳ್ಳು. ಚಿವಟ ... ಹಳ್ಳಿಗಮಾರನ ಹಾಗೆ ಸಿಂಹ ಶಿಲೆ ಹೋಗುವ ರಸ್ತೆಯು ಪೈಯಾ ಓಸ್ಸಿಯನ್ನು ಸೇರುತ್ತದಲ್ಲಾ ಅಲ್ಲಿ ನಿಂತುಕೊಂಡಿರು. ಸಬಲೀನ ಮತ್ತು ಅಪ್ಪರು ಅದೇ ಮಾರ್ಗವಾಗಿ ಹೋಗುತ್ತಾರೆ. ಚೌಕವನ್ನು ಸೇರಿದಂತೆ ನಿನ್ನ ಪ್ರಿಯತಮೆಯು ಮುಳ್ಳನ್ನು ಚುಚ್ಚಿಕೊಂಡಂತೆ ನಟಿಸಬೇಕು. ನೀನು ತಕ್ಷಣ ಮುನ್ನುಗ್ಗಿ ಅವಳ ಕಾಲನ್ನು ಹಿಡಿದು ಮುಳ್ಳನ್ನು ತೆಗೆಯುವಂತೆ ಕೆದಕಿ ರಕ್ತ ಬರುವಂತೆ ಮಾಡಿ ಮುಳ್ಳನ್ನು ಎಲ್ಲರಿಗೂ ತೋರಿಸು. ಸಬಲೀನಳು ಸತ್ಯಶಿಲೆಯ ಬಾಯಲ್ಲಿ ಕೈಯನ್ನು ಇಟ್ಟು ಸ್ವಲ್ಪ ಹೊತ್ತಿಗೆ ಮುಂಚೆ ನಡೆದುದನ್ನು ಪ್ರಮಾಣಮಾಡುತ್ತಾಳೆ. ಹತ್ತಿರ ಬಾ ಅವಳು ಏನು ಪ್ರಮಾಣಮಾಡಬೇಕೆಂದು ಹೇಳುತ್ತೇನೆ." ಎಂದು ಅವನ ಕಿವಿಯಲ್ಲಿ ಮೆಲ್ಲಗೆ ಹೇಳಿದನು.

ವೈದ್ಯನ ಮುಖವು ನಗುವಿನಿಂದ ಅರಳಿತು. ತಂದ ಹಣದ ಚೀಲವನ್ನು ತಂತ್ರವಾದಿಯ ಮುಂದಿಟ್ಟನು.

ಪ್ರಮಾಣ ಮಾಡುವ ವೇಳೆಯು ಹತ್ತಿರ ಸರಿದಂತೆ ಸೆಬಲೀನ ಮತ್ತು ಮನೆಯವರು ಸತ್ಯಶಿಲೆಯ ವಿಗ್ರಹವನ್ನು ದರ್ಶನಮಾಡಲು ನಡದೇ ಹೊರಟರು. ವೈದ್ಯನು ಹಿಂದಿನ ದಿನವೇ ತನ್ನ ಪ್ರೇಯಸಿಗೆ ಯಾವ ರೀತಿ ನಡೆದುಕೊಳ್ಳಬೇಕೆಂದು ಹೇಳಿಕಳುಹಿಸಿದ್ದನು. ಚೌಕವು ಸಮೀಪಿಸಿದಂತೆ ಯುವ

ತಿಯು "ಹಾ! ಮುಳ್ಳು...." ಎಂದು ಕಾಲು ಹಿಡಿದುಕೊಂಡಳು. ಹತ್ತಿರದಲ್ಲೇ ನಿಂತಿದ್ದ ಹಳ್ಳಿಗಮಾರನು ಮುನ್ನುಗ್ಗಿ ಅವಳ ಪಾದವನ್ನು ಕೈಗೆ ತೆಗೆದುಕೊಂಡು ನೋಡಿದನು. ಆವನು ಮುಳ್ಳು ತೆಗೆಯಲು ಕೆದಕಿದಾಗ ಅವಳು ಪತಿಯನ್ನು ಒರಗಿ ನಿಂತಳು. ಚಿಮಟದಿಂದ ಕೆದಕಿ ರಕ್ತ ಅಂಟು ಕೊಂಡಿದ್ದ ಮುಳ್ಳನ್ನು ಎಲ್ಲರಿಗೂ ತೋರಿಸಿದನು. ಎಲ್ಲರೂ ಮುಂದುವರಿದು ಸತ್ಯಮೂರ್ತಿಯ ವಿಗ್ರಹದೆಡೆಗೆ ಬಂದರು.

ಸೆಬಲೀನಳು ಯಾವ ರೀತಿಯ ಉದ್ವೇಗವನ್ನೂ ವ್ಯಕ್ತಪಡಿಸದೆ ಶಾಂತ ಚಿತ್ತಳಾಗಿ ಬಲಗೈಯನ್ನು ಸಿಂಹದ ಬಾಯಲ್ಲಿ ಒಳಗಿನವರೆಗೂ ಚಾಚಿ, ಗಂಭೀರವಾಗಿ "ನಾನು ಪರಿಶುದ್ಧಳೆಂಬುದಕ್ಕೆ ನೀನೇ ಸಾಕ್ಷಿ. ನಾನು ಹೇಳುವುದೆಲ್ಲಾ ಸತ್ಯ. ಸ್ಕಿಪಿಯೋ ಟೊರ್ಕ್ವಟಸನನ್ನು ವಿವಾಹವಾದ ಘಳಿಗೆ ಯಿಂದ ಇವತ್ತಿನವರೆಗೆ, ಈಗ ಸ್ವಲ್ಪ ಹೊತ್ತಿಗೆ ಮುಂಚೆ ಕಾಲಿನಲ್ಲಿ ಮುಳ್ಳನ್ನು ತೆಗೆದವನಲ್ಲದೆ ಬೇರೆ ಯಾವ ಪರಪುರುಷನನ್ನು ಸ್ಪರ್ಶಿಸಿಲ್ಲ" ಎಂದಳು.

ನರಸಿಂಹನ ತೆರೆದ ಬಾಯಿ ತೆರದಂತೆಯೇ ಇತ್ತು. ಸೆಬಲೀನಳ ಮೇಲೆ ದೂರು ಹೇಳಿದ ಬಂಧುಬಳಗದವರು ತಾವು ಮಾಡಿದುದು ಅನ್ಯಾಯವೆಂದು ನಾಚಿಕೆಯಿಂದ ತಲೆತಗ್ಗಿಸಿ ನಿಂತರು.

ಟೊರ್ಕ್ವಟಸ್ಸನು ತನ್ನ ಹೆಂಡತಿಯು ಎಷ್ಟು ಪರಿಶುದ್ಧಳು, ಅನ್ಯಾಯ ವಾಗಿ ಅಪವಾದ ಹೊರಸಿದರೆಂದು ನೆರೆದವರನ್ನು ಹೆಮ್ಮೆ ಮತ್ತು ತಿರಸ್ಕಾರ ದಿಂದ ನೋಡಿದನು. ಯಾರೊಬ್ಬರೂ ಬಾಯಿ ಬಿಡಲಿಲ್ಲ.

ಸತ್ಯ ಪರೀಕ್ಷೆಯಾದ ಮೇಲೆ ಸಬಲೀನಳಿಗೆ ದಿನಬೆಳಗಾದರೆ ಏನಾದ ರೊಂದು ಬೇನೆಯು ಇರುತ್ತಲೇ ಇತ್ತು. ವೈದ್ಯನು ಮದ್ದು ಕೊಡಲು ಸದಾ ಹಾಜರ್!



# ದೇವತೆಗಳಿಗೆ ಯೋಗ್ಯವಾದ ಭೋಜನ

ಬರೆದವರು : **ಲಾ ಫಾರ್ಗ ಟ್ರೈ**

ಡ್ಯೂಕ್ ಡಿ ರೆನಾರ್ಡ್‌ನನ್ನು ಕೈಹಿಡಿದ ಹೆಂಡತಿಯು ರೂಪವತಿ, ಸುಗುಣವತಿ, ಶೀಲವಂತೆ. ಮದುವೆಯಾದ ಹೊಸದರಲ್ಲಿ ಕೆಲಕಾಲ ರೆನಾರ್ಡ್ ಹೆಂಡತಿಯನ್ನು ಅತಿಯಾಗಿ ಪ್ರೀತಿಸುತ್ತಿದ್ದನು. ತೃಪ್ತನೂ ಆಗಿದ್ದನು. ಮೊದಲಿನಂತೆ ಬೇರೆ ಹೆಣ್ಣುಗಳನ್ನು ಹುಡುಕಿಕೊಂಡು ಹೋಗುತ್ತಿರಲಿಲ್ಲ. ಮನಸ್ಸೂ ಬರಲಿಲ್ಲ. ಸುಖ-ಸಂತೋಷದಿಂದ ಕಾಲವನ್ನು ಕಳೆದನು. ದಿನಗಳುರುಳಿದಂತೆ ಕಾವು ಕಡಿಮೆಯಾಯಿತು. ಹಳೆಯ ದಾರಿಯನ್ನೇ ಹಿಡಿದನು. ಬೇರೆ ಬೇರೆ ಸ್ತ್ರೀಯರೊಡನೆ ಸಂಗ ಬೆಳೆಸಲು ಮನಸ್ಸುತವಕಗೊಂಡಿತು.

ಡ್ಯೂಕನ ಹತ್ತಿರವಿದ್ದ ಸೈನ್ಯ ಪಡೆಯಲ್ಲಿ ಜೀನ್ ಕೂಡ ಒಬ್ಬ ಯೋಧ. ಡ್ಯೂಕನೂ ಅವನೂ ಹೆಚ್ಚು ಕಡಿಮೆ ಸಮ ವಯಸ್ಕರರು. ಚಿಕ್ಕವಯಸ್ಸಿನಿಂದ ಡ್ಯೂಕನ ಬಲಗೈಯಂತೆ ಸೇವೆಮಾಡುತ್ತಿದ್ದನು. ಯಜಮಾನನು ಮದುವೆಯಾದ ಸ್ವಲ್ಪ ದಿನಗಳಲ್ಲಿ ಅವನೂ ಸುಂದರಳಾದ ಹಳ್ಳಿಯ ಹುಡುಗಿಯೊಬ್ಬಳನ್ನು ಮದುವೆಯಾದನು. ಡ್ಯೂ ಕ ಗೆ ಬೇರೆ ಹೆಣ್ಣುಗಳನ್ನು ನೋಡುವ ಚಟವು ಹತ್ತಿದ ಮೇಲೆ, ತನ್ನ ಹೆಂಡತಿಯ ಮೇಲೂ ಕಣ್ಣಿಟ್ಟದ್ದಾನೆಂದು ತಿಳಿದು ಕೊಳ್ಳಲು ಹೆಚ್ಚು ಕಾಲ ಬೇಕಾಗಲಿಲ್ಲ. ಮೊದಲಿನಿಂದ ಡ್ಯೂಕನ ಬುದ್ಧಿ ಅವನಿಗೆ ಗೊತ್ತು. ಡ್ಯೂಕ್‌ನು ಕಾರಣವಿಲ್ಲದೆ ಜೀನನ ಮೇಲೆ ಹಾರಾಡುತ್ತಿದ್ದನು. ಜೀನನಿಗೆ ಒಂದೇ ಯೋಚನೆ. ಯಜಮಾನ ಕೋಪಮಾಡಿ ಕೊಳ್ಳದ ಹಾಗೆ ಯಾವ ರೀತಿ ತಿಳಿಸುವುದೂಂತ.

ಡ್ಯೂಕನು ಒಂದು ದಿವಸ ಮಧ್ಯಾಹ್ನ ನೆಟ್ಟಗೆ ಜೀನನ ಮನೆಗೆ ಹೂವನ್ನು ತೆಗೆದುಕೊಂಡು ಹೋಗಿ ಅವನ ಹೆಂಡತಿಗೆ ಕೊಟ್ಟನು. ಕೊಡುವಾಗ ಕೈಯನ್ನು ಸ್ವಲ್ಪ ಹೆಚ್ಚು ಕಾಲವೇ ಹಿಚಿಕಿದನು. ಅವಳ ರೂಪವನ್ನು ಕಂಡು

ಮನಸೋತು ಮೆಚ್ಚುಗೆಯನ್ನು ಸೂಚಿಸುವಂತೆ ನೋಡಿದಾಗ ಅವಳು ಲಜ್ಜೆಯಿಂದ ಮುಖವನ್ನು ತಗ್ಗಿಸಲಿಲ್ಲ. ಮುಗುಳ್ನಗೆ ನಕ್ಕಳು. ಇನ್ನೊಂದು ದಿವಸ ದೇಹಾದ್ಯಂತ ಕಾಮುಕತೆಯಿಂದ ಅವಲೋಕಿಸಿ, ಡ್ಯೂಕನು ಹೂವನ್ನು ಲಂಗದ ಮೇಲೆ ಎದೆಯ ಹತ್ತಿರ ಸಿಕ್ಕಿಸಿದಾಗ ಅವಳ ಮುಖದಲ್ಲಿ ನಗು ಇದ್ದುದನ್ನು ಕಂಡು, ಜೇಕ್ ಹೂ ಸಿಕ್ಕಿಸುವಾಗ ಅಷ್ಟು ಹೊತ್ತು ತೆಗೆದು ಕೊಳ್ಳಬಾರದಾಗಿತ್ತು ಎಂದು ಕೊಂಡನು.

ಜೇಕನಿಗೆ ನಿದ್ದೆಯೇ ಬರಲಿಲ್ಲ. ಮನಸ್ಸಿನಲ್ಲಿ ಅಶಾಂತಿಯಿದ್ದಿತು. ಡ್ಯೂಕನ ಹತ್ತಿರ ನೇರವಾಗಿ ಮಾತನಾಡಿದರೆ ಒಳ್ಳೆಯದೆಂದು ನಿರ್ಧಾರಕ್ಕೆ ಬಂದನು.

ಇಬ್ಬರೂ ಒಂದು ದಿವಸ ಕುದುರೆಯ ಮೇಲೆ ಕುಳಿತು ಸುತ್ತಾಡಲು ಜೇಕ್ ಹುಜೂರ್ ! ತಾವೇನೂ ತಿಳಿದು ಕೊಳ್ಳದಿದ್ದರೆ ನನ್ನದೊಂದು ಅರಿಕೆ. ನಿಮಗೆ ದೇವರು ಯಾವುದಕ್ಕೂ ಕಡಿಮೆಮಾಡಿಲ್ಲ. ಅರಮನೆಯಂಥ ಈ ಕ್ಯಾಸಲ್, (ವಿಶಾಲಸೌಧ) ದೇವಲೋಕದ ರಂಭೆಯನ್ನು ಹೋಲುವ ರೂಪವತಿಯಾದ ಹೆಂಡತಿ, ಭೂಮಿ, ಕಾಣಿ, ಸಂಪತ್ತು ಸಿಬ್ಬಂದಿ ಎಲ್ಲವೂ ಇವೆ. ಇಷ್ಟಿದ್ದೂ ಬಡವನಾದ ನನ್ನ ಹೆಂಡತಿಯ ಮೇಲೆ ನಿಮಗೆ ಕಣ್ಣು ಬಿದ್ದಿದೆ. ನನಗೇನೋ ಇದು ಸರಿ ತೋರುತ್ತಿಲ್ಲ. ನನ್ನ ಹೆಂಡತಿಯು ನಿಮ್ಮಾಕೆಗಿಂತ ಹೆಚ್ಚಿನ ಸಂತೋಷವನ್ನು ಕೊಡಲಾರಳೆಂದು ನನ್ನ ಅಭಿಪ್ರಾಯ. ಅಲ್ಲದೆ ನಾವಾರು, ನೀವಾರು ? ನಮ್ಮ ಅಂತಸ್ತೇನು, ನಿಮ್ಮ ಅಂತಸ್ತೇನು ? ನೀವು ಸತ್ಕುಲ ಪ್ರಸೂತರು. ನಾವು ಕೀಳು ಜನರು. ನಮ್ಮಂಥವರ ಸಹವಾಸ ಮಾಡಿದರೆ ನಿಮ್ಮ ಸ್ಥಾನಮಾನಕ್ಕೆ ಅಗೌರವ. ಅಲ್ಲದೆ ನನ್ನ ಹೆಂಡತಿಯು ನನ್ನ ಜೀವನದ ಗೆಳತಿ. ಸರ್ವಸ್ವ ಎಂದು ತಿಳಿದು ಕೊಂಡಿದ್ದೇನೆ. ನಿಮ್ಮ ಹೆಂಡತಿಯಷ್ಟು ರೂಪವತಿಯಾದ ಹೆಂಗಸು ಈ ಪ್ರಾಂತ್ಯದಲ್ಲೇ ಇಲ್ಲವೆಂದು ನೋಡಿದವರೆಲ್ಲಾ ಹೇಳುತ್ತಾರೆ. ಇದಕ್ಕಿಂತ ನಿಮಗಿನ್ನೇನು ಬೇಕು? ರತ್ನದಂತಿರುವ ನಿಮ್ಮ ಹೆಂಡತಿಯನ್ನೇ ಮದುವೆಯಾಗ ಬೇಕೆಂದು ಅನೇಕರು ಹಗಲಿರುಳು ಕನಸು ಕಾಣುತ್ತಾರೆ. ಈ ದೇಶದ ಮಹಾರಾಜರು ಕೂಡ ಇಂತಹ ರೂಪವತಿಯನ್ನು ನೋಡಿದರೆ ತಮ್ಮ ರಾಣಿಯನ್ನು ಬದಲಾಯಿಸಿ

ಕೊಳ್ಳಬಲ್ಲನು ಎಂದರೆ ಅತಿಶಯೋಕ್ತಿಯಾಗಲಾರದು. ಆದ್ದರಿಂದ ದಯವಿಟ್ಟು ನನ್ನ ಹೆಂಡತಿಯ ಗೋಜಿಗೆ ಬರಬೇಡಿ ಎಂದನು.

ಯೋಧನು ಹೇಳಿದ್ದೆಲ್ಲವನ್ನೂ ಶಾಂತಚಿತ್ತನಾಗಿ ಡ್ಯೂಕನು ಕೇಳುತ್ತಾ ಮೌನವಾಗಿ ಮುಂದುವರಿದನು. ಜೀನನ ಮಾತುಗಳಿಂದ ಕುಪಿತನಾಗಲಿಲ್ಲ. ಇಬ್ಬರೂ ಸುತ್ತಾಡಿ ಹಿಂತಿರುಗಿದರು. ಡ್ಯೂಕನು ಕೋಪಗೊಳ್ಳದೆ ಇದ್ದುದನ್ನು ನೋಡಿ ಜೀನಿನ ಮನಸ್ಸಿಗೆ ಸಮಾಧಾನವಾಯಿತು. ಹರ್ಷವೂ ಆಯಿತು.

ಸಾಯಂಕಾಲ ಡ್ಯೂಕ್ ದೊಡ್ಡ ಪಾತ್ರೆಯಲ್ಲಿ ಪೆಟೆ ಡಿ ಫಯ್ ಗ್ರಾ (Pate de fore gras) ತಿಂಡಿಯನ್ನು ಜೀನನ ಮನೆಗೆ ಕಳುಹಿಸಿದನು. ತಿಂಡಿಯನ್ನು ತಂದ ಆಳು, ಯಜಮಾನರು ನಿಮಗೆ ಈ ತಿಂಡಿಯನ್ನು ಕಳುಹಿಸಿದ್ದಾರೆ. ಪ್ರತಿನಿತ್ಯ ಈ ತಿಂಡಿಯನ್ನಲ್ಲದೆ ಬೇರೆ ಯಾವುದನ್ನೂ ತಿನ್ನಕೂಡದೆಂದು ಪ್ರತಿಜ್ಞೆ ಮಾಡಬೇಕೆಂದು ಕೇಳಿಕೊಂಡಿದ್ದಾರೆ” ಎಂದನು. ಘಮಘಮನೆ ವಾಸನೆ ಬರುತ್ತಿದ್ದ ತಿಂಡಿಯನ್ನು ನೋಡಿ ಡ್ಯೂಕ್ ತನ್ನ ಮಾತುಗಳನ್ನು ಕೇಳಿ ಸಂತುಷ್ಟರಾಗಿದ್ದಾರೆಂದು ಬಗೆದನು. ಜೀನಿಗೆ ಈ ತಿಂಡಿ ಎಂದರೆ ಬಹಳ ಇಷ್ಟ. ಡ್ಯೂಕಿಗೂ ಹಾಗೆಂದು ಗೊತ್ತಿತ್ತು. ರುಚಿಯಾಗಿ ಮಾಡಿದ್ದ ತಿಂಡಿಯನ್ನು ಕಂಠ ಪೂರ್ತಿ ತಿಂದು ತೇಗಿದನು. ಹೆಂಡತಿಯನ್ನು ಇನ್ನು ಮೇಲೆ ಕಾಡುವುದಿಲ್ಲವಲ್ಲ! ಎಂದು ಮನಸ್ಸಿಗೆ ಒಂದು ರೀತಿ ಸಮಾಧಾನ. ಅಂದು ರಾತ್ರಿ ನಿರಾಲೋಚನನಾಗಿ ನಿದ್ರೆ ಮಾಡಿದನು. ಮಾರನೆಯ ದಿವಸ ಸಾಯಂಕಾಲವೂ ಆಳು ಅದೇ ತಿಂಡಿಯನ್ನು ತಂದಿಟ್ಟನು. ಅಂದೂ ತಿಂಡಿಯು ನಾಲಿಗೆಗೆ ರುಚಿಯಾಗಿಯೇ ಇತ್ತು. ನಾಲ್ಕು ದಿನಗಳು ರುಳಿದವು. ವಾರ ಕಳೆಯಿತು. ಅದೇ ತಿಂಡಿ, ಅದೇ ವಾಸನೆ. ಮನೆಗೆ ತಿಂಡಿ ತರುತ್ತಿದ್ದಂತೆ ಹಸಿವೇ ಮುಚ್ಚಿ ಹೋಗುತ್ತಿತ್ತು. ಹೊಟ್ಟೆ ತೊಳಸಿಕೊಂಡು ಬರುತ್ತಿತ್ತು. ಇದಕ್ಕೆ ಬದಲು ಹಳಸಿದ ರೊಟ್ಟಿಯು ಎಷ್ಟೋ ಮೇಲು ಎಂದು ಹಂಬಲಿಸಿದನು. ರಾತ್ರಿ ಕಣ್ಣು ಮುಚ್ಚಿದರೆ ರೊಟ್ಟಿಯ ಕನಸು. ಯಜಮಾನನಿಗೆ ನಿತ್ಯ ಪೆಟೆ ಡಿ ಫಾಯ್ ಗ್ರಾ ವನ್ನೇ ತಿನ್ನುವುದಾಗಿ ಮಾತು ಕೊಟ್ಟಿದ್ದನು. ಅದನ್ನು ಹಿಂದಕ್ಕೆ ತೆಗೆದುಕೊಳ್ಳುವುದು ಹೇಗೆ? ಅಕ್ಕ ಪಕ್ಕದಲ್ಲಿದ್ದ ಸ್ನೇಹಿತರುಗಳನ್ನು ರೊಟ್ಟಿಯನ್ನು ಕೊಡಿರೆಂದು ಕೇಳಿಕೊಂಡನು. ಡ್ಯೂಕ್ ಮತ್ತು

ಜೀನನಿಗೆ ಆಗಿದ್ದ ಕರಾರು ಗೊತ್ತಿತ್ತು. ಕೊಟ್ಟರೆ ಯಜಮಾನನ ಆಗ್ರಹಕ್ಕೆ ಪಾತ್ರರಾಗಬೇಕಾಗುತ್ತದೆಂದು ಹೆದರಿ ನಿರಾಕರಿಸಿದರು. ಒಂದು ದಿವಸ ತಡಿಯಲಿಕ್ಕಾಗದೆ ತಿಂಡಿಯನ್ನು ತಂದಿಟ್ಟ ಆಳನ್ನೇ "ಈ ತಿಂಡಿ ನೀನು ತೆಗೆದುಕೊಂಡು ಹೋಗು. ಇದಕ್ಕೆ ಬದಲಾಗಿ ನಿನಗೆ ಯಜಮಾನರು ಕೊಡುವ ಒಣಕಲು ರೊಟ್ಟಿಯನ್ನು ನನಗೆ ಕೊಡು" ಎಂದು ಹೇಳಿದನು. ಆಳಿಗೂ ಈ ವಿಚಾರ ತಿಳಿದಿತ್ತು. ಆಶ್ಚರ್ಯದಿಂದ ಏನು ಸ್ವಾಮಿ ಹೀಗೆ ಕೇಳುತ್ತೀರಿ! ಈ ತಿಂಡಿ ಎಷ್ಟು ಸೊಗಸಾಗಿದೆ. ನಿತ್ಯ ಈ ತಿಂಡಿ ಸಿಗುವವರು ಪುಣ್ಯ ಮಾಡಿರಬೇಕು. ಯಜಮಾನರು ಎಷ್ಟು ಒಳ್ಳೆಯವರು. ಅವರು ದಯಪಾಲಿಸಿ ಕಳುಹಿಸುವುದನ್ನು ಬೇಡವೆಂದು ಹೇಳುವುದನ್ನು ನೋಡಿದರೆ ನನಗೆ ಆಶ್ಚರ್ಯವಾಗುತ್ತಿದೆ'' ಎಂದನು.

"ಇದು ನನಗೆ ಖಂಡಿತ ಬೇಡ. ಬೇಜಾರಾಗಿದೆ. ಇದನ್ನು ನೋಡುತ್ತಿದ್ದ ಹಾಗೆ ಹೊಟ್ಟೆ ತೊಳಸಿಕೊಂಡು ವಾಂತಿ ಬರುವ ಹಾಗೆ ಆಗುತ್ತದೆ. ದಯಿವಿಟ್ಟು ನಿನ್ನ ಒಣಕಲು ರೊಟ್ಟಿಯನ್ನೇ ನನಗೆ ಕೊಡು ಸಾಕು. ದಮ್ಮಯ್ಯ ಇದನ್ನು ನನ್ನ ಎದುರಿಗೆ ಇಡಬೇಡ. ನಾನು ಬೇಡಾಂದರೆ ಡ್ಯೂಕರಿಗೆ ಬಹುಶಃ ಕೋಪ ಬರುವುದಿಲ್ಲ. ನಾನು ಸತ್ತು ಸ್ವರ್ಗಕ್ಕೆ ಹೋದಲ್ಲಿ ಅಲ್ಲಿ ಕೂಡ ಇದೇ ಪೆಟಿ ಡಿ ಫಾಯ್ ಗ್ರಾ ತಿನ್ನಲು ಕೊಟ್ಟಾಗ ನಾನು ನಿರಾಕರಿಸಿದಲ್ಲಿ ಕಾರಣವೇನಿರಬಹುದೆಂದು ತಿಳಿದು ಸೈಂಟ್ (ಸಂತ) ಗಳೂ ಕೂಡ ಕ್ಷಮಿಸುತ್ತಾರೆಂದು ನಂಬಿದ್ದೇನೆ" ಎಂದನು.

ಜೀನನು ಹೇಳುತ್ತಿರುವಾಗ, ಅಕಸ್ಮಾತ್ತಾಗಿ ಅತ್ತ ಕಡೆಯೇ ಕುದುರೆಯ ಮೇಲೆ ಹೋಗುತ್ತಿದ್ದ ಡ್ಯೂಕಿಗೂ ಈ ಮಾತುಗಳು ಕೇಳಿದವು, ಅವನು ಕುದುರೆಯನ್ನು ಹಿಂತಿರುಗಿಸಿ ಜೀನನ ಮನೆಯನ್ನು ಪ್ರವೇಶಿಸಿ, ಆಳನ್ನು ಹೊರಗೆ ಹೋಗೆಂದು ಕಣ್ಣಲ್ಲೇ ಸೂಚಿಸಿ,

''ಏನಯ್ಯಾ! ಹೇಗಿದ್ದಿ ? ನಾನು ಕಳುಹಿಸಿದ ತಿಂಡಿಯನ್ನು ತಿನ್ನಲು ಸಾಧ್ಯವಿಲ್ಲವೆಂದು ಹೇಳುತ್ತಿದ್ದೀಯಲ್ಲಾ ! ನ್ಯಾಯವಾ ? ಅನೇಕರಿಗೆ ಈ ತಿಂಡಿ ಸಿಕ್ಕುವುದೇ ದುರ್ಲಭ. ತಿನ್ನಬೇಕೂಂತ ಹಂಬಲಿಸುತ್ತಾರೆ. ಇಂತಹ ಆಹಾರಕ್ಕೆ ಬದಲು ಒಣಕಲು ರೊಟ್ಟಿಯನ್ನು ಕೇಳುತ್ತಿದ್ದೀಯಲ್ಲಾ ! ನಾಲಿ

ಗೆಗೆ ಈ ತಿಂಡಿ ಬದಲು ಬೇರೆ ತಿನ್ನಬೇಕೂಂತ ಅನ್ನಿಸುತ್ತಿದೆಯಾ? ಅಂದರೆ ಉತ್ತಮವಾದ, ರಸವತ್ತಾದ ತಿಂಡಿಗಿಂತ ನಿನಗೆ ಆಳು ತಿನ್ನುವ ಒಣಕಲು ರೊಟ್ಟಿಯೇ ಪ್ರಿಯವಾಗಿ ಕಾಣಿಸುತ್ತಿದೆಯಲ್ಲವೇ?'' ಎಂದು ಕೇಳಿದನು. ಡ್ಯೂಕನ ಮಾತುಗಳು ಜೀನನ ಕಿವಿಯಲ್ಲಿ ಮಾರ್ದನಿಯನ್ನು ಕೊಟ್ಟಿತು.

ಡ್ಯೂಕನು ಸ್ವಲ್ಪ ಹೊತ್ತು ಮೌನವಾಗಿದ್ದು ನಗುತ್ತಾ ''ಬದಲಾಯಿಸಿ ಕೊಳ್ಳಬೇಕೂಂತ ನಿನಗೆ ಹೆಚ್ಚು ದಿನ ಬೇಕಾಗಲಿಲ್ಲ ತಾನೆ! ಹೀಗಿರುವಾಗ ನಿನ್ನ ಹೆಂಡತಿಯನ್ನು ನಾನು ಬಯಸಿದರೆ ಅದರಲ್ಲಿ ತಪ್ಪೇನು. ಈಗ ನಿನಗೆ ಯಾವ ತಿಂಡಿಯಾದರೂ ಸರಿ ಆ ತಿಂಡಿಯು ಮಾತ್ರ ಬೇಡಾಂತ ಅನ್ನಿಸಿದೆಯೋ ಇಲ್ಲವೋ? ಈ ರೀತಿ ಬಯಸುವುದು ಸರಿಯಾ? ನ್ಯಾಯವಾ? ಆಳು ತಿನ್ನುವ ಒಣಗಿದ ರೊಟ್ಟಿ ಬೇಕಾದರೆ ತಿನ್ನು ಅಭ್ಯಂತರವಿಲ್ಲ. ನಾನು ನಿನ್ನ ಹೆಂಡತಿಯನ್ನು ಪ್ರೀತಿಸಲು ಮಾತ್ರ ಅನುಮತಿಯನ್ನು ಕೊಡು'' ಎಂದು ಕೇಳಿದನು

ಜೀನನು ತಲೆಯನ್ನು ತಗ್ಗಿಸಿ ಸಮ್ಮತಿಯನ್ನು ಸೂಚಿಸಿದನು. ತಲೆಯಲ್ಲಿ ಒಂದು ಯೋಚನೆ ಹೊಳೆಯಿತು. ಆಗರ್ಭ ಶ್ರೀಮಂತ ಡ್ಯೂಕ್ ಕೀಳು ದರ್ಜೆಯ ಹೆಂಗಸನ್ನು ಬಯಸುತ್ತಿರುವಾಗ, ತಾನು ಉತ್ತಮ ದರ್ಜೆಯ ಹೆಂಗಸನ್ನು ಕಣ್ಣೆತ್ತಿ ನೋಡುವುದರಲ್ಲಿ ತಪ್ಪೇನಿಲ್ಲ ಎಂದೆನಿಸಿತು.



# ಮೊಲಕ್ಕೆ ಬದಲು ಮನದನ್ನೆ !

## ' ಗೆಸಾವ್ಪುಟೊರ್ ' ನಿಂದ

ಸುಗ್ಗಿಯ ಕಾಲ. ಒಂದು ದಿವಸ ಶ್ರೀಮಂತ ಮನೆತನದ ಯೋಧನೊಬ್ಬನು ತನ್ನ ಎರಡು ಬೇಟೆಯ ನಾಯಿಗಳು ಮತ್ತು ಗಿಡಗದೊಡನೆ ಬೇಟೆಯಾಡಲು ಹೊರಟನು. ಸ್ವಲ್ಪ ದೂರ ಹೋಗುತ್ತಿದ್ದ ಹಾಗೆ ಮೊಲವೊಂದು ಕಾಣಿಸಿಕೊಂಡಿತು. ನಾಯಿಗಳಿಗೆ ಹಾಕಿದ್ದ ಸರಪಳಿಯನ್ನು ಬಿಚ್ಚಿದಂತೆ, ಅವುಗಳು ಮೊಲವನ್ನು ಅಟ್ಟಿಸಿಕೊಂಡು ಹೋದವು. ಮೊಲವು ಗದ್ದೆಯ ಬದಿಯಲ್ಲಿ ಕತ್ತರಿಸಿಹಾಕಿದ್ದ ಪೈರಿನ ರಾಶಿಯೊಳಗಡೆ ತೂರಿತು. ಅಲ್ಲೇ ಗದ್ದೆಯಲ್ಲಿ ಪೈರು ಕತ್ತರಿಸುತ್ತಿದ್ದ ರೈತನೊಬ್ಬನು ಅದನ್ನು ಹಿಡಿದನು. ಯೋಧನು ಹತ್ತಿರ ಬಂದು " ಮೊಲವನ್ನು ಕೊಡು " ಎಂದು ಕೇಳಿದನು. ರೈತನು ಮರುತ್ತರ ಕೊಡದೆ ಮೊಲವನ್ನು ಅವನ ಕೈಲಿಟ್ಟನು.

ಮೊಲವು ಮುದ್ದಾಗಿತ್ತು. ಮೃದುವಾದ ಕೂದಲಿನ ದೇಹ. ಮೊಲವೇನೋ ಸಿಕ್ಕಿತು. ಇದನ್ನೇನು ಮಾಡುವುದೆಂದು ಯೋಧನಿಗೆ ಯೋಚನೆಯಾಯಿತು. ಬಹು ದಿನಗಳಿಂದ ಶ್ರೀಮಂತ ಕನ್ಯೆಯೊಬ್ಬಳು ಇವನೆಷ್ಟು ಪ್ರಯತ್ನಪಟ್ಟರೂ ಕಣ್ಣೆತ್ತಿ ಕೂಡ ನೋಡುತ್ತಿರಲಿಲ್ಲ. ಅವಳಿಗೆ ಈ ಮೊಲವನ್ನು ಕೊಟ್ಟರೆ ಸಂತೋಷವಾಗಬಹುದು ಎಂದುಕೊಂಡನು. ಯೋಚನೆ ಹೊಳದಂತೆ ಕಂಕುಳಲ್ಲಿ ಮೊಲವನ್ನು ಇಟ್ಟುಕೊಂಡು ಕುದುರೆ ಏರಿ ಹೊರಟನು.

ಹೋಗುತ್ತಿದ್ದಂತೆ ರಸ್ತೆಯಲ್ಲಿ ಒಂದು ಹಳ್ಳಿ ಸಿಕ್ಕಿತು. ರಸ್ತೆಯ ಬದಿಯಲ್ಲಿದ್ದ ಗಾಣದ ಮನೆಯಹತ್ತಿರ ಯುವತಿಯೊಬ್ಬಳು ನಿಂತಿದ್ದಳು. ಹಳ್ಳಿಯ ಹುಡುಗಿಯ ಮನಮೋಹಕ ರೂಪವನ್ನು ನೋಡಿ ಯೋಧನು ಮುಗ್ಧನಾಗಿ ನಿಂತನು. ಮುಖದಲ್ಲಿ ನಗೆ ಮೂಡಿತು. ಆ ಕಾಲದಲ್ಲೇ ಅಷ್ಟು ಯೋಧರು ಕನ್ಯೆಯರನ್ನು ಕಂಡಾಗ ತಮ್ಮ ವಿಶೇಷ ನೆಚ್ಚಿಗೆಯನ್ನು ತಲೆಬಾಗಿ ಸೂಚಿಸು

ತ್ತಿದ್ದರು. ಯೋಧರು ತಮ್ಮ ಶಕ್ತಿ ಸಾಹಸಗಳನ್ನು ವ್ಯಕ್ತಪಡಿಸಬೇಕೆಂದು ಕನಸು ಕಾಣುತ್ತಿದ್ದ ದಿನಗಳು. ಯೋಧನೊಬ್ಬನು ತನ್ನನ್ನು ಕಂಡು ನೆಚ್ಚಿಗೆ ಸೂಚಿಸಿದ್ದನ್ನು ನೋಡಿ ಯುವತಿ ಮುಗಳ್ನಗೆ ಬೀರಿ "ಮೊಲ ಎಲ್ಲಿ ಸಿಕ್ಕಿತು? ಎಷ್ಟು ಚೆನ್ನಾಗಿದೆ ನೋಡುವುದಕ್ಕೆ! ನನ್ನ ಹತ್ತಿರವೂ ಇಂತಹದೇ ಮೊಲವು ಇದ್ದಿದ್ದರೆ! ಇದನ್ನು ಮಾರುತ್ತೀರಾ? ಬೆಲೆ ಏನು?" ಎಂದು ಕೇಳಿದಳು.

ಯೋಧನು ಉಬ್ಬಿ "ನಿನಗೆ ಅಷ್ಟು ಇಷ್ಟವಾದರೆ ತೆಗೆದುಕೊ" ಎಂದನು.

"ಬೆಲೆ ಹೇಳಲಿಲ್ಲವಲ್ಲ! ನೀವು ಕೇಳುವುದು ನನ್ನ ಹತ್ತಿರ ಇದ್ದರೆ ನಾನೇ ಭಾಗ್ಯ ಶಾಲಿ!"

ಯೋಧನು ತಡಮಾಡದೆ "ಇದಕ್ಕೆ ಬದಲಾಗಿ ನಿನ್ನ ಪ್ರೀತಿಯನ್ನು ಕೊಟ್ಟರೆ ಸಾಕು" ಎಂದು ಉತ್ತರಿಸಿದನು.

ಯುವತಿಯು ಏನೂ ಅರಿಯದವಳಂತೆ "ನನ್ನ ಪ್ರೀತಿ? ಹಾಗೆಂದರೇನು?" ಎಂದು ಹುಬ್ಬು ಗಂಟಿಕ್ಕಿ "ಯಜಮಾನರೇ! ಮನೆಯಲ್ಲಿ ಮೂರು ಪೌನ್ ಬೆಲೆ ಬಾಳುವ ಉಂಗುರ, ಹತ್ತು ಪೌನ್ ಬೆಲೆ ಬಾಳುವ ಹರಳು ಕಲ್ಲುಗಳು, ಮತ್ತು ನಮ್ಮಮ್ಮ ಕಸೂತಿ ಹಾಕಿರುವ ಕೆಂಪು ಬಿಳಿ ರಂಗಿನ ಪಟ್ಟಿ ಇದೆ. ಅದು ಎಷ್ಟು ಚನ್ನಾಗಿದೆ ಗೊತ್ತಾ? ಬೇಕಾದರೆ ಎಲ್ಲಾ ಕೊಡುತ್ತೇನೆ. ಮೊಲವನ್ನು ಕೊಡುತ್ತೀರಾ?" ಎಂದಳು.

ಯೋಧನು ಇದಾವುದೂ ಬೇಕಿಲ್ಲವೆಂದು ತಲೆಯನ್ನಲ್ಲಾಡಿಸಿ ಒಲುವ ನ್ನಿತ್ತರೆ ಸಾಕೆಂದನು.

'ಅದು ನನ್ನ ಹತ್ತಿರ ಇಲ್ಲವಲ್ಲ!' ಎಂದಳು ಯುವತಿ.

"ನಾನು ಹುಡಕಲಾ? ಖಂಡಿತ ಸಿಗತ್ತೆ!"

ಯುವತಿಯು ಅನುಮಾನಿಸಿ, ಗಟ್ಟಿಯಾಗಿನಕ್ಕು "ಹಾಗಾದರೆ ಮೊಲ ವನ್ನು ಕೊಟ್ಟು, ನನ್ನಲ್ಲಿರುವ ಪ್ರೀತಿಯನ್ನು ತೆಗೆದುಕೊಳ್ಳಿ" ಎಂದಳು.

ಯೋಧನು "ಯಾರಾದರೂ ಇದ್ದಾರೆಯಾ" ಎಂದು ಅತ್ತ ಇತ್ತ, ಕಣ್ಣು ಹರಿಸಿ ನೋಡಿದನು. ಯುವತಿಯು "ನಾವು ಮಾತನಾಡುವುದನ್ನು

ಯಾರಾದರೂ ಇದ್ದರೆ ತಾನೆ ಕೇಳಿಸಿಕೊಳ್ಳುವುದಕ್ಕೆ! ಅಮ್ಮ, ಮನೆ, ಆಳುಕಾಳುಗಳೆಲ್ಲಾ ಚರ್ಚಿಗೆ ಹೋಗಿದ್ದಾರೆ'' ಎಂದು ಆಶ್ವಾಸನೆಯುನ್ನಿತ್ತುದನ್ನು ಕೇಳಿ ಕುದರೆಯಿಂದ ಚಂಗನೆ ಕೆಳಗೆ ಧುಮುಕಿ ಗಿಡಗವನ್ನು ಕೆಳಗೆ ಬಿಟ್ಟು ಯುವತಿಯನ್ನು ಗಾಣದ ಮನೆಯೊಳಗೆ ಕರೆದುಕೊಂಡು ಹೋಗಿ, ಮೊಲವನ್ನು ಅವಳ ಸ್ತನಗಳ ಮೇಲೆ ಸ್ವಲ್ಪ ಗಟ್ಟಿಯಾಗಿ ಅದುಮಿ ಇಟ್ಟನು. ಯುವತಿಯು ಯೋಧನನ್ನು ತುಂಬುಗಣ್ಣಿನಿಂದ ನೋಡಿ ನಕ್ಕು ''ಈಗ ನನ್ನಲ್ಲಿರುವ ಪ್ರೇಮವನ್ನು ತೆಗೆದು ಕೊಳ್ಳಿ" ಎಂದಳು.

ಯುವಕನು ಅವಳ ಮಾಟವಾದ ಕೆಂದುಟಿಗಳನ್ನು ಮುತ್ತಿಟ್ಟು ಮೃದುವಾದ ಕಪೋಲಗಳನ್ನು ಸವರಿ ತನಗೆ ಸೇರಬೇಕಾದ ಪ್ರೇಮವನ್ನು ಹುಡುಕಲುಪಕ್ರಮಿಸಿದನು. ಪ್ರೀತಿಯನ್ನು ಹುಡುಕಲು ಹೆಚ್ಚು ಕಾಲ ಬೇಕಾಗಲಿಲ್ಲ. ಯೋಧನು ಮೇಲಕ್ಕೆದ್ದಂತೆ, ಯುವತಿಯು ಕಣ್ಣುಗಳರಳಿಸಿ, ''ಯಜಮಾನರೇ! ಇನ್ನೊಂದು ಸಲ ಸರಿಯಾಗಿ ಹುಡುಕೀಂದ್ರೆ. ಹುಡುಕುವುದಕ್ಕೆ ಮುಂಚೆ ನೀವು ಸುಮ್ಮನೆ ಹೋಗುವುದು ನನಗೇನೋ ಸರಿಯಾಗಿ ತೋರುವುದಿಲ್ಲ. ಇಷ್ಟು ಸ್ವಲ್ಪ ಹೊತ್ತಿನಲ್ಲಿ ಹುಡುಕಿದ ಪ್ರೀತಿ, ಸಿಕ್ಕಿತೂಂತ ಹೇಗೆ ಹೇಳುವುದಕ್ಕಾಗುತ್ತದೆ? ಇನ್ನೂ ಸ್ವಲ್ಪ ನಿಧಾನವಾಗಿಯೇ ಹುಡುಕಿ. ಮೊಲಕ್ಕೆ ಬದಲು ಪ್ರೀತಿ ಬೇಕೂಂತ ತಾನೆ ನೀವು ಕೇಳಿದ್ದು. ಸುಮ್ಮನೆ ಬರಿಯ ಕೈಲಿ ನೀವು ಹೋದರೆ ಅನ್ಯಾಯ ಮಾಡಿದಂತಾಗುತ್ತದೆ" ಎಂದಳು.

ಯೋಧನು ಅವಳು ಸೂಚಿಸಿದ ರೀತಿ ನಡೆದುಕೊಂಡನು. ಯುವತಿಯು, ಯೋಧನು ಕುದುರೆಯನ್ನು ಏರುವುದನ್ನೇ ನೋಡುತ್ತಾ " ಯಜಮಾನರೆ! ನೀವು ಏನೂ ತೆಗೆದುಕೊಂಡು ಹೋಗುತ್ತಿಲ್ಲನಲ್ಲ! ಪ್ರೀತಿಯನ್ನು ತೆಗೆದುಕೊಂಡು ಹೋಗುತ್ತಿಲ್ಲವಲ್ಲ! ಪ್ರೀತಿಯನ್ನು ತೆಗೆದುಕೊಂಡು ಹೋಗಿ' ಎಂದಳು. ಯೋಧನು ನಗುತ್ತಾ ಕುದುರೆಯನ್ನು ಓಡಿಸಿಕೊಂಡು ಹೋದನು.

ತಾಯಿಯು ಹಿಂತಿರುಗಿ ಬಂದಾಗ ಮಗಳು ಮೊಲವನ್ನು ಮುದ್ದಿಸುತ್ತಾ ಕುಳಿತಿದ್ದಳು. ತಾಯಿಯನ್ನು ಕತ್ತೆತ್ತಿ ನೋಡಿ '' ನೋಡಮ್ಮಾ! ಎಷ್ಟು ಚೆನ್ನಾಗಿದೆ ಮೊಲ " ಎಂದಳು.

"ಎಲ್ಲಿತ್ತೀ ಇದು ? ಯಾರು ಕೊಟ್ಟರು" ಎಂದು ಕೇಳಿದಳು ತಾಯಿ.

ಮಗಳು ಉತ್ಸಾಹ, ಸಂತೋಷದಿಂದ ನಡೆದುದೆಲ್ಲವನ್ನೂ ವಿವರಿಸಿದಳು. ತಾಯಿಯು ಕಿಡಿ ಕಿಡಿಯಾದಳು. ಮಗಳ ಜಡೆಯನ್ನು ಹಿಡಿದೆಳೆದು ಬೆನ್ನು ಮೇಲೆ ಗುದ್ದಿ ಕೆನ್ನೆಯನ್ನು ಕೆಂಪಗಾಗುವಂತೆ ಗಟ್ಟಿಯಾಗಿ ಜಿಗಟಿದಳು. ಮಗಳಿಗೆ ತಾಯಿಯು ಹೀಗೇಕೆ ಮಾಡುತ್ತಿದ್ದಾಳೆಂದು ಅರ್ಥವಾಗಲಿಲ್ಲ. ಆಶ್ಚರ್ಯವಾಯಿತು. ಪೆಟ್ಟಿನ ನೋವಿಗೂ ಹೆಚ್ಚಾಗಿ ತನ್ನ ಪ್ರೀತಿಯನ್ನು ಕಳೆದುಕೊಂಡಿದ್ದಕ್ಕಾಗಿ ಪರಿತಪಿಸಿ ಬಿಕ್ಕಿ ಬಿಕ್ಕಿ ಅತ್ತಳು. ಯೋಧನು ಪ್ರೀತಿಯನ್ನು ತನ್ನೊಟ್ಟಿಗೆ ತೆಗೆದುಕೊಂಡು ಹೋಗಿದ್ದನು.

ಪ್ರತಿನಿತ್ಯ ಯುವತಿಯು ಯೋಧನು ಹಿಂತಿರುಗಿ ಬರಬಹುದೆಂದು ದಾರಿ ಕಾಯುತ್ತಾ ನಿಂತಳು. ಮೂರನೆಯ ದಿವಸ ದೂರದಲ್ಲಿ ಕುದುರೆಯ ಮೇಲೆ ಕುಳಿತು ಯೋಧನು ಬರುತ್ತಿರುವುದನ್ನು ನೋಡಿ ಉತ್ಸಾಹದಿಂದ ಕೈಬೀಸಿ ಕರೆದಳು. ಯೋಧನು ಹತ್ತಿರ ಬರುತ್ತಲೇ "ಸ್ವಾಮಿ ದಯವಿಟ್ಟು ಈ ಮೊಲವನ್ನು ತೆಗೆದುಕೊಂಡು ನನ್ನ ಪ್ರೀತಿಯನ್ನು ಹಿಂತಿರುಗಿ ಕೊಡಿ, ನಮ್ಮಮ್ಮ ಮೊಲವನ್ನು ಏಕೆ ತೆಗೆದುಕೊಂಡೆ ಎಂದು ಚನ್ನಾಗಿ ಹೊಡೆದಳು – ನಿಮ್ಮ ಮೊಲವನ್ನು ನೀವೇ ಇಟ್ಟುಕೊಳ್ಳಿ - ನನ್ನ ಪ್ರೀತಿಯನ್ನು ನನಗೆ ವಾಪಸ್ ಕೊಡಿ'' ಎಂದು ಕೇಳಿದಳು.

ಯುವಕನಿಗೆ ಬೇಕಾಗಿದ್ದುದೂ ಅದೇ ! ಗಾಣದ ಮನೆಯನ್ನು ಪ್ರವೇಶಿಸಿ ಮೃದುವಾಗಿ ಅವಳನ್ನು ಆಲಂಗಿಸಿ, ಪ್ರೀತಿಯನ್ನು ಹಿಂತಿರುಗಿ ಕೊಟ್ಟು, ಮೊಲವನ್ನೂ ಆವಳೇ ತೆಗೆದುಕೊಳ್ಳಬಹುದೆಂದು ಹೇಳಿದನು. ಹುಡುಗಿಗೆ ಅವನು ಹೇಳಿದಂತೆ ನಡೆದುಕೊಂಡದ್ದರಿಂದ ಒಂದು ರೀತಿ ತೃಪ್ತಿ. ಮನೆಗೆ ಹಿಂತಿರುಗಿ ಯುವತಿಯು ತಾಯಿಗೆ ನಡೆದುದನ್ನು ಹೇಳಿದಳು ತಾಯಿಗೆ ಮಿತಿಮೀರಿದ ಕೋಪ ಬಂದು, ಜಡೆಯನ್ನು ಹಿಡಿದು ಜಗ್ಗಿ ಚನ್ನಾಗಿ ಹೊಡೆದಳು. ಮಗಳಿಗೆ ತಾಯಿಯು ಹೀಗೇಕೆ ವರ್ತಿಸಿದಳೆಂದು ಆಶ್ಚರ್ಯ.

ಒಂದು ವರ್ಷ ಉರುಳಿತು. ಯೋಧನು ಮದುವೆ ಮಾಡಿಕೊಳ್ಳಲು ನಿರ್ಧರಿಸಿದನು. ಶ್ರೀಮಂತಳೂ, ಬುದ್ಧಿವಂತಳೂ, ರೂಪವತಿಯೂ ಆದ

ಕನ್ಯೆಯೊಬ್ಬಳನ್ನು ಮೆಚ್ಚಿದನು. ಮದುವೆಯ ದಿನವೂ ನಿಶ್ಚಯವಾಯಿತು. ಅನೇಕ ಆಗರ್ಭ ಶ್ರೀಮಂತರೂ, ಅಧಿಕಾರಿಗಳು, ವಣಿಕರು ವಿವಾಹಮಂಟಪದಲ್ಲಿ ನೆರೆದಿದ್ದರು. ಯೋಧನಿಗೆ ಮೊಲವನ್ನು ಬಹುಮಾನವಾಗ ಕೊಟ್ಟ ಮನವನ್ನು ಸೂರೆಗೊಂಡಿದ್ದ ಯುವತಿಯ ನೆನಪು ಇನ್ನೂ ಹಚ್ಚುಹಸುರಾಗಿತ್ತು. ಅವಳನ್ನೂ ವಿವಾಹಕ್ಕೆ ಆಹ್ವಾನಿಸಿದನು.

ಮದುವೆ ಗಂಡು – ಹೆಣ್ಣುಗಳಿಬ್ಬರೂ ಬರುತ್ತಿದ್ದ ಅತಿಥಿಗಳನ್ನು ನೋಡುತ್ತಾ ಕುಳಿತರು. ಹಳ್ಳಿಯ ಹುಡುಗಿಯು ಸೊಂಟದಲ್ಲಿ ಮೊಲವನ್ನು ಎತ್ತಿಕೊಂಡು ಮದುವೆಯ ಮಂಟಪವನ್ನು ಪ್ರವೇಶಿಸಿದಳು. ಯೋಧನಿಗೆ ಯುವತಿಯನ್ನು ನೋಡಿ ಹಿಡಿಸಲಾರದಷ್ಟು ನಗು ಬಂದಿತು. ಗಟ್ಟಿಯಾಗಿ ನಕ್ಕನು.

ಮದುವೆ ಗಂಡು ಹೀಗೇಕೆ ನಗುತ್ತಿದ್ದಾನೆಂದು ನೆರೆದವರಿಗೆಲ್ಲಾ ಆಶ್ಚರ್ಯ. ''ಏನು ಸಮಾಚಾರ? ಯಾತಕ್ಕೆ ನಗುತ್ತಿದ್ದೀರಾ!" ಎಂದು ಕೇಳಿದರು.

ಯೋಧನು ನಗುವನ್ನು ನಿಲ್ಲಿಸಲೇ ಇಲ್ಲ. ಪಕ್ಕದಲ್ಲಿ ಕುಳಿತ ಕನ್ಯೆ "ಯಾಕೆ ಹೀಗೆ ನಗುತ್ತೀರಿ? ಏನು ಕಂಡಿರಿ" ಎಂದು ಕೇಳಿದಳು.

ಯೋಧನು ತುಟಿಕಚ್ಚಿಕೊಂಡು ಪ್ರಮಾದವಾಯಿತೆಂದು ತೆಪ್ಪಗೆ ಕುಳಿತನು. ಮದುವೆಯ ಹೆಣ್ಣು "ಯಾಕೆ ನಕ್ಕಿರಿ? ಹೇಳಬಾರದೆ. ನಾನು ನಿಮ್ಮ ಅರ್ಧಾಂಗಿಯಾಗಲಿದ್ದೇನೆ. ನನ್ನ ಹತ್ತಿರ ಮುಚ್ಚುಮರೆಯೇನು?" ಎಂದಳು.

ಯೋಧನು ಬಾಯಿ ಬಿಡಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ "ಹೇಳತಕ್ಕ ವಿಷಯವಲ್ಲ" ಎಂದು ಗಂಭೀರವಾಗಿ ಉತ್ತರಿಸಿದನು.

ಕನ್ಯೆಗೆ ಕೋಪ ಬಂದಿತು 'ನೀವು ಹೇಳದಿದ್ದಲ್ಲಿ ನಾನು ಮದುವೆಯೇ ಆಗುವುದಿಲ್ಲ' ಎಂದು ಬೆದರಿಕೆ ಇಟ್ಟಳು.

ಬೇರೆ ಉಪಾಯವನ್ನು ಕಾಣದೆ ಯೋಧನು ನಡೆದ ಸಂಗತಿಯನ್ನು ಹೇಳಿದನು. ಮದುವೆಯ ಹೆಣ್ಣು ಹೆಮ್ಮೆಯಿಂದ ಎಲ್ಲರ ಕಡೆ ಕಣ್ಣುಹರಿಸಿ,

ಆಸಡ್ಡೆಯಿಂದ ಹುಡುಗಿ ಶುದ್ಧ ಪೆದ್ದು ! ನಾನು ನಮ್ಮಮ್ಮನ ಹತ್ತಿರ ಹೇಳೋ ಗೋಜಿಗೇ ಹೋಗುತ್ತಿರಲಿಲ್ಲಾಂತ, ನನಗೆ ಕುದುರೆ ಸವಾರಿ ಮಾಡುವುದನ್ನು ಕಲಿಸಿಕೊಟ್ಟವನಿಗೆ ಚನ್ನಾಗಿ ಗೊತ್ತಿತ್ತು!'' ಎಂದಳು.

ಅವಳ ಮಾತನ್ನು ಕೇಳಿ ಮದುವೆಯ ಗಂಡು ದಂಗಾದನು. ಅಸಾಧ್ಯ ಕೋಪವೂ ಬಂದಿತು. ''ಹಾಗಾದರೆ ನೀನು ಕುದುರೆ ಸವಾರನ ಹತ್ತಿರ ಆಟ ವಾಡಿರಬೇಕು. ನಿನ್ನ ಕೈಹಿಡಿಯುವುದಕ್ಕಿಂತ ಅವಿವೇಕ ಮತ್ತೊಂದಿಲ್ಲ" ಎಂದು ಎದ್ದು ದೂರದಲ್ಲಿ ಮೊಲವನ್ನು ಮುದ್ದಿಸುತ್ತಾ ಕುಳಿತಿದ್ದ ಮನದನ್ನೆಯ ಕೈ ಹಿಡಿದು, ಕರೆತಂದು ಪಕ್ಕದಲ್ಲಿ ಕುಳ್ಳಿರಿಸಿಕೊಂಡನು. ನೆರೆದ ಅತಿಥಿಗಳೂ, ಮದುವೆಯ ಹೆಣ್ಣು ಅವಾಕ್ಕಾದರು. ಯೋಧನು ಎಲ್ಲರ ಕಡೆ ದೃಷ್ಟಿ ಹರಿಸಿ ಮತ್ತೊಮ್ಮೆ ತನ್ನ ಅನುಭವವನ್ನು ವಿವರಿಸಿ " ಈ ಇಬ್ಬರು ಕನ್ಯೆಯರಲ್ಲಿ ಯಾರು ಉತ್ತಮರು ನೀವೇ ಹೇಳಿ'' ಎಂದನು. ನೆರೆದವರು ''ನಿಷ್ಕಲ್ಮಶ ಹೃದಯದ ಹಳ್ಳಿಯ ಹುಡುಗಿಯೇ ಉತ್ತಮಳು. ಕೈಹಿಡಿಯಲು ಯೋಗ್ಯಳು ಯೋಧನ ನಿರ್ಧಾರವು ಸರಿ" ಎಂದು ತಲೆ ತೂಗಿದರು.



# ಹಕ್ಕಿಯ ನುಡಿ

## ಬಕ್ತ್ಯಾಯಾರ್ ನಾಮಾದಿಂದ

ಬಾಗ್ದಾದಿನಲ್ಲಿ ಅತ್ಯಂತ ಪ್ರಬಲನಾದ ಖಲೀಫನಿದ್ದನು. ಅವನಿಗೆ ಉಷಃಕಾಲವನ್ನು ಹೋಲುವ ಅತಿ ಸುಂದರಳಾದ ಒಬ್ಬಳೇ ಮಗಳಿದ್ದಳು. ಮಗಳನ್ನು ಕಂಡರೆ ತಂದೆಗೆ ಬಹಳ ಪ್ರೀತಿ. ಅವಳು ಪಟ್ಟಣದ ಪೇಟೆಯ ರಸ್ತೆಗಳಲ್ಲಿ, ನದಿಯ ದಡದಲ್ಲಿದ್ದ ಉದ್ಯಾನವನದಲ್ಲಿ ಓಡಾಡಲು ಅನುಮತಿಯನ್ನು ಕೊಟ್ಟಿದ್ದನು ಅವಳ ಜೊತೆ ಹೋಗಲು ಪ್ರತಿನಿತ್ಯ ಒಬ್ಬೊಬ್ಬ ಹೊಸ ವಿಶ್ವಾಸಕ್ಕೆ ಪಾತ್ರನಾದ ಆಳನ್ನು ಕಳುಹಿಸುತ್ತಿದ್ದನು. ಜವಾನನಾದರೇನು ಉಪ್ಪು ಖಾರ ತಿನ್ನುವ ಮನುಷ್ಯನಲ್ಲವೇ? ಅವನಿಗೂ ಎಲ್ಲರಂತೆ ಆಸೆಗಳಿರುವುದಿಲ್ಲವೆ? ದಿನಕ್ಕೊಬ್ಬನನ್ನು ಬದಲಾಯಿಸುವುದರಿಂದ ಮಗಳೊಡನೆ ಸಲಿಗೆಯನ್ನು ಬೆಳಸಿಕೊಳ್ಳಲು ಸಾಧ್ಯವಿಲ್ಲವೆಂದು ಅವನ ನಂಬಿಕೆ. ಮನಸ್ಸಿಗೂ ಒಂದು ರೀತಿ ಶಾಂತಿ. ನಿಶ್ಚಿಂತೆಯಿಂದ ಇದ್ದನು.

ಖಲೀಫನ ಊಳಿಗದಲ್ಲಿ ಒಬ್ಬ ಯುವಕನಿದ್ದ. ಅವನ ಹೆಸರು ಅಲಿ. ಇನ್ನೂ ಎಳೆಯ ಪ್ರಾಯ. ರಾಜಕುಮಾರಿಯ ಜೊತೆ ಹೋಗಲು ಅವನಿಗೂ ಒಂದು ದಿವಸ ಸರದಿ ಬಂದಿತು. ಹುಡುಗನು ಘಾಟಿ. ರಾಜಕುಮಾರಿಯ ವಜ್ರದ ಹಾರವನ್ನು ಕದ್ದು ಉದ್ಯಾನವನದ ಒಂದು ಮರದ ಬುಡದಲ್ಲಿ ಅವಿಸಿಟ್ಟು ಅದರ ಮೇಲೆ ದಪ್ಪ ಕಲ್ಲೊಂದನ್ನು ಹೇರಿ ತನ್ನ ಹತ್ತಿರವಿದ್ದ ದುಡ್ಡಿನ ಚೀಲದಲ್ಲಿ ಚಿಲ್ಲರೆ ಕಾಸುಗಳನ್ನು ಹಾಕಿ ಮತ್ತೊಂದು ಕಡೆ ಬಚ್ಚಿಟ್ಟನು. ಅನಂತರ ಕಾಗೆಯನ್ನು ಹಿಡಿದು ಅದರ ರೆಕ್ಕೆಗಳನ್ನು ಕತ್ತರಿಸಿ ಹಾಕಿ ಮಲ್ಲಿಗೆ ಬಳ್ಳಿಯ ಚಪ್ಪರದ ಮೇಲೆ ಬಿಟ್ಟನು.

ರಾಜಕುಮಾರಿ ಮತ್ತು ಅಲಿ ಉದ್ಯಾನವನದಲ್ಲಿ ಸುತ್ತಾಡುತ್ತಾ ಮಲ್ಲಿಗೆಯ ಚಪ್ಪರದಡಿ ಬಂದು ನಿಂತರು. ಚಪ್ಪರದ ಮೇಲೆ ಕುಳಿತಿದ್ದ ಕಾಗೆಯು ಕರ್ಕಶ ಧ್ವನಿಯಲ್ಲಿ ಕಾ ಕಾ ಎಂದು ಕೂಗಿತು.

ರಾಜಕುಮಾರಿ ಕಿವಿಯನ್ನು ಮುಚ್ಚಿಕೊಂಡು " ಆ ಕಾಗೆ ಕೂಗವು ದನ್ನು ಕೇಳುವುದಕ್ಕಾಗುವುದಿಲ್ಲ ಕಲ್ಲಿನಿಂದ ಹೊಡೆದು ಓಡಿಸು." ಎಂದು ಆಜ್ಞೆ ಮಾಡಿದಳು.

ಅಲಿಯು " ನನಗೇನೋ ಕಾಗೆಯನ್ನು ಓಡಿಸುವುದಕ್ಕೆ ಇಷ್ಟವಿಲ್ಲ. ಅದು ಏನು ಹೇಳುತ್ತಾ ಇದೆ ಗೊತ್ತಾ ? ಅಲ್ಲಿ ದೂರದಲ್ಲಿ ಕಾಣಿಸುತ್ತಿದೆ ಯಲ್ಲಾ .... ಆ ಮರದ ಬುಡದಲ್ಲಿ ಅಮೂಲ್ಯ ವಸ್ತುವಿದೆಯೆಂದು ಹೇಳು ತ್ತಿದೆ " ಎಂದನು.

ಗಿಡದ ಬುಡದಲ್ಲಿದ್ದ ಕಲ್ಲನ್ನು ಎತ್ತಿ ನೋಡಿದಾಗ ವಜ್ರದ ಹಾರವು ಕಾಣಬಂದಿತು.

ರಾಜಕುಮಾರಿಯು " ಆಶ್ಚರ್ಯ ! ಬೆಳಗ್ಗೆ ಕಳೆದ ಹೋಗಿದ್ದ ವಜ್ರದ ಹಾರ ! ಅದಕ್ಕೆ ಹೇಗೆ ಗೊತ್ತಾಯಿತು ಇಲ್ಲಿದೇಂತ ?" ಎಂದು ಹಾರವನ್ನು ಕತ್ತಿನಲ್ಲಿ ಹಾಕಿಕೊಂಡು ದೂರದಲ್ಲಿ ನಿಂತಿದ್ದ ಅಲಿಯನ್ನು ಚಪ್ಪಾಳೆ ತಟ್ಟಿ ಕರೆದು " ಈಗ ಕಾಗೆ ಏನು ಹೇಳುತ್ತಿದೆ?" ಎಂದು ಕೇಳಿದಳು.

ಅಲಿ " ಇವತ್ತು ಬೆಳಗ್ಗೆ ಕಳೆದುಹೋದ ನನ್ನ ದುಡ್ಡಿನ ಚೀಲವು ಈಚೆ ಕಡೆಯಿರುವ ಮರದ ಬುಡದಲ್ಲಿದೆ ಎಂದು ಹೇಳುತ್ತಿದೆ " ಎಂದನು.

ಇಬ್ಬರೂ ಮರದ ಬುಡದಲ್ಲಿದ್ದ ಕಲ್ಲನ್ನು ಎತ್ತಿದಾಗ ಹಣದ ಚೀಲವು ಸಿಕ್ಕಿತು.

ಕಾಗೆಯು ಕಾ ! ಕಾ ! ಎಂದು ಕೂಗಿತು.

ರಾಜಕುಮಾರಿಯು "ಈ ಸಲ ಏನು ಹೇಳುತ್ತಿದೆ?" ಎಂದು ಕುತೂಹಲ ದಿಂದ ಕೇಳಿದನು.

ಅಲಿಯು ಅದು ಹೇಳುತ್ತಿರುವುದನ್ನು ತಿಳಿಸುವುದಕ್ಕೆ ಸಾಧ್ಯವಿಲ್ಲ" ಎಂದನು.

ರಾಜಕುಮಾರಿಯು ಕುಪಿತಳಾಗಿ " ಅಲಿ ! ನನ್ನ ಆಜ್ಞೆಯನ್ನು ಮೀರುವಷ್ಟು ಧೈರ್ಯ ನಿನಗೆ ಇದೆಯಾ ? ಪವಿತ್ರ ಖುರಾನಿನ ಆಣೆ .... ನೀನು ...." ಎಂದಳು.

ಆಲಿ, " ನಾನು ತಿಳಿಸಿದಲ್ಲಿ ನೀವು ಅದು ಹೇಳುವ ರೀತಿ ನಡೆದುಕೊಳ್ಳ ಬೇಕಾಗಿ ಬರುತ್ತದೆ. ಅದಕ್ಕೆ ಸಾಧ್ಯವಿಲ್ಲವೆಂದೆ. ನಿಮಗೆ ಕೋಪ ಮಾಡಿಕೊಳ್ಳ ದಿದ್ದಲ್ಲಿ ಹೇಳುತ್ತೇನೆ ' ನೀನು ಆಲಿಯನ್ನು ಪ್ರೀತಿಸು. ಇದುವರೆವಿಗೂ ಅರಿಯದೆ ಇರುವಂಥ ಆನಂದವನ್ನು ಅನುಭವಿಸಬಲ್ಲೆ' ಎಂದು ಹೇಳುತ್ತಿದೆ " ಎಂದನು.

ರಾಜಕುಮಾರಿಯು ದಟ್ಟವಾದ ಪೊದೆಗಳಿಂದ ಕೂಡಿದ ಉದ್ಯಾನ ವನದ ಭಾಗಕ್ಕೆ ಆಲಿಯೊಡನೆ ಹೋಗಿ ಕಾಗೆಯು ಹೇಳಿದ ರೀತಿ ನಡೆದು ಕೊಂಡಳು.

ಮಾರನೆಯ ದಿವಸ ಖಲೀಫನು ವಜೀರನನ್ನು ಕರೆಕಳುಹಿಸಿ " ಒಂದು ವಿಚಿತ್ರವಾದ ಸಂಗತಿ. ನನ್ನ ಮಗಳ ಹತ್ತಿರ ಇಥಿಯೋಪಿಯಾ ದಿಂದ ತಂದ ಮಾತನಾಡುವ ಗಿಣಿ ಇತ್ತಲ್ಲಾ ಅದನ್ನು ಓಡಿಸಿ, ಅದಕ್ಕೆ ಬದಲು ನೋಡಲಿಕ್ಕೆ ಕೂಡ ಅಸಾಧ್ಯವಾಗಿ ವಕ್ರವಾಗಿರುವ ಕಾಗೆಯನ್ನು ಚಿನ್ನದ ಪಂಜರದಲ್ಲಿ ಇಟ್ಟುಕೊಂಡಿದ್ದಾಳೆ. ಅದೋ ಬೆಳಗ್ಗಿನಿಂದ ಸಂಜೆಯ ವರಿಗೆ ಕೆಟ್ಟ ಧ್ವನಿಯಲ್ಲಿ ಕಾ, ಕಾ, ಎಂದು ಕಿರುಚುತ್ತಲೇ ಇರುತ್ತದೆ. ಕಿವಿ ಚಿಟ್ ಹಿಡಿದುಹೋಗಿದೆ. ಇದಕ್ಕೆ ಕಾರಣವೇನಿರಬಹುದು ?" ಎಂದು ಕೇಳಿದನು.

ವಜೀರನು ಬಿಳಿಯ ಗಡ್ಡವನ್ನು ಬೆರಳುಗಳಿಂದ ಬಿಡಿಸಿ ಸವರುತ್ತಾ ಗಂಭೀರವಾಗಿ ತಲೆ ತೂಗಿ " ಸ್ತ್ರೀಯರ ಮನಸ್ಸನ್ನು ಅರಿತವರಾರು ?" ಎಂದನು. ಕಾರಣವು ರಾಜಕುಮಾರಿ ಮತ್ತು ಆಲಿಗೆ ಮಾತ್ರ ಗೊತ್ತಿತ್ತು. ಮುದ್ದು ಮುದ್ದಾಗಿ ಮಾತನಾಡುವ ಗಿಳಿಗೆ ಲಕ್ಷ ರೂಪಾಯಿ ಕೊಟ್ಟು ಕೊಂಡರೇನು ಕೆಲಸಕ್ಕೆ ಬಾರದ ಹೇಳಿಕೊಟ್ಟ ಮಾತನ್ನು ಪುನಃ ಹೇಳಬಲ್ಲವು ಅಷ್ಟೆ ! ಗಿಳಿಗೂ ಸಾವಿರ ಪಾಲು ಈ ಕಾಗೆಯೇ ಉತ್ತಮ ಎಂದು ಅವರಿಬ್ಬರ ಅಭಿಪ್ರಾಯ. ನಿತ್ಯ ಆ ಕಾಗೆ ಸೂಚಿಸುತ್ತಿದ್ದ ರೀತಿ ಚಾಚೂ ತಪ್ಪದೆ ನಡೆದುಕೊಳ್ಳುತ್ತಿದ್ದರು.

ಸರ್ವಾಂತರ್ಯಾಮಿ, ಸರ್ವಶಕ್ತ ಅಲ್ಲಾ ಅವರಿಬ್ಬರ ಸುಖಸಂತೋಷವು ಚಿರಕಾಲವಿರುವಂತೆ ದಯಪಾಲಿಸಲಿ !.



# ವಾಗ್ಮಿ ಹೊಡೆದ ಜಯಭೇರಿ

ಬರೆದವರು : **ಪೆಟ್ರೋನಿಯಸ್**

ಬಹಳ ಹಿಂದಿನ ಮಾತು. ರೋಮಿನಲ್ಲಿ ಒಬ್ಬ ವಾಗ್ಮಿ ಇದ್ದನು. ಇನ್ನೂ ಹರೆಯದ ಪ್ರಾಯ. ಅವನಿಗೊಬ್ಬಳು ನಲ್ಲೆಯಿದ್ದಳು. ಅವನಿಗಿಂತ ಹಿರಿಯ ವಾಚಾಳಿಯೊಬ್ಬನಿದ್ದನು. ಅವನ ಪ್ರತಿಭೆ, ವಿದ್ವತ್ ಮತ್ತು ಭಾಷಣಗಳನ್ನು ಕೇಳಿ ನಲ್ಲೆಗೆ ಅವನ ಮೇಲೆ ಕಣ್ಣು ಬಿತ್ತು.

ಹಿರಿಯ ವಾಗ್ಮಿ ಹೆಸರಾಂತವನಾದರೂ, ಕಿರಿಯವನಿಗೆ ಪ್ರಳಯಾಂತಕ ಬುದ್ಧಿ. ನಲ್ಲೆ ತನ್ನ ಕಡೆ ಕಣ್ಣೆತ್ತಿ ಕೂಡ ನೋಡದಿದ್ದುದನ್ನು ನೋಡಿ ತಲೆ ಕೆಟ್ಟಿತು. ಎರಡು ದಿವಸ ಪಟ್ಟಣವನ್ನು ಬಿಟ್ಟು ತನ್ನ ಸ್ವಂತ ಹಳ್ಳಿಗೆ ಹೋಗಿ ಯಾವ ರೀತಿ ತನ್ನ ನಲ್ಲೆಯ ಪ್ರೀತಿಯನ್ನು ಸಂಪಾದಿಸಬಹುದು ಎಂದು ಹಗಲು ರಾತ್ರಿ ಯೋಚಿಸತೊಡಗಿದನು. ಹಿರಿಯುವ ಮೇಧಾವಿ ಧೃಡಕಾಯಿ, ಆಜಾನುಬಾಹು, ಸ್ಫುರದ್ರೂಪಿ, ವಿದ್ವಾಂಸ. ಎಲ್ಲ ವಿಷಯ ದಲ್ಲೂ ಕಿರಿಯವನನ್ನು ಮೀರಿಸುತ್ತಿದ್ದನು ಕಿರಿಯವನಿಗೆ ಏನು ಕುಂದು ಕೊರತೆಗಳು ಇದ್ದರೂ ಬುದ್ಧಿ ಮಾತ್ರ ಕುಶಾಗ್ರ. ಒಂದು ಉಪಾಯ ಹೊಳೆಯಿತು.

ರೋಮಿಗೆ ಹಿಂತಿರುಗಿ, ನಲ್ಲೆಯ ಸಂಬಂಧಿಯೊಬ್ಬಳನ್ನು ಕಂಡು ತನ್ನ ಮನಸ್ಸಿನಲ್ಲಿದ್ದ ಆಂದೋಳನವನ್ನು ತೋಡಿಕೊಂಡು, ಸಹಾಯಮಾಡ ಬೇಕೆಂದು ಕೇಳಿಕೊಂಡನು. "ಹೆಚ್ಚು ಕೇಳಿಕೊಳ್ಳೊಲ್ಲ, ನೀನು ನಾಲ್ಕು ದಿವಸ ಖಾಯಿಲೆ ಬಂದವಳಂತೆ ಮಲಗಿಕೊಂಡು ನನ್ನ ನಲ್ಲೆಯನ್ನು ನಿನ್ನ ಮನೆಗೆ ಕರಿಸಿಕೊ. ಅವಳು ಹತ್ತಿರವಿದ್ದರೆ ಒಳ್ಳೆಯದೆಂದು ಹೇಳು" ಎಂದನು. ಆನಂತರ ರೋಮ್‌ನಗರದ ಮತ್ತೊಂದು ಪಾರ್ಶ್ವದಲ್ಲಿ ವಾಸಿಸುತ್ತಿದ್ದ ಕಾಮ ಪಿಪಾಸೆಗೆ ಪ್ರಸಿದ್ಧಳಾಗಿದ್ದ ಹೆಂಗಸಿನ ಹತ್ತಿರ ಹೋಗಿ, ತನ್ನೊಡನೆ ಬರ ಬೇಕೆಂದು ಗೊತ್ತು ಮಾಡಿಕೊಂಡು, ನೆಟ್ಟಗೆ ಅವಳನ್ನು ಹಿರಿಯ ವಾಗ್ಮಿಯ

ಮನೆಗೆ ಕರೆದುಕೊಂಡು ಹೋಗಿ 'ನೀವು ಭಾಷಣಮಾಡುವುದರಲ್ಲಿ ಎಷ್ಟು ಮೇಧಾವಿಗಳೋ ಸ್ತ್ರೀಸಂಗದಲ್ಲಿ ಕೂಡ ಅಷ್ಟೇ ಗಟ್ಟಿಗರೆಂದು ಕೇಳಿದ್ದೇನೆ. ಎಲ್ಲ ವಿಚಾರದಲ್ಲೂ ನೀವು ಗಟ್ಟಿಗರಾಗಿರುವುದರಿಂದ ಈ ಒಂದು ವಿಚಾರದಲ್ಲೂ ನೀವು ನನಗಿಂತ ಗಟ್ಟಿಗರು ಹೌದೋ ಅಲ್ಲವೋ ಎಂದು ಪರೀಕ್ಷಿಸಬೇಕೆಂದು ಆಸೆಯಾಗಿದೆ" ಎಂದು ವಿನಯದಿಂದ ಕೇಳಿಕೊಂಡನು.

ತನ್ನ ಮುಂದೇ ಬೆಳೆದ ಪೋರನು ಈ ರೀತಿ ಬಂದು ಕೇಳುತ್ತಿರುವುದನ್ನು ನೋಡಿ ಹಿರಿಯನಿಗೆ ಕೋಪವೇ ಬಂದಿತು "ನನ್ನನು ಏನೂಂತ ತಿಳಿದುಕೊಂಡಿದ್ದಿ ? ಈ ವಿಷಯ ಮಾತ್ರವಲ್ಲ, ಸಕಲ ವಿಷಯಗಳಲ್ಲೂ ನಿನ್ನನ್ನ ಸೋಲಿಸಬಲ್ಲೆ. ಏನು ಮಾಡಬೇಕು ಹೇಳು" ಎಂದನು.

"ಹಾಗಾ ?" ಎಂದು ಯುವಕನು ಜೊತೆಯಲ್ಲಿ ಕರೆತಂದ ಹೆಂಗಸಿನ ಕಡೆ ಕೈತೋರಿಸಿ ಈಕೆಯನ್ನು ತೃಪ್ತಿಪಡಿಸಿರುವ ಗಂಡಸು ಇಷ್ಟರವರೆಗೂ ಯಾರೂಇಲ್ಲ. ನಾವಿಬ್ಬರೂ ನಮ್ಮ ಶಕ್ತಿಯನ್ನು ಪ್ರದರ್ಶಿಸೋಣ. ಅವಳ ಮಾತೇ ತೀರ್ಪು." ಎಂದು ಪರಿಚಯಮಾಡಿಕೊಟ್ಟನು.

"ತೃಪ್ತಿ ಆಯಿತೂಂತ ಅವಳು ಹೇಳಿದರೆ ನೀನು ನನಗೇನು ಕೊಡುತ್ತಿ ?".

"ಇವಳು ನೀವೇ ನನಗಿಂತ ಮೇಲೂಂತ ಹೇಳಿದರೆ ನನ್ನ ನಲ್ಲೆಯನ್ನು ನಿಮಗೇ ಬಿಟ್ಟುಕೊಡುತ್ತೇನೆ. ಹಾಗಲ್ಲದಿದ್ದರೆ ನೀವು ಈ ಊರನ್ನು ಬಿಟ್ಟು ಹೋಗಬೇಕು. ಪುನಃ ಹಿಂತಿರುಗಿ ಬರಕೂಡದು. ಒಪ್ಪಿಗೆಯಾ ?".

ಹಿರಿಯ ವಾಗ್ಮಿಯು ಒಪ್ಪಿಗೆಯನ್ನು ಸೂಚಿಸಲು ತಲೆಯನ್ನಲ್ಲಾಡಿಸಿ, ಬಂದ ಯುವತಿಯ ಕೈಹಿಡಿದು ಮಲಗುವ ಕೋಣೆಯೊಳಗೆ ಕರೆದುಕೊಂಡು ಹೋಗಿ ಬಾಗಿಲು ಹಾಕಿಕೊಂಡನು.

ಯುವಕನು ಹೊರಗಡೆ ಕುತೂಹಲದಿಂದ ಕಾಯುತ್ತಾ ಕುಳಿತನು. ಗಂಟೆ ಎರಡಾಯಿತು. ನಾಲಕ್ಕಾಯಿತು, ಕತ್ತಲೂ ಆಗಿ, ಎಲ್ಲರ ಮನೆಗಳಲ್ಲೂ ದೀಪವನ್ನ ಹಚ್ಚಿ ಊಟಮಾಡಿ ಮಲಗಿಕೊಂಡರು. ಮುಚ್ಚಿದ ಬಾಗಿಲು ತೆರೆಯಲೇ ಇಲ್ಲ. ಪೂರ್ವ ದಿಕ್ಕಿನಲ್ಲಿ ಸೂರ್ಯನ ಬಾಲಕಿರಣಗಳು ಕತ್ತಲೆ

ಯನ್ನು ದೂಡಿದಂತೆ ಬಾಗಿಲನ್ನು ತೆರೆದು ಹಿರಿಯುವ ವಾಜಿ ೧೬ "ಇನ್ನೂ ಮುಂದುವರಿಸಲು ಸಾಧ್ಯವಿಲ್ಲ. ಈಗ ನೀನು, ನಿನ್ನ ಶಕ್ತಿಯನ್ನು ಪ್ರದರ್ಶಿಸು ನೋಡೋಣ" ಎಂದನು.

ಯುವಕನು ನಮ್ರತೆಯಿಂದ ಎರಡು ಕೈಗಳನ್ನೂ ಜೋಡಿಸಿ "ನಾನು ವಯಸ್ಸಿನಲ್ಲಿ ನಿಮಗಿಂತ ಕಿರಿಯುವ. ಅಹಂಕಾರದಿಂದ ನಿಮ್ಮ ಪೌರುಷ ವನ್ನು ಪರೀಕ್ಷಿಸಬೇಕೆಂದು ಪ್ರಯತ್ನ ಪಟ್ಟೆ. ಕ್ಷಮಿಸಿ. ನೀವು ಎಲ್ಲ ವಿಚಾರದಲ್ಲೂ ನನಗಿಂತ ಹಿರಿಯರು. ನಿಮ್ಮ ಮುಂದೆ ನಾನು ನನ್ನ ಶಕ್ತಿಯನ್ನು ಪ್ರದರ್ಶಿಸಲಸಮರ್ಥನಾಗಿದ್ದೇನೆ. ನೀವೇ ಗೆದ್ದಿರಿ. ನನ್ನ ಜೊತೆ ಬನ್ನಿ. ನಿಮಗೆ ಸೇರಬೇಕಾದ ಪಾರಿತೋಷಿಕವನ್ನು ಒಪ್ಪಿಸುತ್ತೇನೆ" ಎಂದು ನಲ್ಲೆಯಿದ್ದೆಡೆಗೆ ಹಿರಿಯನನ್ನು ಕರೆದುಕೊಂಡು ಹೋದನು. ಯುವತಿಯು ನಗುಮುಖದಿಂದ ಹಿರಿಯನನ್ನು ಸ್ವಾಗತಿಸಿ, ಒಲುವನ್ನು ಸೂಚಿಸುತ್ತಾ ಅವನ ಕೈಹಿಡಿದು ಕೊಠಡಿಯೊಳಗೆ ಕರೆದುಕೊಂಡು ಹೋದಳು. ರಾತ್ರಿಯೆಲ್ಲಾ ಪೌರುಷವನ್ನು ವ್ಯಕ್ತಪಡಿಸಲು ಶ್ರಮಿಸಿದ್ದರಿಂದ ಯುವತಿಯ ಮನದಾಸೆಯನ್ನು ಉಪಶಮನಮಾಡಲು ಅಶಕ್ತನಾಗಿದ್ದನು.

"ಈಗ ಬೇಡ. ಸುಧಾರಿಸಿಕೊಂಡು ಆಮೇಲೆ ಬರುತ್ತೇನೆ." ಎಂದನು.

ಯುವತಿಗೆ ನಿರಾಶೆಯಾಗಿ ಕೋಪಗೊಂಡು "ನೀವು ಪುನಃ ಹಿಂತಿರುಗಿ ಬರುವ ಅವಶ್ಯಕತೆಯಿಲ್ಲ. ನಮ್ಮ ಮನೆ ಹೊಸಿಲು ಮತ್ತೊಮ್ಮೆ ತುಳಿಯಬೇಡಿ. ಇದೇ ಕಡೆ" ಎಂದು ಬಾಗಿಲ ಕಡೆ ಕೈ ತೋರಿಸಿ ಅವನು ಹೊರಗೆ ಹೋಗುತ್ತಲೂ ರಪ್ಪನೆ ಬಾಗಿಲು ಬಡಿದಳು.

ನಲ್ಲೆಯನ್ನು ನೋಡಿ ನಸುನಗುತ್ತಾ ಯುವಕನು "ಈಗ ಚೆನ್ನಾಗಿ ಗೊತ್ತಾಯಿತಾ ಸಮಾಚಾರ ಏನೂಂತ.? ದೂರದ ಬೆಟ್ಟ ನುಣ್ಣಗೆ. ಹಿತ್ತಲು ಮರ ಮದ್ದಲ್ಲಾಂತ ತಿಳಿದುಕೊಂಡಿದ್ದೀ ಅಲ್ಲವಾ ? ಅವನು ಎಲ್ಲ ವಿಚಾರದಲ್ಲೂ ಮಹಾ ಗಟ್ಟಿಗನೆಂದು ತಿಳಿದಿದ್ದಿಯಲ್ಲವೇ ?" ಎಂದನು.

ಯುವತಿಗೆ ಇನಿಯನ ಮಾತು ಸರಿಯೆಂದು ತೋರಿ, ಅವನ ಕೈ ಹಿಡಿದು ಕೋಣೆಯನ್ನು ಪ್ರವೇಶಿಸಿದಳು. ಅಂದಿನಿಂದ ಯುವತಿಯ ಮನಸ್ಸು ಚಂಚಲವಾಗಲಿಲ್ಲ. ನಲ್ಲನಲ್ಲೆಯರು ಚಿರಕಾಲ ಸಂತಸದಿಂದ ನಲಿದಾಡಿದರು.



# ಶಿಲೆಯಾಗಿ ನಿಂತ ಸಂತ !

## " ಫ್ಯಾಬ್ಲಿಯಾ " ದಿಂದ ಆರಿಸಿದ್ದು

ನವಂಬರ್ ತಿಂಗಳಲ್ಲಿ ಒಂದು ದಿವಸ ಮಧ್ಯಾಹ್ನ ಅಂದು ಬಹಳ ಚಳಿ. ಕಾನ್ವೆಂಟಿನ (ಕ್ರೈಸ್ತ ಮಠ) ಗಂಟೆಯು ಮಂಜುಳುವಾಗಿ ಎರಡು ಹೊಡೆಯಿತು. ಪಿಕಾರ್ಡೊ ವಾಸಿಗಳು ಊಟಮಾಡಿ ವಿಶ್ರಮಿಸಿಕೊಳ್ಳುತ್ತಿದ್ದರು. ಕ್ರೈಸ್ತ ಮಠದಲ್ಲಿ ಶಿಷ್ಯವೃಂದವು ದೇವರ ನಾಮವನ್ನು ಸುಶ್ರಾವ್ಯವಾಗಿ ಪಠಿಸುತ್ತಿದ್ದರು. ಮಠದ ಕೋಶಾಧ್ಯಕ್ಷ ಪಾಲ್‌ಗೆ ಯಾವ ರೀತಿಯ ನಿಯಮಗಳೂ ಕಟ್ಟುಪಾಡುಗಳೂ ಇರಲಿಲ್ಲ. ಯಾವ ಕಾಲದಲ್ಲಿ ಬೇಕಾದರೂ ಮಠದಿಂದ ಹೊರಗೂ ಒಳಗೂ ಹೋಗಿಬರಬಹುದಾಗಿತ್ತು.

ಚಳಿಯಾಗಿದ್ದರೂ, ಎಲ್ಲರೂ ವಿಶ್ರಮಿಸಿಕೊಳ್ಳುತ್ತಿದ್ದ ವೇಳೆಯಲ್ಲಿ ಪಾದ್ರಿ ಪಾಲನು ಕಲ್ಲು ಹಾಸಿದ್ದ ರಸ್ತೆಯಲ್ಲಿ ನಡೆದು ಹೋಗುತ್ತಿದ್ದುದನ್ನು ನೋಡಿ ಜನರಿಗೆ ಆಶ್ಚರ್ಯವಾಯಿತು.

ಕಾರಣವೇನೆಂದು ಅವರಿಗೂ ಗೊತ್ತು. ತಮ್ಮಲ್ಲೇ ನಕ್ಕು ತಲೆಯನ್ನಲ್ಲಾಡಿಸಿದರು. ಪೆರ್ರಿ ಅತ್ಯಂತ ಸುಂದರವಾದ ಪ್ಲಾಸ್ಟರಿ (ಮಣ್ಣು) ನಲ್ಲಿ ವಿಗ್ರಹಗಳನ್ನು ಮಾಡುತ್ತಿದ್ದನು. ಪಾಲನು ಹೋಗುತ್ತಿದ್ದುದೂ ಅವನ ಮನೆಗೆ. ಸಂತರ ಮತ್ತು ಸೈತಾನರ ವಿಗ್ರಹಗಳನ್ನು ಉತ್ಸವ ಹಾಗೂ ಹಬ್ಬ ದಿನಗಳಿಗಾಗಿ ಕೊಳ್ಳಲು ಪಾಲನನ್ನು ಮಠದ ಅಧಿಕಾರಿಗಳು ನಿಯಮಿಸಿದ್ದರು. ಪಾದ್ರಿ ಪಾಲ್ ಕಲೋಪಾಸಕ. ವಿಗ್ರಹಗಳಲ್ಲಿ ಕಾಣಬರುವ ನ್ಯೂನತೆಗಳನ್ನು ಕಂಡುಹಿಡಿದು, ಉತ್ತಮವಾದ ವಿಗ್ರಹಗಳನ್ನೇ ಆರಿಸುತ್ತಿದ್ದನು. ಸಾಧಾರಣವಾಗಿ ಮಠದಿಂದ ಹೊರಗೆ ಹೋಗುತ್ತಲೇ ಇರಲಿಲ್ಲ. ವಿಗ್ರಹಗಳನ್ನು ಮಾಡುವವರು ಮಠಕ್ಕೆ ತೆಗೆದುಕೊಂಡು ಹೋಗುತ್ತಿದ್ದರು. ಪಾದರಿ ಪಾಲನು ಉತ್ತಮವಾಗಿ ಕಂಡುಬಂದುದನ್ನು ಆರಿಸಿ ಹಣವನ್ನು ಕೊಡುತ್ತಿದ್ದನು. ಇವತ್ತು ಅಷ್ಟು ಚಳಿಯಾಗುತ್ತಿದ್ದರೂ ನಡೆದುಹೋಗುತ್ತಿದ್ದುದರ

ಕಾರಣ ಕೆಲ ಪುತ್ಥಳಿಗಳನ್ನು ಕೊಳ್ಳಲು ಮಾತ್ರವಲ್ಲ, ಅದಕ್ಕೂ ಹೆಚ್ಚಿನ ಮತ್ತೊಂದು ಕಾರಣವಿತ್ತು.

ಪಾಲ್‌ನು ಸರಸರನೆ ನಡೆದು ಹೋದಂತೆ ಕಿಟಕಿಯ ಹತ್ತಿರ ನಿಂತು ನೋಡುತ್ತಿದ್ದ ವೃದ್ಧ ಹೆಂಗಸೊಬ್ಬಳು ಮಗಳ ಕಡೆ ತಿರುಗಿ "ನಿಜವಾಗಿ ಜನೆಟ್ಟಳನ್ನು ನೋಡಿದರೆ ಅಯ್ಯೋ ಅನ್ನಿಸುತ್ತದೆ. ನೋಡುವುದಕ್ಕೆ ಮುದ್ದಾಗಿ ಲಕ್ಷಣವಾಗಿದ್ದಾಳೆ. ಗಂಡನನ್ನು ಎಷ್ಟು ಪ್ರೀತಿಸುತ್ತಾಳೆ - ಗೌರವಿಸುತ್ತಾಳೆ ಗೊತ್ತಾ" ? ಎಂದಳು.

ಮಗಳು. " ನನಗೂ ಅವಳ ಗಂಡನಷ್ಟೇ ಲಕ್ಷಣವಾಗಿರುವ, ಗಟ್ಟಿ ಮುಟ್ಟಾಗಿರುವ ಗಂಡ ಸಿಕ್ಕಿದ್ದರೆ .... ನನ್ನ ಅದೃಷ್ಟ ಹೀಗೆ! ಪೆರ್ರಿಯು ಪಾದ್ರಿ ಏನ ಮಾಡಿದರೂ ತೆಪ್ಪಗಿರಬೇಕು. ಪಾಲನು ನೋಡುವುದಕ್ಕೆ ವಿಕಾರ ವಾಗಿದ್ದರೇನು. ಮನಸ್ಸು ಮಾಡಿದರೆ ಪೆರ್ರಿಯು ಒಂದು ವಿಗ್ರಹವನ್ನು ಕೂಡ ಮಠಕ್ಕೆ ಮಾರದೆ ಇರುವ ಹಾಗೆ ಮಾಡಬಲ್ಲ. ಇಲ್ಲಿ ಮಾತ್ರವೇನು ಈ ಕಡೆ ಯಾವ ಮಠವವರೂ ಕೊಳ್ಳದೆ ಇರುವ ಹಾಗೆ ಮಾಡಿಯಾನು. ಪಾಪ! ಅವನನ್ನು ನೋಡಿದರೆ ನನಗೆ ಅಯ್ಯೋ ಅನ್ನಿಸುತ್ತೆ" ಎಂದಳು.

ಪಾದ್ರಿಯು ತನ್ನ ಮನೆಯ ಕಡೆಯೇ ಬರುತ್ತಿರುವುದನ್ನು ನೋಡಿ ಜನೆಟ್ಟಳು ಮನಸ್ಸಿನಲ್ಲೇ "ಇವತ್ತು ಅವನು ಬಂದಂತೆ ನಗುತ್ತಾ ಸ್ವಾಗತಿಸ ಬೇಕು. ಸ್ವಲ್ಪವೂ ಹೆದರಿಕೊಳ್ಳದೆ ಅವನನ್ನು ಬೆಂಕಿಯೊಲೆಯ ಹತ್ತಿರ ಉತ್ತಮವಾದ ಆರಾಮ ಕುರ್ಚಿಯ ಮೇಲೆ ಕುಳಿತುಕೊಳ್ಳುವಂತೆ ಹೇಳಿ ನಿತ್ಯದಂತೆ, ತಂದೆಯು ಮಗಳನ್ನು ವಾತ್ಸಲ್ಯದಿಂದ ಕಾಲನ್ನು ಸವರುವ ರೀತಿ ಸವರಿದರೆ ಹಿಂದಕ್ಕೆ ಸರಿಯುವುದಿಲ್ಲ. ಅವನು ಮುತ್ತಿಡಲು ಬಂದಾಗಲೂ ಸುಮ್ಮನಿರುತ್ತೇನೆ. ಹೀಗೆ ನಡೆದುಕೊಂಡಲ್ಲಿ ಪೆರ್ರಿಯು ಹೇರಳವಾಗಿ ಅಧಿಕ ಬೆಲೆಗೆ ವಿಗ್ರಹಗಳನ್ನು ಮಾರಬಹುದು " ಎಂದುಕೊಂಡಳು.

ಕೋಶಾಧ್ಯಕ್ಷ ಪಾಲನು ಬಾಗಿಲನ್ನು ತಟ್ಟಿದನು. ಜನೆಟ್ ಬಾಗಿಲು ತೆರೆದು ಲಜ್ಜೆಯಿಂದ ತಲೆ ತಗ್ಗಿಸಿ ನಿಂತಳು. ಮುಖವು ಕೆಂಪಗಾಗಿತ್ತು. ಪಾಲ್ ಪಕ್ಕದಲ್ಲೇ ಕುಳಿತುಕೊಳ್ಳಲು ಹೇಳಿ ತಾನು ಎಷ್ಟು ಪ್ರೀತಿಸುವೆನೆಂದು ನಾಚಿಕೆ ಕೂಡ ಇಲ್ಲದೆ ಕಿವಿಯಲ್ಲಿ ಉಸರಿದನು.

ಪೆರ್ರಿ ರಾಜಧಾನಿಗೆ ಹೋಗಿದ್ದುದರಿಂದ ರಾತ್ರಿ ಕತ್ತಲಾದ ಮೇಲೆ ಹೊತ್ತಾಗಿ ಬರುತ್ತಾನೆಂದು ಮೊದಲೇ ತಿಳಿದಿದ್ದ ಪಾದ್ರಿ, ಧೈರ್ಯವಾಗಿ ' ಪೆರ್ರಿ ಹೊರಗೆ ಹೋಗಿದ್ದಾನಲ್ಲವಾ ಚಿನ್ನ ?' ಎಂದು ಕೇಳಿದನು.

ಜನೆಟ್ಟಳು "ಬೆಳಗ್ಗನೇ ಹೋದರು" ಎಂದಂತೆ ಪಾಲನು ಅವಳನ್ನು ಹತ್ತಿರ ಸೆಳೆದು ತೊಡೆಯ ಮೇಲೆ ಕೂಡಿಸಿಕೊಂಡನು. ಜನೆಟ್ಟಳು ಓರೆಗಣ್ಣಿನಿಂದ ಒಲುವನ್ನು ಸೂಚಿಸುವಂತೆ ನಸುನಕ್ಕು,

" ಈಗಲೇ ಬೇಡ. ನಾವಿಬ್ಬರೂ ಸ್ನಾನಮಾಡುವುದಕ್ಕೆ ಬಿಸಿ ನೀರು ಕಾಸಿದ್ದೇನೆ. ಇವತ್ತು ತುಂಬಾ ಚಳಿ ಆಗುತ್ತಿದೆ ಸ್ನಾನಮಾಡಿದರೆ ಹಿತವಾಗಿರುತ್ತದಲ್ಲವಾ ?" ಎಂದಳು.

ಅವಳ ಇನಿಮಾತನ್ನು ಕೇಳಿ ಪಾಲಿನ ಕಿವಿ ನೆಟ್ಟಗಾಯಿತು. " ಏನೆಂದೆ? ಇಬ್ಬರೂ ಮಾಡೋಣಾಂತ ಹೇಳಿದೆಯಾ " ಎಂದು ಕಾತುರನಾಗಿ ಕೇಳಿದನು.

''ಯಾಕೆ? ಮಾಡಬಾರದೇನು? ನೀವು ಬಟ್ಟೆಯನ್ನೆಲ್ಲಾ ಬಿಚ್ಚಿ. ಟಬ್ಬಿನಲ್ಲಿ ಬಿಸಿ ಬಿಸಿ ನೀರು ತೋಡಿದ್ದೇನೆ ".

ಪಾಲನು ಬಟ್ಟೆಗಳನ್ನು ಕಳಚುತ್ತಿದ್ದಾಗ ಜನೆಟ್ಟಳು ಮುಗ್ಧಳಾಗಿ ನೋಡುತ್ತಾ ನಿಂತಳು. ಅವಳು ಸ್ನಾನಕ್ಕೆ ಸಿದ್ಧಮಾಡಿದ ಪಾತ್ರೆಯನ್ನು ಪೆರ್ರಿಯು ಪ್ಲಾಸ್ಟರ್ ಕಲಿಸಲು ಉಪಯೋಗಿಸುತ್ತಿದ್ದನು.

'' ಬೇಗ ! ನೀರಿನಲ್ಲಿಳಿಯಿರಿ ಇಲ್ಲದಿದ್ರೆ ನೀರು ಆರಿಹೋದೀತು. " ಎಂದು ಕಿಟಕಿಯನ್ನು ಭದ್ರವಾಗಿ ಹಾಕಲು ಸ್ವಲ್ಪ ಹಿಂದಕ್ಕೆ ತಳ್ಳಿ ''ಅಯ್ಯೋ ! ಈಗೇನು ಮಾಡುವುದು ?'' ಎಂದಳು.

ಬಿಸಿ ನೀರಿನಲ್ಲಿ ಕುಳಿತಿದ್ದ ಪಾಲನು ಗಾಬರಿಯಿಂದ ಡೊಳ್ಳು ಕೊಟಿ ಬಿಟ್ಟುಕೊಂಡು ಎದ್ದು ನಿಂತು " ಯಾರು ಬರುತ್ತಿದ್ದಾರೆ?" ಎಂದು ಕೀರಲು ಧ್ವನಿಯಲ್ಲಿ ಕಿರಚಿದನು.

" ನನಗೆ ಅರ್ಥವೇ ಆಗುತ್ತಿಲ್ಲ ಅವರು ಎರಡು ಗಂಟೆಗೇ ಹಿಂತಿರುಗಿ ಬರುತ್ತಿದ್ದಾರಲ್ಲಾ '' ಎಂದು ಮೃದುವಾಗಿ ಹೇಳಿದಳು ಜನೆಟ್.

"ನನ್ನನ್ನು ಎಲ್ಲಾದರೂ ಬಚ್ಚಿಡು ದಮ್ಮಯ್ಯ ಮಾನ ಹೋಗುತ್ತದೆ."

"ಅಕೋ ಅಲ್ಲಿ ಒಂದು ಪೀಪಾಯಿ ಕಾಣಿಸುತ್ತಲ್ಲಾ ಅದರಲ್ಲಿ ಅವಿತು ಕೊಳ್ಳಿ. ಪೀಪಾಯಿಯಲ್ಲಿ ಬಗ್ಗಿ ಯಾರು ನೋಡುವುದಿಲ್ಲ."

ಪಾಲನು ಎದ್ದು ಓಡಿ ಡ್ರಮ್ಮಿನಲ್ಲಿ ಹಾರಿದನು. ಡ್ರಮ್ಮಿನ ತುಂಬಾ ಕೋರೈಸುತ್ತಿದ್ದ ಬಿಳಿಯ ಬಣ್ಣವಿತ್ತು. ಮೊದಲೇ ಬಿಸಿಬಿಸಿ ನೀರಿನಲ್ಲಿ ಕುಳಿತು ಚರ್ಮ ಕೆಂಪಗಾಗಿದ್ದ ಪಾದ್ರಿ, ಮಂಜಿನ ಗಡ್ಡೆಯಂತೆ ಶೀತಲವಾದ ಬಣ್ಣದಲ್ಲಿ ಕುಳಿತಂತೆ ಪ್ರಾಣವೇ ಹೋದ ಹಾಗೆ ಆಯಿತು. ತಕ್ಷಣವೇ ಮೇಲಕ್ಕೆದ್ದನು. ತಲೆಯಿಂದ ಕಾಲಿನವರೆಗೆ ಬಿಳಿಯ ಬಣ್ಣವು ಮೆತ್ತಿಕೊಂಡಿತ್ತು. ನಡಗುತ್ತಾ "ಚಳಿ ತಡಿಯುವುದಕ್ಕಾಗುವುದಿಲ್ಲ. ಬೆಚ್ಚಗಿರುವ ಜಾಗವನ್ನು ತೋರಿಸು ಪುಣ್ಯ ಬರುತ್ತದೆ" ಎಂದು ಅಂಗಲಾಚಿದನು ಪಾದ್ರಿ ಪಾಲ್.

ಜನೆಟ್ 'ನೋಡಿ ಅಲ್ಲಿ ವಿಗ್ರಹಗಳ ಸಾಲು ಇವೆಯಲ್ಲಾ ಅವುಗಳ ಮಧ್ಯೆ ವಿಗ್ರಹದ ಹಾಗೇ ನಿಂತುಕೊಳ್ಳಿ. ಬಂದವರು ನಿಮ್ಮನ್ನೂ ವಿಗ್ರಹವೇ ಎಂದು ತಿಳಿದುಕೊಳ್ಳುತ್ತಾರೆ' ಎಂದಳು.

ಬಿಳಿಯ ಬಣ್ಣವು ದೇಹಕ್ಕೆ ದಪ್ಪವಾಗಿ ಮೆತ್ತಿಕೊಂಡಿದ್ದರಿಂದ ಅವನಿಗೂ ವಿಗ್ರಹಗಳಿಗೂ ವ್ಯತ್ಯಾಸವೇ ಕಾಣಿಸುತ್ತಿರಲಿಲ್ಲ. ದೇವತೆಗಳು ಮತ್ತು ದಾನವ ಮೂರ್ತಿಗಳ ಮಧ್ಯೆ ಪಾಲ್ ಶಿಲೆಯಂತೆಯೇ ನಿಂತುಕೊಂಡನು.

ಜನೆಟ್ "ಕೈಯಲ್ಲಿ ಈ ಬಾಣಗಳನ್ನು ಹಿಡಿದುಕೊಳ್ಳಿ .... ಹಾಗೇ! ಈಗ ನೀವು ಸೈಂಟ್ ಸಲಸ್ಟೈನ್ ತದ್ರೂಪ ಇದ್ದ ಹಾಗೆ ಇದ್ದೀರ!" ಎಂದು ಬಾಣಗಳನ್ನು ಕೊಟ್ಟಳು

ಸ್ವಲ್ಪ ಹೊತ್ತಾದ ಮೇಲೆ ಪೆರ್ರಿ ಮತ್ತು ಅವನ ಗೆಳೆಯರು ಗಟ್ಟಿಯಾಗಿ ಮಾತನಾಡುತ್ತಾ ಮನೆಯನ್ನು ಪ್ರವೇಶಿಸಿದರು.

ಪೆರ್ರಿ "ಜನೆಟ್! ನೆನ್ನೆ ತಂದ ಹೊಸ ಹೆಂಡದ ಶೀಸೆಯನ್ನು ತೆಗೆದುಕೊಂಡು ಬಾ. ಸೈಂಟ್ ಜಾರ್ಜ್ ದೇವಾಲಯಕ್ಕೆ ಒಂದು ವಿಗ್ರಹವನ್ನು ಮಾರಿದ್ದೇನೆ" ಎಂದು ಹೆಂಡತಿಯ ಕಡೆ ತಿರುಗಿ ಕಣ್ಣು ಮಿಟುಕಿಸಿದನು.

ಎಲ್ಲರೂ ಕುಳಿತು ಪೂರ್ತಿ ಶೀಸೆಯನ್ನು ಖಾಲಿಮಾಡಿದನಂತರ ಮಿತ್ರರಲ್ಲೊಬ್ಬನು ವಿಗ್ರಹಗಳ ಸಾಲಿನ ಮಧ್ಯೆ ನಿಂತಿದ್ದ ಪಾದರಿಪಾಲನ ಕಡೆ ಕೈತೋರಿಸಿ 'ಪೆರ್ರಿ! ಆ ಡೊಳ್ಳು ಹೊಟ್ಟೆ ಬಿಟ್ಟುಕೊಂಡಿರುವ ವಿಗ್ರಹವು ಬಹಳ ಚನ್ನಾಗಿದೆ. ನೋಡಿದರೆ ಜೀವದಿಂದ ಇರುವಂತೆ ವಾಸ್ತವಿಕವಾಗಿದೆ. ಭೇಷ್! ನೋಡಿದ ತಕ್ಷಣ ನಿಜವಾಗಿ ಮನುಷ್ಯನೇ ನಿಂತಿರಬೇಕೆಂದು ಕೊಂಡೆ. ಇಷ್ಟು ಸೊಗಸಾಗಿದ್ದರೂ ಬಿಷಪ್ ಏನು ಹೇಳು (ಬಿಷಪ್-ಮಠಾಧಿಪತಿ) ತ್ತಾರೋ ಗೊತ್ತಿಲ್ಲ. ಕೋಪಗೊಳ್ಳುವುದಿಲ್ಲವೇ ? ಸ್ವಾಭಾವಿಕವಾಗಿದೆ ಒಪ್ಪಿದೆ. ಆದರೆ ಒಂದು ಸಣ್ಣ ವಿಷಯುವನ್ನು ಮರೆತು ಬಿಟ್ಟದ್ದಿ. ಅಂಜೂರದ ಎಲೆಯನ್ನಾದರೂ ಸಿಕ್ಕಿಸಬೇಕಾಗಿತ್ತು" ಎಂದನು.

ಪೆರ್ರಿಯು ಅಚಾತುರ್ಯವಾಯಿತೆಂಬಂತೆ ಮುಖವನ್ನು ಮಾಡಿಕೊಂಡನು. ಜನೆಟ್ಟಳು "ನಾನು ವಿಗ್ರಹಮಾಡುವಾಗಲೇ ಹೇಳಿದೆ ಅಂಜೂರದ ಎಲೆ ಸಿಕ್ಕಿಸೀಂತ. ಕಿವಿ ಮೇಲೆ ಹಾಕಿಕೊಳ್ಳಲಿಲ್ಲ. ತಮ್ಮದೇ ಹಟ" ಎಂದಳು.

ಮತ್ತೊಬ್ಬ ಗೆಳೆಯನು "ಅಲಕ್ಷ್ಯಮಾಡಬಾರದಾತ್ತು. ಬಿಷಪ್ಪಿಗೆ ಕೋಪ ಏನಾದರೂ ಬಂದರೆ ತಕ್ಷಣ ನಿನ್ನ ಅಂಗಡಿಯುನ್ನು ಮುಚ್ಚುವ ಹಾಗೆ ಮಾತ್ರವಲ್ಲ ಊರೇ ಬಿಟ್ಟು ಹೋಗುವ ಹಾಗೆ ಮಾಡುತ್ತಾರೆ" ಎಂದನು.

"ನಿಜವಾಗಲೂ ಹಾಗೆ ಮಾಡುತ್ತಾರಾ ?" ಎಂದು ಕೇಳಿದನು ಪೆರ್ರಿ.

ಮತ್ತೊಬ್ಬ ಮಿತ್ರ "ಮಾಡಿದರೂ ಮಾಡಬಹುದು" ಎಂದನು.

ಪೆರ್ರಿ ತಲೆಯನ್ನಲ್ಲಾಡಿಸಿ "ಪ್ಲಾಸ್ಟರ್ ಒಣಗಿ ಗಟ್ಟಿಯಾಗಿ ಬಿಟ್ಟಿದೆ. ಈಗ ಏನು ಮಾಡುವುದಕ್ಕೂ ಸಾಧ್ಯವಿಲ್ಲ" ಎಂದು ವಿಗ್ರಹದ ಹತ್ತಿರ ಹೋಗಿ ಸೂಕ್ಷ್ಮವಾಗಿ ಪರೀಕ್ಷಿಸುವಂತೆ ನಟಿಸಿ ಸ್ವಲ್ಪ ಹೊತ್ತು ಯೋಚಿಸುತ್ತಾ ನಿಂತು "ಈಗ ಹೊಳೆಯಿತು! ಸಿಕ್ಕಿಸಲು ಸಾಧ್ಯವಾಗದಿದ್ದರೆ ಏನೀಗ? ಆ ಸ್ಥಳವನ್ನು ಕತ್ತರಿಸಿ ಹಾಕಿದರೆ ಆಯಿತು. ಜನೆಟ್! ಉಳಿ, ದೊಡ್ಡಮರದ ಸುತ್ತಿಗೆ (ಕೊಡತಿ) ಯನ್ನು ತೆಗೆದುಕೊಂಡು ಬಾ'' ಎಂದನು.

ಸುತ್ತಿಗೆ ಮತ್ತು ಉಳಿಯನ್ನು ಹಿಡಿದು ಸಮೀಪಿಸಿದಂತೆ, ವಿಗ್ರಹಕ್ಕೆ ಇದ್ದಕ್ಕಿದಂತೆ ಜೀವ ಬಂದು ತ್ವರಿತವಾಗಿ ಹೆಜ್ಜೆಯಿಡುತ್ತಾ ಬಾಗಿಲನ್ನು ತೆರೆದು ಬೀದಿಗೆ ಓಡಿತು. ವಿಗ್ರಹವು ನಡೆದು ಹೋದ ದಾರಿ ಉದ್ದಕ್ಕೂ ಅದರ ಹೆಜ್ಜೆಯ ಗುರುತುಗಳೇ ! ಬಂದ ಗೆಳೆಯರು, ಪೆರ್ರಿ ಮತ್ತು ಜನೆಟ್ ಹೊಟ್ಟೆ ಹುಣ್ಣಾಗುವವರೆಗೂ ನಕ್ಕರು.

ಒಂದು ವಾರದಲ್ಲಿ ಮಠಕ್ಕೆ ಹೊಸ ಕೋಶಾಧ್ಯಕ್ಷನು ನಿಯಮಿತನಾದ. ಊರಿನ ಜನರು ಕೂಡ ನಿರಾಲೋಚನೆಯಿಂದ ಉಸಿರ್ಗರೆದರು.



# ಆದರ್ಶ ಗೆಳೆತನ

ಬರೆದವರು : **ಗಿಯೋವಾನಿ ಸ್ಪರ್ಸಾರೋಲಾ**

ಜಿನೋವಾದಲ್ಲಿದ್ದ ಆರ್ಥಿಲೋ ಮತ್ತು ಲಿಬರಾಲೆ ಲಂಗೋಟಿ ಸ್ನೇಹಿತರು. ಅವರ ಗೆಳೆತನವು ಎಷ್ಟರ ಮಟ್ಟಿಗೆ ಇತ್ತೆಂದರೆ ಇಬ್ಬರೂ ಹೆಂಡಂದಿರನ್ನೂ ಪರಸ್ಪರ ಲೋಕಾಭಿರಾಮವಾಗಿ ಬದಲಾಯಿಸಿ ಕೊಳ್ಳುತ್ತಿದ್ದರಂತೆ. ಹಾಗೇಂತ ಊರಿನಲ್ಲಿ ಪುಕಾರು.

ಪುಕಾರಿಗೆ ಕಾರಣವಿಲ್ಲದೆ ಇಲ್ಲ ಇಬ್ಬರೂ ತಮ್ಮ ಗೆಳೆತನವನ್ನು ಈ ವಲಯದಲ್ಲೂ ಬೆಳೆಸಿ ಸುಖ ಸಂತೋಷಗಳಿಂದ ಕಳೆಯುವುದಕ್ಕೆ ಒಂದು ಘಟನೆ ನಡಿಯಿತು. ಇದು ಪ್ರಾಯಶಃ ಜನಗಳಿಗೆ ತಿಳಿಯದು.

ಆರ್ಥಿಲೋ ತನ್ನ ಮಡದಿಯೊಡನೆ, ಲಿಬರಾಲೆ, ತನ್ನ ಹೆಂಡತಿಯೊಟ್ಟಿಗೆ ಪ್ರತ್ಯೇಕವಾಗಿ ಮಲಗಿಕೊಳ್ಳುತ್ತಿದ್ದ ಕಾಲವೂ ಒಂದಿತ್ತು. ಆಗ ಒಬ್ಬನ ಹೆಂಡತಿಯು ಮತ್ತೊಬ್ಬನಿಗೆ ಆಕರ್ಷಣೀಯವಾಗಿ ಕಂಡಿದ್ದರೂ ಕಣ್ಣೆತ್ತಿ ಕೂಡ ನೋಡುತ್ತಿರಲಿಲ್ಲ. ಅವರ ಗೆಳೆತನವು ಅಷ್ಟು ಗಾಢವಾಗಿತ್ತು. ಒಡಹುಟ್ಟಿದ ಸಹೋದರರಿಗೂ ಹೆಚ್ಚಾಗಿ ವರ್ತಿಸುತ್ತಿದ್ದರು. ಆರ್ಥಿಲೋವಿನ ಮಡದಿ ಡೇರಿಯಾ ಲತೆಯಂತೆ ಕೋಮಲವಾಗಿದ್ದಳು ಕೃಶಾಂಗಿ. ಸೇಬಿನಂತೆ ಪುಟ್ಟ ಪುಟ್ಟ ದುಂಡಾದ ಸ್ತನದ್ವಯಗಳು. ಕಿರಿದಾದ ಸೊಂಟ. ಮಾಟವಾದ ಕಾಲುಗಳು. ನೀಳವಾದ ಬಾಹುಗಳು. ಗಂಧರ್ವ ಕನ್ಯೆಯಂತೆ ಸಣ್ಣ ಪಾದಗಳು, ಲಿಬರಾಲೆಯ ಹೆಂಡತಿಯು ಪ್ರೊಸರ್ಪಿಯಾ ಮೈ ತುಂಬಿಕೊಂಡು ಕಲ್ಲಿನಲ್ಲಿ ಕೆತ್ತಿದ ಶಿಲಾಬಾಲಿಕೆಯಂತೆ ಇದ್ದಳು. ಉಬ್ಬಿರಬೇಕಾದ ಸ್ಥಾನಗಳು, ಕಣಿವೆಯಂತೆ ತೋರುವ ಎಡೆಗಳು, ಸೂಜಿಗಲ್ಲು ಆಕರ್ಷಿಸುವಂತೆ ಕಣ್ಣನ್ನು ಸೆಳೆದು ನಿಲ್ಲಿಸುತ್ತಿದ್ದವು. ಮಾಟವಾದ ಮುಂಚಾಚಿದ ಮೊಲೆಗಳು. ವಿಶಾಲ ಜಘನ – ಕಿರಿದಾದ ಕಟಿ, ಕಂಭದಂತೆ ತುಂಬಿದ ತೊಡೆಗಳು ಒಟ್ಟಾರೆ ಇಬ್ಬರೂ ಒಂದೊಂದು ರೀತಿ ಮನಸ್ಸನ್ನು ಅಪಹರಿಸುವಂತಹ ಸುಂದರಿಯರು.

ರಾತ್ರಿ ದೀಪವನ್ನು ಆರಿಸಿ ಮಲಗಿದಾಗ ಇಬ್ಬರೂ ಸಿಂಹಣಿಗಳಂತೆ ಉದ್ರಿಕ್ತರಾಗುತ್ತಿದ್ದರು.

ಒಂದು ದಿವಸ ಆರ್ಥಿಲೋ ಯಾವುದೋ ಕೆಲಸದ ಮೇಲೆ ಬೇರೆ ಊರಿಗೆ ಹೋಗಬೇಕಾಗಿ ಬಂದಿತು. ಪಕ್ಕದ ಮನೆಯಲ್ಲೇ ಇದ್ದ ಗೆಳೆಯನಿಗೆ ' ಲಿಬರಾಲೆ, ನಾನು ಊರಿಗೆ ಹೋಗಬೇಕಾಗಿದೆ. ಯಾಕೋ ಮನಸ್ಸಿಗೆ ಸಮಾಧಾನವಿಲ್ಲ. ಬಹಳ ಯೋಚನೆಯಾಗಿದೆ. ನಾನು ಊರಿನಲ್ಲಿಲ್ಲದಿರಬೇಕಾದರೆ ನನ್ನ ಹೆಂಡತಿಯನ್ನು ವಿಚಾರಿಸಿಕೊಳ್ಳುವರು ಯಾರೂ ಇಲ್ಲ. ಅಲ್ಲದೆ ಅವಳು ಮನಸ್ಸಿಗೆ ಬಂದ ಹಾಗೆ ದುಡ್ಡು ಖರ್ಚು ಮಾಡುತ್ತಾಳೆ - ದುಡ್ಡಿನ ಬೆಲೆ ಅವಳಿಗೆ ಗೊತ್ತಿಲ್ಲ. ಅಲ್ಲದೆ ಅಲ್ಲಿ ಇಲ್ಲಿ ಅಲಿಯಬಹುದು ತಿಳಿವಳಿಕೆ ಕಡಿಮೆ. ಹೆಂಗಸರಿಗೆ ಯಾವಾಗಲೂ ಅಷ್ಟೇ ಅನ್ನು. ಗಂಡನು ಬೆನ್ನು ತಿರುಗಿಸಿದರೆ ಮನೆಗೆ ತಾವೇ ಸರ್ವಸ್ವಾಂತ ಸ್ವೇಚ್ಛೆಯಾಗಿ ವರ್ತಿಸುತ್ತಾರೆ. ಅಲ್ಲದೆ ಅವಳು ಮೂರು ತಿಂಗಳ ಗರ್ಭಿಣಿ. ಹುಷಾರಿಲ್ಲ. ನೀನು ಎದುರಿಗಿದ್ದು ಸೂಕ್ತವಾದ ಸಲಹೆಯನ್ನು ಕೊಟ್ಟರೆ ಒಳ್ಳೆಯದು " ಎಂದನು.

ಲಿಬರಾಲೆ "ಇದಕ್ಕೆ ಇಷ್ಟು ಪೀಠಿಕೆಯಾ ? ಅದಕ್ಕೇನೋ .... ನೋಡಿಕೊಳ್ಳುತ್ತೇನೆ. ನೀನು ನಿರಾಲೋಚನೆಯಿಂದಿರು " ಎಂದನು.

" ನಿನ್ನ ಹತ್ತಿರವೇ ಯಾಕೆ ಹೇಳುತ್ತೇನೆ ಅಂದರೆ ನೀನು ನನ್ನ ಸ್ನೇಹಿತ. ನಿನ್ನ ಮೇಲೆ ನನಗೆ ಅಷ್ಟು ನಂಬಿಕೆ.

ಆರ್ಥಿಲೋ ಊರು ಬಿಟ್ಟು ಹೋದ ದಿವಸ ಬೆಳಗ್ಗೆಯೇ ಲಿಬರಾಲೆಯು ಗೆಳೆಯನ ಮನೆಗೆ ಹಾಜರಾಗಿ " ಡೇರಿಯಾ ... ಹೇಗಿದ್ದಿ ? ಏನಾದರೂ ನನ್ನಿಂದ ಆಗಬೇಕಾಗಿದ್ದರೆ ಸಂಕೋಚವಿಲ್ಲದೆ ಹೇಳು. ನಾನು ನಿನ್ನ ಗಂಡನ ಪ್ರಾಣಸ್ನೇಹಿತ. ನನ್ನನ್ನು ಕಂಡರೆ ನಿನ್ನ ಯಜಮಾನನಿಗೆ ಬಹಳ ನಂಬಿಕೆ, ವಿಶ್ವಾಸ - ಅದಕ್ಕೇ ವಿಚಾರಿಸಲು ಹೇಳಿದ್ದಾನೆ. ನನ್ನನ್ನು ಕಷ್ಟಕಾಲದಲ್ಲಿ ಊರುಗೋಲು ಎಂಡೇ ತಿಳಿದುಕೋ ...." ಎಂದನು.

ಡೇರಿಯಾ ' ನಮ್ಮ ಯಜಮಾನರಿಗೆ ನಿಮ್ಮ ಮೇಲೆ ಬಹಳ ನಂಬಿಕೆ ವಿಶ್ವಾಸ. ಮಾತು ಮಾತಿಗೂ ನಿಮ್ಮನ್ನು ಹೊಗಳುತ್ತಲೇ ಇರುತ್ತಾರೆ.

ಸಂಕೋಚ ಯಾಕೆ. ಏನಾದರೂ ಬೇಕಾದರೆ ಖಂಡಿತ ಕೇಳುತ್ತೇನೆ" ಎಂದಳು.

ಲಿಬರಾಲೆಯು ಬರುತ್ತೇನೆಂದು ಹೇಳಿ ಹೊರಟನು. ಅವನ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲವೆದ್ದಿತು. "ವಾಹ್ ಕೈ ಹಿಡಿದರೆ ಇಂಥಹವಳ ಕೈಹಿಡಿಯಬೇಕು. ಎಷ್ಟು ಮುದ್ದಾಗಿದ್ದಾಳೆ! ಆರ್ಥೇಲೊ ನಿಜಕ್ಕೂ ಅದೃಷ್ಟವಂತ! ನನ್ನ ಹೆಂಡತಿಯು ಮೈ, ಕೈ, ಕಾಲು ತುಂಬಿಕೊಂಡು ಲಕ್ಷಣವಾಗಿದ್ದಾಳೆ. ಆದರೆ .... ಡೇರಿಯಾ .... ಲತೆಯಂತೆ ತೆಳ್ಳಗೆ ಬೆಳ್ಳಗೆ ಬಳಕುತ್ತಾಳೆ. ಅವಳ ಮೊಲೆಗಳು ಮಾಟವಾಗಿ ಸೇಬಿನ ಹಣ್ಣುಗಳಂತಿವೆ. ಎಷ್ಟು ಚಿಕ್ಕ ಸೊಂಟ! ಕಾಲುಗಳು ಬಾಳೆಯ ಕಂಬಗಳಂತೆ ಎಷ್ಟು ಮಾಟವಾಗಿವೆ. ಪಾದಗಳಂತೂ ಗಂಧರ್ವಕನ್ಯೆಯ ಪಾದಗಳ ರೀತಿ ಪುಟ್ಟದಾಗಿವೆ. ನೀಳವಾದ ಬಾಹುಗಳು. ದೇಹವೂ ಹತ್ತಿಯ ಹಾಗೆ ಮೃದುವಾಗಿರಬೇಕು. ಮಾತಿಗೆ ಹೇಳುತ್ತೇನೆ. ಎಲ್ಲಾ ಹೆಂಗಸರೂ ಒಂದೇ ರೀತಿ ಇದ್ದಿದ್ದರೆ ಜೀವನವು ಎಷ್ಟು ಶುಷ್ಕವಾಗಿರುತ್ತಿತ್ತು. ನೀರಸವಾಗಿರುತ್ತಿತ್ತು. ಒಬ್ಬೊಬ್ಬ ಹೆಂಗಸೂ ಒಂದೊಂದು ರೀತಿ ಆಕರ್ಷಕವಾಗಿರುವುದರಿಂದಲೇ ಯೋಗಿಗಳ ಮನಸ್ಸು ಕೂಡ ಕದಡಿ ಹುಚ್ಚರಾಗುತ್ತಾರೆ" ಎಂದು ಮನಸ್ಸು ಎತ್ತೆತ್ತಲೋ ಹರಿದಾಡಿತು.

ಅವತ್ತು ಲಿಬರಾಲೆಯು ರಾತ್ರಿಯನ್ನು ಹೇಗೆ ಕಳೆದನೋ ಅವನಿಗೇ ಗೊತ್ತು. ಕಣ್ಣುಮುಚ್ಚಿದರೆ ಡೇರಿಯಾಳ ರೂಪಲಾವಣ್ಯವು ಕಣ್ಣಿನ ಮುಂದೆ ಬಂದು ನಿಲ್ಲುತ್ತಿತ್ತು. ಪಕ್ಕದಲ್ಲಿ ಪ್ರೊಪರ್ಷಿಯಾಳು ಮಲಗಿದ್ದರೂ ಅವಳ ಕಡೆ ಕೂಡ ಹೊರಳಲಿಲ್ಲ.

ಬೆಳಗಾದ ಮೇಲೂ ಅವನ ಮನಸ್ಸು ಸಮಾಧಾನಕ್ಕೆ ಬರಲಿಲ್ಲ. ಸೂರ್ಯನ ಕಿರಣಗಳು ಬರುಬರುತ್ತಾ ತೀಕ್ಷ್ಣವಾಗುತ್ತಿದ್ದಂತೆ, ಲಿಬರಾಲೆಯ ಮನಸ್ಸು ಡೇರಿಯಾಳನ್ನು ನೋಡಬೇಕೆಂದು ಕಿಚ್ಚೆದ್ದಿತು. ಡೇರಿಯಾ ಮೂರು ತಿಂಗಳ ಗರ್ಭಿಣಿಯಾಗಿದ್ದರೂ ಅತ್ಯಂತ ರೂಪವತಿಯಾಗಿ ಕಂಡು ಬಂದಳು. ಸ್ನೇಹಿತನ ಮನೆಯನ್ನು ಹೊಕ್ಕು "ಬೆಳಗ್ಗೆ ಏನೂ ಆಲಸ್ಯವಿಲ್ಲವಷ್ಟೇ"? ಎಂದು ಕೇಳಿದನು.

''ಏನಿಲ್ಲ-ಒಂದೊಂದು ಸಲ ಯಾಕೋ ತಲೆಸುತ್ತಿ ಬರುತ್ತದೆ. ಅಷ್ಟೆ.''

ಲಿಬರಾಲೆಗೆ ಹೀಗಾಗಲು ಕಾರಣವೇನೆಂದು ತಿಳಿದಿದ್ದರೂ "ಯಾಕೆ, ಏನಾಗಿದೆ?" ಎಂದು ಕಾತುರತೆಯನ್ನು ತೋರುವಂತೆ ಕೇಳಿದನು.

''ನೀವು....ನನ್ನ ಯಜಮಾನರ ಸ್ನೇಹಿತರು. ಅದಕ್ಕೇ ಹೇಳುತ್ತೇನೆ. ನನಗೆ ಮೂರು ತಿಂಗಳಾಗಿದೆ.''

"ಗರ್ಭಿಣಿಯಾ ? ಹಾಗಿದ್ದೂ ಅರ್ಥೆಲೊ ನಿನ್ನೊಬ್ಬಳನ್ನೇ ಬಿಟ್ಟು ಹೋದನಾ ? ಛೇ ! ಅನ್ಯಾಯ ಅನ್ಯಾಯ !"

''ಯಾಕೆ ? ಬಿಟ್ಟು ಹೋದರೇನಾಯಿತು ? ಮಗುವು ಹುಟ್ಟುವ ಹೊತ್ತಿಗೆ ಊರಿಗೆ ಬರುತ್ತಾರೆ."

"ಅಷ್ಟು ಹೊತ್ತಿಗೆ ಬರುತ್ತಾನೇಂತ ನನಗೂ ಗೊತ್ತು. ಆದರೂ ನನಗೆ ಬಹಳ ಅನ್ಯಾಯಮಾಡಿದ್ದಾನೆ. ಮೂರು ಮಾಸದ ಗರ್ಭಿಣಿಯಾಗಿರುವಾಗ ನಿತ್ಯವೂ ರಾತ್ರಿ ಮಾಡಬೇಕಾದ ಕೆಲಸವನ್ನು ಮಾಡದೆ ಹೋದದ್ದು ತಪ್ಪು. ಕೈಕಾಲು ಊನವಾಗಿಯೋ, ಕುರುಡೊ, ಕಿವುಡೋ, ಬೆಪ್ಪೋ ಆಗಿ ಮಗು ಹುಟ್ಟುವುದನ್ನು ನೀನು ಕೇಳಿಲ್ಲವೆ ? ಈ ರೀತಿ ಹುಟ್ಟುವುದಕ್ಕೆ ಕಾರಣ ವೇನು ಗೊತ್ತಾ ? ಅಪೂರ್ಣವಾಗಿ ಕೆಲಸವನ್ನು ಮಧ್ಯದಲ್ಲೇ ನಿಲ್ಲಿಸುವುದ ರಿಂದ. ಮಾಡುವ ಕೆಲಸವನ್ನು ಪೂರ್ತಿಯಾಗಿ ಮಾಡಬೇಕು ..."

"ಹಾಗಾ ? ಅವರು ಮಾಡಬೇಕಾಗಿದ್ದ ಕೆಲಸವನ್ನು ಅರ್ಧದಲ್ಲೇ ನಿಲ್ಲಿಸಿ ಊರಿಗೆ ಹೋಗಿರುವುದರಿಂದ ಯಾವುದಾದರೂ ಅಂಗವು ಊನವಾಗಿ ಹುಟ್ಟುತ್ತದಾ ? ಇದು ನಿಜವೇ ?"

"ನನಗೇನೋ ಹಾಗೇಂತ ಕಾಣಿಸುತ್ತದೆ. ಯಾಕೆ ? ... ನಾನು ಹೀಗೆ ಹೇಳಿದೆ ಅಂತ ಹೆಸರಿಕೇನಾ ?"

"ನನಗೇನೋ ಹಾಗಿರಲಾರದೂಂತ ತೋರುತ್ತದೆ....ಆದರೂ ಈಗೇನು ಮಾಡಬೇಕೂಂತಿರಿ'' ಎಂದು ಡೇರಿಯಾ ಕಣ್ಣೀರು ಸುರಿಸಿದಳು.

ಲಿಬರಾಲೆಯು ನಿಟ್ಟುಸಿರು ಬಿಟ್ಟು ''ಇದಕ್ಕೆ ಒಂದೇ ಮದ್ದು" ಎಂದು ಡೇರಿಯಳನ್ನು ಸೆಳೆದಪ್ಪಿದನು.

ಡೇರಿಯುಳು ಅವಾಕ್ಕಾಗಿ "ಲಿಬರಾಲೆ ! .... ವೈಮರೆತಿರಾ ? .... ಇದೇನು ನೀವು ಮಾಡುತ್ತಿರುವುದು ?" ಕೇಳಿದಳು.

ಕುಪ್ಪಸದ ಗುಂಡಿಗಳನ್ನು ಬಿಚ್ಚುತ್ತಾ "ಯಾಕೇಂತ ಹೇಳುತ್ತೇನೆ" ಎಂದನು ಲಿಬರಾಲೆ.

"ನಮ್ಮ ಯಜಮಾನರು ನಿಮ್ಮನ್ನ ... (ದೀರ್ಘಕಾಲ ಅವಳ ಚಂದುಟಿಗಳನ್ನು ಚುಂಬಿಸಿದ್ದರಿಂದ ಮಾತನಾಡಲು ಆಗಲಿಲ್ಲ.) ನಿಮ್ಮನ್ನ ಪ್ರಾಣಸ್ನೇಹಿತರೊಂತ ತಿಳಿದುಕೊಂಡಿದ್ದಾರೆ. ನಂಬಿಕೆಗೆ ದ್ರೋಹಮಾಡುವುದು ನ್ಯಾಯವೆ?"

"ನಿಜ, ನೀನು ಹೇಳುವುದು ಅಕ್ಷರಶಃ ನಿಜ. ಯಾರಿಲ್ಲಾಂದರು" ಎಂದು ಮಾಟವಾದ ಮೊಲೆಗಳನ್ನು ಎವೆ ಇಕ್ಕದೆ ನೋಡಿ ಮನಸ್ಸಿನಲ್ಲೇ ಹಿಗ್ಗಿದನು.

"ನೀವು ಸರಿಯಾಗಿ ನಡಿದು ಕೊಳ್ಳುತ್ತೀರೆಂದು ವಿಶ್ವಾಸದಿಂದ ತಾನೆ ಅವರು ಊರಿಗೆ ಹೋದದ್ದು" 'ಖಂಡಿತವಾಗಿ" ಎಂದು ಅವಳನ್ನು ಎತ್ತಿಕೊಂಡು ಮಲಗುವ ಮನೆಯ ಕಡೆ ನಡೆದನು.

"ನಂಬಿದ್ದಕ್ಕೆ ಇದೇನಾ ...."

"ನೀನು ಹೇಳುವುದು ಸರಿ ಎಂದೆನಲ್ಲಾ." ಎಂದು ಮೆಲ್ಲನೆ ಹಾಸಿಗೆಯ ಮೇಲೆ ಮಲಗಿಸಿ, 'ನಾನೀಗ ಮಾಡುತ್ತಿರುವುದು ಪಾಪಕಾರ್ಯ ಎಂದು ಅಲ್ಲವೆ ನಿನ್ನ ಅಭಿಪ್ರಾಯ ? ಪ್ರಾರಂಭಿಸಿದ ಕಾರ್ಯವನ್ನು ಅರ್ಧದಲ್ಲೇ ನಿಲ್ಲಿಸಿ ಹೋದ ನಿನ್ನ ಗಂಡನ ಕಾರ್ಯವನ್ನು ಪೂರ್ಣಮಾಡದಿದ್ದರೆ ಹುಟ್ಟುವ ಮಗುವಿಗೆ ಏನಾದರೂ ಊನವಾಗುತ್ತದೆ ತಾನೆ ? ತಿಳಿದೂ ತಿಳಿದೂ ಹಾಗೆ ಹುಟ್ಟೋ ಹಾಗೆ ಸುಮ್ಮನೆ ಬಿಟ್ಟಿರುವುದು ಹೆಚ್ಚಿನ ಪಾಪವೋ ಅಥವ ನನ್ನ ಗೆಳೆಯನು ಅರ್ಧ ಮಾಡಿ ಬಿಟ್ಟು ಹೋದದ್ದನ್ನು ಪೂರ್ತಿ ಮುಗಿಸುವುದು ಪಾಪವೋ, ಯಾವುದು ಹೆಚ್ಚು, ಯಾವುದು ಕಡಿಮೆ, ನೀನೇ ಹೇಳು"? ಎಂದ ಲಿಬರಾಲೆಯು ಬಹು ಕಾಲ ಅವಳ ಅಧರಗಳನ್ನು ಚುಂಬಿಸಿದ್ದರಿಂದ ಡೇರಿಯಾ ಉತ್ತರವನ್ನು ಸ್ವಲ್ಪ ತಡವಾಗಿ ತುಟಿಗಳಿಗೆ ವಿರಾಮ ದೊರೆತಾಗ "ನೀವು ಹೇಳುವುದು ದಿಟವೇ ಇರಬೇಕು" ಎಂದಳು.

ಲಿಬರಾಲಿಯು ಈ ರೀತಿ ಗೆಳೆಯನು ಹಿಂತಿರುಗುವವರೆಗೂ, ನಿತ್ಯ ಮಾಡಬೇಕಾದ ಕಾರ್ಯವನ್ನು ಚಾಚೂ ತಪ್ಪದೆ ಮಾಡಿದನು. ಮಗುವು ಹುಟ್ಟಿದಾಗ ದುಂಡು ದುಂಡಾಗಿ ಆರೋಗ್ಯಕರವಾಗಿತ್ತು.

ಸ್ವಲ್ಪ ದಿನಗಳಾದ ಮೇಲೆ ಒಂದು ದಿವಸ ಸಾಯಂಕಾಲ ಆರ್ಥೆಲೋ ಮುದ್ದಾಗಿದ್ದ ತನ್ನ ಮಗನು ತೊಟ್ಟಿಲಲ್ಲಿ ಆಟವಾಡುತ್ತಿದ್ದುದನ್ನು ಹೆಮ್ಮೆಯಿಂದ ನೋಡಿ, ಹರ್ಷಚಿತ್ತನಾಗಿ ನಗುತ್ತಾ ' ನೋಡೇ ಮಗನನ್ನು ಹೇಗೆ ಹೇಗೆ ಮಾಡಿದ್ದೇನೆ. ನೋಡುವುದಕ್ಕೆ ಅಪೊಲೋ [ ಗ್ರೀಕರ ಸುಂದರ ದೇವತೆ (ಕಾವ್ಯ) ಪರಮ ಸುಂದರ ಪುರುಷ–ರೋಮಕರೂ ಈ ಅಧಿದೇವತೆಯನ್ನು ತಮ್ಮದಾಗಿ ಮಾಡಿಕೊಂಡಿದ್ದರು.] ಹಾಗೆ ಇದ್ದಾನೆ! ಆದರೆ ಒಂದು ಸಲವಾದರೂ ಕೃತಜ್ಞತೆಯನ್ನು ಸೂಚಿಸಿದ್ದೀಯಾ ? " ಎಂದನು.

" ಚನ್ನಾಗಿದ್ದಾನೆ .... ಯಾರಿಲ್ಲಾಂದೋರು. ನಿಮಗೇಕೆ ಥ್ಯಾಂಕ್ಸ್ ಹೇಳಬೇಕೋ ಗೊತ್ತಾಗಲಿಲ್ಲ ''.

'' ಹಾಗೆಂದರೆ ?''.

ಡೇರಿಯಾ ಪತಿಗೆ ನಡೆದುದೆಲ್ಲವನ್ನೂ ವಿವರಿಸಿದಳು.

ಕೇಳುತ್ತಿದ್ದ ಹಾಗೆ ಆರ್ಥಿಲೋ ಮೈ ಕೋಪದಿಂದ ಉರಿಯಿತು. '' ಲಿಬರಾಲಿ ಘಾಟ .... ನಂಬಿದ್ದಕ್ಕೆ ಈ ರೀತಿ ತಿಳಿಯುವ ಹಾಗೆಯೇ ಮೋಸ ಮಾಡಿದ್ದಾನಾ ? ಆಗಲಿ ಅವನಿಗೆ ಸರಿಯಾದ ಶಾಸ್ತಿ ಮಾಡುತ್ತೇನೆ. ನನ್ನಾಕೆ ತೆಳ್ಳಗೆ ಬೆಳ್ಳಗಿದ್ದಾಳೆ. ಮೊಲೆಗಳು ಸೇಬಿನ ಹಣ್ಣಿನಂತೆ ಮಾಟವಾಗಿ ಪುಟ್ಟು ಪುಟ್ಟದಾಗಿವೆ. ಸೊಂಟ ಸಣ್ಣಗಿದೆ. ಮಾಟವಾದ ಕಾಲುಗಳು. ಗಂಧರ್ವ ಕನ್ಯೆಯಂತೆ ಪುಟ್ಟ ಪಾದಗಳು ಇದ್ದರೂ, ಬಾಣಂತಿಯಾಗಿರುವುದರಿಂದ ಹತ್ತಿರ ಸೇರುವ ಹಾಗಿಲ್ಲ. ನನಗೇಕೋ ಇತ್ತೀಚೆಗೆ ಲಿಬರಾಲಿ ಹೆಂಡತಿ ಪ್ರೊಸರ್ಪಿಯಾಳನ್ನು ನೋಡಿದಾಗಲೆಲ್ಲಾ ಒಂದು ರೀತಿಯಾಗುತ್ತದೆ. ಸ್ನೇಹಿತನ ಹೆಂಡತಿಯೆಂದು ಕೆಟ್ಟ ಯೋಚನೆ ಸುಳಿದಾಗಲೆಲ್ಲಾ ಹೊರದೂಡಲೆತ್ನಿಸುತ್ತೇನೆ. ಪ್ರೊಸರ್ಪಿಯಾ ದುಂಡು ದುಂಡಾಗಿ ಎಷ್ಟು ಚನ್ನಾಗಿದ್ದಾಳೆ. ವಿಶ್ವಕರ್ಮನೇ ಕಲ್ಲಿನಲ್ಲಿ ಕೆತ್ತಿದ ಶಿಲಾಬಾಲಿಕೆಯಂತೆ ಇದ್ದಾಳೆ. ಆವಳ ನಡೆಯಲ್ಲಿ ಅದೆಂಥ ಮನ ಸೆಳೆವ ಬಿಂಕ, ವಯ್ಯಾರ !

ತುಂಬಿ ಮುಂಚಾಚಿ ಕಣ್ಣನ್ನು ಸೂರೆಗೈವ ಸ್ತನಗಳು. ವಿಶಾಲ ಜಘನ. ಕಿರಿದಾದ ಕಟಿ. ನೋಡಿದಾಗಲೆಲ್ಲಾ ಹೃದಯವು, ಜೊಡೆದುಕೊಂಡು ಬಾಯಿಗೆ ಬರುವ ಹಾಗೆ ಆಗುತ್ತದೆ. ನನಗೆ ಗೊತ್ತಾಗುವ ರೀತಿನೇ ಮೋಸಮಾಡಿದ್ದಾನಲ್ಲವೆ? ಇರಲಿ ಸರಿಯಾದ ಗಸ್ತು ಕೊಡುತ್ತೇನೆ." ಎಂದು ಮನಸ್ಸಿನಲ್ಲೇ ಅಂದು ಕೊಂಡನು.

ಮಾರನೆಯ ದಿವಸ ಏಳುತ್ತಿದ್ದ ಹಾಗೆ ಲಿಬರಾಲೆಯ ಮನೆಗೆ ಹೋಗಿ ದಂಪತಿಗಳನ್ನು ಊಟಕ್ಕೆ ಕರೆದು, ಊರಿನಲ್ಲಿ ಹೆಸರುವಾಸಿಯಾಗಿದ್ದ, ಕಳ್ಳ ನೊಬ್ಬನಿಗೆ ಹಣವನ್ನು ಕೊಟ್ಟು ಪ್ರೊಸರ್ಪಿಯಳ ಒಡವೆಗಳನ್ನೆಲ್ಲಾ ಕದ್ದು ತಂದುಕೊಡಬೇಕೆಂದು ಗೊತ್ತು ಮಾಡಿದನು.

ಊಟದ ಹೊತ್ತಿಗೆ ಗಂಡ ಹೆಂಡಿರಿಬ್ಬರೂ ಬಂದರು. ಇಬ್ಬರ ಮುಖವೂ ಪೆಚ್ಚು. ಪ್ರೊಸರ್ಪಿಯಳ ಕಣ್ಣುಗಳು ಅತ್ತು ಅತ್ತು ಕೆಂಪಗಾಗಿದ್ದವು. ಆರ್ಫಿಲೋ, ಪ್ರೊಸರ್ಪಿಯಳ ಕಳೆಗುಂದಿದ ಮುಖವನ್ನು ನೋಡಿ "ಏಕೆ.... ಏನಾಯಿತು ? ಕಾರಣವೇನು ?" ಎಂದು ಕೇಳಿದನು. ಒಡವೆಯು ಕಳು ವಾದ ಸಮಾಚಾರವನ್ನು ಕೇಳಿ ಸಂತಾಪವನ್ನು ಚೂಚಿಸಿ, "ಸಿಕ್ಕತ್ತೆ. ಎಲ್ಲಿ ಹೋಗತ್ತೆ? ನ್ಯಾಯಾಸ್ಥಾನಕ್ಕೆ ಹೋಗಿ ದೂರು ಕೊಟ್ಟರೆ ಒಂದು ನಿಮಿಷ ದಲ್ಲಿ ಕಳ್ಳನನ್ನು ಪತ್ತೆ ಹಚ್ಚುವರು. ಅದಕ್ಕೇಕೆ ಇಷ್ಟು ಯೋಚಿಸುತ್ತೀರಿ? ಊಟಮಾಡಿ. ಆಮೇಲೆ ಮಾಡಬೇಕಾದ್ದನ್ನು ಮಾಡೋಣ" ಎಂದನು.

ಊಟವಾದ ಮೇಲೆ ಆರ್ಫಿಲೊ "ಲಿಬರಾಲೆ ಈಗ ಒಂದು ಕೆಲಸ ಮಾಡೋಣ. ಪಾಪ! ನಿನ್ನ ಹೆಂಡತಿಗೆ ಬಹಳ ದುಃಖವಾಗಿದೆ. ಕೊಠಡಿಗೆ ಹೋಗಿ ಮಲಗಿಕೊಂಡು ವಿಶ್ರಾಂತಿ ತೆಗೆದು ಕೊಳ್ಳಲಿ. ಆಕಸ್ಮಾ ತ್ತಾಗಿ ಮರೆತು ಒಡವೆಗಳನ್ನು ಎಲ್ಲಾದರೂ ಇಟ್ಟಿದ್ದರೂ ಇಟ್ಟಿರಬಹುದು. ಡೇರಿಯಾ ನಿಮ್ಮ ಮನೆಗೆ ಹೋಗಿ ಎಲ್ಲಾ ಕಡೆ ಚನ್ನಾಗಿ ಹುಡಕಲಿ. ಅಷ್ಟ ರಲ್ಲಿ ನಾವಿಬ್ಬರು ನ್ಯಾಯಾಧೀಶನ ಹತ್ತಿರ ಹೋಗಿ ದೂರು ಕೊಡೋಣ" ಎಂದನು.

ಲಿಬರಾಲೆಯು "ನೀನು ಹೇಳಿದ ಹಾಗೇ ಮಾಡೋಣ" ಎಂದು ಡೇರಿ ಯಳ ಕೈಲಿ ಬೀಗದ ಕೈ ಕೊಟ್ಟನು. ಪ್ರೊಸರ್ಪಿಯಾ ಕೋಣೆಯನ್ನು

ಪ್ರವೇಸಿಶಿ ಹಾಸಿಗೆಯ ಮೇಲೆ ಮಲಗಿದಳು. ಗೆಳೆಯರಿಬ್ಬರೂ ನ್ಯಾಯಾಧೀಶನಿಗೆ ದೂರು ಕೊಡಲು ಹೊರಟರು. ಮನೆಯಿಂದ ಆಚೆ ಹತ್ತು ಹೆಜ್ಜೆ ಹೋಗುತ್ತಿದ್ದಂತೆ ಆರ್ಥಿಲೊ " ಅಲ್ಲವೋ ಇಬ್ಬರೂ ನ್ಯಾಯಸ್ಥಾನಕ್ಕೆ ಹೋಗಿ ಮಾಡೋದೇನಿದೆ! ನೀನು ಒಬ್ಬನೇ ಹೋದರೆ ಸಾಲದಾ? ಅಷ್ಟರಲ್ಲಿ ನಾನೂ ಕೂಡ ನನ್ನ ಹೆಂಡತಿ ಜೊತೆ ಹುಡುಕುತ್ತೇನೆ. ಅವಳೊಬ್ಬಳೇ ಹುಡಕುವುದಕ್ಕಿಂತ ಇಬ್ಬರು ಹುಡುಕಿದರೆ ಒಳ್ಳೆಯದಲ್ಲವೆ?" ಎಂದನು.

ಲಿಬರಾಲೆ " ಸರಿಯೆ .... ನ್ಯಾಯಾಧೀಶನ ಹತ್ತಿರ ನಾನೊಬ್ಬನೇ ಹೋಗುತ್ತೇನೆ" ಎಂದು ತ್ವರಿತವಾಗಿ ಹೆಜ್ಜೆಯಿಡುತ್ತಾ ನಡೆದನು.

ಆರ್ಥಿಲೋ ನೆಟ್ಟಗೆ ಮನೆಗೆ ಹಿಂತಿರುಗಿ ಪ್ರೊಪರ್ಷಿಯಾ ಮಲಗಿದ್ದ ಕೋಣೆಯನ್ನು ಪ್ರವೇಶಿಸಿದನು.

ಪ್ರೊಪರ್ಷಿಯಾ ಆಶ್ಚರ್ಯದಿಂದ "ನ್ಯಾಯಾಧೀಶರಿಗೆ ಇಷ್ಟು ಬೇಗ ದೂರು ಕೊಟ್ಟು ಹಿಂತಿರುಗಿ ಬಂದಿರಾ" ಎಂದು ಕೇಳಿದಳು.

"ಇಲ್ಲ. ನಿನ್ನ ಯಜಮಾನನು ದೂರು ಕೊಡಲು ಹೋಗಿದ್ದಾನೆ. ನನಗೊಂದು ಯೋಚನೆ ಹೊಳೆಯಿತು. ವಾಪಸ್ ಬಂದೆ. ಇಂದ್ರಜಾಲದಿಂದ ಒಡವೆಯು ಸಿಗೋ ಹಾಗೆ ಯಾಕೆ ಮಾಡಬಾರದೂಂತ ?...."

"ಮಂತ್ರ ಹಾಕಿ ?....ನಿಮಗೆ ಇಂದ್ರಜಾಲ ವಿದ್ಯೆಯೂ ಬರುತ್ತದಾ?"

" ಸ್ವಲ್ಪ ಸ್ವಲ್ಪ ತಿಳಿದುಕೊಂಡಿದ್ದೇನೆ. ನಾನು ಸಣ್ಣವನಾಗಿದ್ದಾಗ ದೇಶಾಂತರ ಹೋಗಿದ್ದೆ. ಕಳೆದುಹೋದ ಪದಾರ್ಥಗಳು ಕಾಣಿಸಿಕೊಳ್ಳುವ ಹಾಗೆ ಮಾಡುವ ಮಂತ್ರವನ್ನು ಕಲೆತುಕೊಂಡಿದ್ದೇನೆ."

" ಹಾಗಾ ? .... ನೀವು ಮಾಂತ್ರಿಕರಾ ? .... ನಿಮಗೆ ಏನು ಸಹಾಯ ಬೇಕಾದರೂ ಮಾಡುತ್ತೇನೆ...."

" ನಿನ್ನ ಸಹಾಯ, ಸಹಕಾರವಿಲ್ಲದೆ ಮಂತ್ರ ಹಾಕುವುದಕ್ಕೆ ಸಾಧ್ಯವೇ ಇಲ್ಲ." ಎಂದು ಆರ್ಥಿಲೋ ಮಂತ್ರವಾದಿಯಂತೆ ಕಣ್ಣು ಮುಚ್ಚಿ ಏಕಾಗ್ರಚಿತ್ತದಿಂದ ಧ್ಯಾನಮಾಡುವನಂತೆ ನಟಿಸಿ ಗೊಗ್ಗರು ಧ್ವನಿಯಲ್ಲಿ

" ಮೀನುಗೋಲೇ ಮೀನುಗೋಲೆ ! ಸಮೀಪದಲ್ಲಿದ್ದರೂ ಸರಿ, ಅತಿ ದೂರದಲ್ಲಿದ್ದರೂ ಸರಿ ಕಾಣಿಸಿಕೋ ನಮ್ಮ ಎರುವಿಗಾಗಿ " ಎಂದನು.

ಮೀನು ಹಿಡಿಯುವ ಕೋಲು ಕಾಣಿಸಿಕೊಂಡಿತು. ಪ್ರೊಪರ್ಸಿಯಾ " ಮಾಟವಾಗಿದೇಂದರೆ ಆದರೆ ನಮ್ಮವರ ಹತ್ತಿರವಿರುವ ಮೀನುಗೋಲು ಇದಕ್ಕೂ ಸ್ವಲ್ಪ ಚಿಕ್ಕದು ಅಷ್ಟೆ !" ಎಂದಳು.

ಪ್ರೊಪರ್ಸಿಯಾ ಮಂತ್ರ ಹಾಕುತ್ತಿರುವಾಗ ಅತ್ಯಂತ ಉತ್ಸಾಹದಿಂದ ಸಹಾಯಕಳಾದಳು. ಇಬ್ಬರೂ ಕಣ್ಣು ಮುಚ್ಚಿಕೊಂಡು ಅದರಲ್ಲೇ ಮಗ್ನರಾಗಿರುವಾಗ ಆರ್ಥಿಲೋ ಕಳೆದುಹೋದ ಆಭರಣಗಳನ್ನು ಜೇಬಿನಿಂದ ತೆಗೆದು " ನೋಡು ಬಂದೇಬಿಟ್ಟಿತು ! " ಎಂದನು.

ಪ್ರೊಪರ್ಸಿಯಾ ಕಣ್ಣು ತೆರೆದು ಹರ್ಷದಿಂದ " ಆರ್ಥಿಲೋ ನೀವು ಎಷ್ಟು ಒಳ್ಳೆಯವರೂಂದರೆ .... ಚಮತ್ಕಾರವಾಗಿ ಕಳುವಾಗಿದ್ದ ಒಡವೆಗಳನ್ನು ಬರುವಂತೆ ಮಾಡಿದಿರಿ. ಹೋದ ಏಪ್ರಿಲ್ ತಿಂಗಳಲ್ಲಿ ಒಂದು ಕಾಫೀ ಕಾಯಿಸುವ ಪಾತ್ರೆಯು ಕಳೆದುಹೋಗಿತ್ತು. ಅದನ್ನೂ ತೆಗೆದುಕೊಡುತ್ತೀರಾ ?" ಎಂದು ಕೇಳಿದಳು.

" ತೆಗೆದುಕೊಡಲು ನನಗೇನೋ ಇಷ್ಟವೇ. ಆದರೆ ಈ ಮಂತ್ರವನ್ನು ಒಂದು ಸಲ ಹಾಕಿದರೇ ಸಾಕು ಬಹಳ ಆಯಾಸವಾಗುತ್ತದೆ. ಪುನಃ ಹಾಕಲು ತಕ್ಷಣ ಸಾಧ್ಯವಿಲ್ಲ. ದೇಹಕ್ಕೆ ಬಹಳ ಶ್ರಮ. ನಿನ್ನ ಯಜಮಾನನು ಸಹಾಯಮಾಡಬಲ್ಲ."

" ಅವರ ಕೈಲಿ ಸಾಧ್ಯವಿಲ್ಲಾಂದರೆ .... ಅವರಿಗೆ ಈ ಮಂತ್ರ ಗೊತ್ತೇ ಇಲ್ಲ .... ಕಳುವಾದ ಪದಾರ್ಥ ಈ ರೀತಿ ಕಾಣಿಸಿಕೊಳ್ಳುವ ಹಾಗೆ ಮಾಡುವುದಕ್ಕೆ ಗೊತ್ತಿದ್ದರೆ ಯಾವಾಗಲೋ ಪತ್ತೆ ಹಚ್ಚುತ್ತಿದ್ದರು."

ಆರ್ಥಿಲೋ ನಸುನಗುತ್ತಾ " ಹಾಗಾದರೆ ಒಂದು ಕೆಲಸ ಮಾಡು. ನಾನು ಯಾವ ರೀತಿ ಮಂತ್ರ ಹಾಕಿದೆನೋ ಅದನ್ನು ಹೇಳು. ಆಮೇಲೆ ನೋಡೋಣ " ಎಂದನು.

ಪ್ರೊಪರ್ಸಿಯಾ ಉತ್ಸಾಹದಿಂದ ಗಂಡನಿಗೆ ಎಲ್ಲವನ್ನೂ ವಿವರಿಸಿದಳು.

ಲಿಬರಾಲೆಗೆ ಕೋಪ ಬಂದರೂ ಹಲ್ಲು ಕಚ್ಚಿಕೊಳ್ಳಬೇಕಾಗಿ ಬಂದಿತು. "ಕಳ್ಳ! ತನ್ನ ಹೆಂಡತಿಗೆ ಮೋಸ ಮಾಡಿದ್ದಕ್ಕೆ ಈ ರೀತಿ ಮಾಡಿದ್ದಾನೆ." ಎಂದುಕೊಂಡು ಮನಸ್ಸಿನಲ್ಲೇ ಕುದ್ದನು.

ಮಾರನೆಯ ದಿವಸ ಗೆಳೆಯರಿಬ್ಬರೂ ಎದುರುಬದರಾದಾಗ ಕೋಪದಿಂದ ದುರುಗುಟ್ಟಿ ನೋಡಿ ಮಾತನಾಡದೆ ನಡೆದರು. ಸ್ವಲ್ಪ ದಿನಗಳಾಗುತ್ತಲೂ ಅವರ ದೃಷ್ಟಿಯಲ್ಲಿ ಕೋಪವು ತಣ್ಣಗಾಗಿತ್ತು. ಒಂದು ದಿವಸ ಒಬ್ಬರನ್ನೊಬ್ಬರು ಸಂಧಿಸಿದಾಗ ನಸುನಕ್ಕರು. ಕ್ರಮೇಣ ಕಟ್ಟಿದ್ದ ಬಾಯಿ ತೆಗೆದು ಗಹಗಹಿಸಿ ನಕ್ಕರು.

ಕಡೆಗೆ ಇಬ್ಬರೂ ಒಬ್ಬರ ಹೆಂಡತಿಯನ್ನು ಮತ್ತೊಬ್ಬರು ಬದಲಾಯಿಸಿಕೊಳ್ಳುವುದು ಉತ್ತಮವೆಂದು ನಿರ್ಧಾರಕ್ಕೆ ಬಂದರು. ಈ ರೀತಿ ವಿನಿಮಯ ಮಾಡಿಕೊಳ್ಳಲು ಸಲಹೆಯಿತ್ತವನು ಆರ್ಥಿಲೊ. ಲಿಬರಾಲೆ "ಹಾಗೆಯೇ ಆಗಲಿ" ಎಂದನು.



# ನೀರನ್ನು ಕಂಡ ಬಾತು !

## ಗಿಯೋವಾನಿಡ ಪ್ರಾಟೋ

ರೆನೀರಿ ಡಿ ಸ್ಕಾರ್ಕ್ಯಾಸಿನೋ, ಹೆಣ್ಣಿನ ಜಾತಿಯು ನಂಬಿಕೆಗೆ ಅರ್ಹವಾದುದಲ್ಲವೆಂದು ಅಭಿಪ್ರಾಯವನ್ನು ತಳೆದಿದ್ದನು. ಸ್ತ್ರೀಯರೆಲ್ಲಾ ಪತಿಗೆ ಕಾಣದ ರೀತಿ ಪರಪುರುಷರೊಡನೆ ರಮಿಸುವರೆಂದೇ ಅವನ ಸಿದ್ಧಾಂತ. ತನ್ನ ಕೈ ಹಿಡಿಯುವ ಹೆಂಗಸು ಪರಪುರುಷರನ್ನು ಕಣ್ಣೆತ್ತಿ ಕೂಡ ನೋಡದಷ್ಟು ಪರಿಶುದ್ಧಳಾಗಿರಬೇಕೆಂದು ಉತ್ಕಟಾಪೇಕ್ಷೆ ಅಂತಹ ಯುವತಿಯು ಸಿಗುವವರೆಗೂ ಮದುವೆಯನ್ನೇ ಮಾಡಿಕೊಳ್ಳುವುದಿಲ್ಲವೆಂದು ತೀರ್ಮಾನಿಸಿದ್ದನು.

ಕೈ ಹಿಡಿದ ಯುವತಿ ಟೆರಿಸ್ ಅವನ ಆದರ್ಶಗಳಿಗೆ ಸರಿತೂಗುವಂತಹವಳೇ ಆಗಿದ್ದಳು. ಸತ್ಕುಲ ಪ್ರಸೂತೆ. ಪರಿಶುದ್ಧಳು. ಪಾಪ! ಅವಳ ಜೀವನದಲ್ಲಿ ಹುಳಿ ಹಿಂಡುವಂತೆ ಆಗಲು ತಾಯಿಯೇ ಕಾರಣಳಾದಳು. ತಾಯಿಗೆ ಮಗಳು ಸಕಲ ವಿಧದಲ್ಲೂ ಪತಿಯ ಮನಸ್ಸನ್ನು ಮೆಚ್ಚಿಸುವಂತೆ ನರ್ತಿಸಬೇಕೆಂದು ಮಹದಾಸೆ. ಗಂಡು – ಹೆಣ್ಣು ಸೇರುವ ಮೊದಲ ದಿವಸ ಮಗಳು ಯಾವ ರೀತಿ ನಡೆದುಕೊಳ್ಳಬೇಕೆಂದು ವಿವರಿಸಿದಳು. "ರೆನೀರಿಗೆ ಅತ್ಯಂತ ಸಂತೋಷ, ತೃಪ್ತಿ ಮತ್ತು ಸುಖವನ್ನು ತರುವಂತೆ ನಿನ್ನ ತನುಮನಗಳನ್ನು ಅರ್ಪಿಸು...." ಎಂದು ಬುದ್ಧಿವಾದವನ್ನು ಹೇಳಿದಳು.

ಮದುಮಗುಳ ಕೈ ಹಿಡಿದು ರೆನೀರಿ ಮಲಗುವ ಕೋಣೆಯನ್ನು ಪ್ರವೇಶಿಸಿದಾಗ ಮೊದಲ ರಾತ್ರಿ ಅವಳ ಮುಖವು ಲಜ್ಜೆಯಿಂದ ಕೆಂಪೇರಲಿಲ್ಲ. ತಲೆಯನ್ನೂ ತಗ್ಗಿಸಲಿಲ್ಲ. ರೆನೀರಿಯು ಬಾಗಿಲ ಚಿಲಕವನ್ನು ಹಾಕಿ ಸೆಳೆದಪ್ಪಿ ಚುಂಬಿಸಿದಾಗ ಟೆರಿಸಳು ಪ್ರತಿಯಾಗಿ ತಾನೂ ಅವನನ್ನು ಬಿಗಿದಪ್ಪಿ ಅವನಿಗಿಂತಲೂ ಉತ್ಸಾಹದಿಂದ ಮುತ್ತಿನ ಮಳೆ ಸುರಿಸಿದಳು. ಹೆಂಗಸಿಗೆ ಲಜ್ಜೆ

ಸಹಜವೆಂದು ತಿಳಿದಿದ್ದ ಗಂಡನಿಗೆ ಆಶ್ಚರ್ಯವಾಯಿತು. ಕಾಮಕೇಳಿ ಯಲ್ಲಿ ತೊಡಗಿದಾಗ ಸರಿಸಮನಾಗಿ ಕಾತುರತೆಯನ್ನು ತೋರಿ ಸಮಭಾಗಿಯಾದಳು. ರೆನೀರಿಗೆ ಅನುಮಾನವಾಗತೊಡಗಿತು. ಹರ್ಷದಾಯಕವಾಗಿ ಕಂಡುಬರಬೇಕಾದ ರಾತ್ರಿ ಕಹಿಯಾಗಿ ತೋರಿತು. ಮನಸ್ಸಿನಲ್ಲಿದ್ದ ಆಲ್ಲೋಲ ಕಲ್ಲೋಲವನ್ನು ತಡೆದುಕೊಂಡು ಗಂಡನು ಯಾವ ರೀತಿ ಹೆಂಡತಿಯೊಡನೆ ವರ್ತಿಸಬೇಕೋ ಆ ರೀತಿ ನಡೆದು ಕೊಂಡನು. " ನೀನು ಮಹಾ ಸಾಧ್ವಿ, ಪರಿಶುದ್ಧಳು ಎಂದು ತಿಳಿದು ಕೊಂಡಿದ್ದೆ. ಆದರೆ ನಿನ್ನನ್ನು ನೋಡಿದರೆ ಬಹಳ ಅನುಭವಸ್ಥಳಂತೆ ಕಾಣುತ್ತಿ. ಇದಕ್ಕೆ ಮೊದಲು ಯಾರ ಹತ್ತಿರದಲ್ಲೋ ಚೆನ್ನಾಗಿ ಪಾಠ ಕಲಿತಿರಬೇಕು. ಇಲ್ಲದಿದ್ದರೆ ಈ ಧೈರ್ಯ, ಈ ಉತ್ಸಾಹ ಎಲ್ಲಿಂದ ಬರಬೇಕು? ನಿನಗೆ ಹೆಂಗಸಿ ಗಿರಬೇಕಾದ ಲಜ್ಜೆ, ಮಾನ ಮರ್ಯಾದೆ ಒಂದೂ ಇಲ್ಲ " ಎಂದು ಗುಡುಗಿ ಟೆರಿಸಳನ್ನು ತವರುಮನೆಗೆ ಕರೆದುಕೊಂಡು ಹೋಗಿ ಬಿಟ್ಟು, ಸ್ವಲ್ಪ ದಿನಗ ಳಾದ ಮೇಲೆ ಪುನಃ ಕರೆದುಕೊಂಡು ಹೋಗುತ್ತೇನೆಂದು ಹೇಳಿ ಹಿಂತಿರು ಗಿದನು.

ಅಳಿಯನು ಹೇಳಿದ ಧಾಟಿ, ಮಗಳ ಕಳೆಗುಂದಿದ ಮುಖವನ್ನು ನೋಡಿ ತಾಯಿಗೆ ಏನೋ ಅಚಾತುರ್ಯವು ನಡೆದಿರಬೇಕೆಂದು ಅನುಮಾನವಾಯಿತು. " ಯಾಕೆ ಟೆರಿಸಾ ಹೀಗಿದ್ದಿ. ಏನಾಯಿತು " ಎಂದು ಕೇಳಿದಳು.

ಟೆರಿಸಾ ಬಿಕ್ಕಿ ಬಿಕ್ಕಿ ಅಳುತ್ತಾ " ಅವರು ನನ್ನನ್ನು ಪ್ರೀತಿಸುವುದಿಲ್ಲ. ಮದುವೆಯಾಗುವುದಕ್ಕೆ ಮುಂಚೆ ನಾನು ಯಾರೊಂದಿಗೋ ಸಹವಾಸ ಬೆಳೆ ಸಿದ್ದೇನೆಂದು ಅನುಮಾನ ಪಡುತ್ತಾರೆ " ಎಂದಳು.

" ನಾನು ಹೇಳಿದಂತೆ ನೀನು ಪ್ರೀತಿ ವಿಶ್ವಾಸಗಳಿಂದ ನಡೆದು ಕೊಂಡೆಯಾ ? "

" ನೀನು ಹೇಳಿದಂತೆ ಚಾಚೂ ತಪ್ಪದೆ ನಡೆದು ಕೊಂಡೆ. ಅದಕ್ಕೇ ಅವರಿಗೆ ಕೋಪ ಬಂದಿತೂಂತ ಕಾಣಿಸುತ್ತದೆ. ಹಾಗೆ ನಡೆದು ಕೊಳ್ಳದಿದ್ದರೆ ಚೆನ್ನಾಗಿತ್ತು."

"ಕೈ ಹಿಡಿದ ಗಂಡನ ಸ್ವಭಾವ ಹೇಗೋ ಹೇಳುವುದಕ್ಕಾಗುವುದಿಲ್ಲ. ಮುಕ್ಕಾಲು ಪಾಲು ನಿನ್ನ ಗಂಡನು ಶುದ್ಧ ಮಂಕನಾಗಿರಬೇಕು. ನೀನು ಅವನನ್ನು ಪ್ರೀತಿಸುತ್ತಿ. ಅಷ್ಟೇ ಬೇಕಾದದ್ದು. ಬೇರೆ ವಿಚಾರವನ್ನು ಕಟ್ಟಿಕೊಂಡೇನು....?" ಎಂದು ಮಗಳಿಗೆ ಸಮಾಧಾನವನ್ನು ಹೇಳಿ ಅಳಿಯನಿಗೆ ಹೇಳಿ ಕಳುಹಿಸಿದಳು.

ಅಳಿಯದೇವರು ಅತ್ತೆಯು ಆಜ್ಞೆಯನ್ನು ಶಿರಸಾವಹಿಸಿ ಮನಸ್ಸಿಲ್ಲದ ಮನಸ್ಸಿನಿಂದ ಬಂದನು. ಅತ್ತೆಯು ಆದರದಿಂದ ಅಳಿಯನನ್ನು ಆಹ್ವಾನಿಸಿ ನಿನ್ನ ಹತ್ತಿರ ಕೆಲವು ವಿಚಾರಗಳನ್ನು ಮಾತನಾಡಬೇಕು. ಹೀಗೇ ಸುತ್ತಾಡಿಕೊಂಡು ಬರೋಣ'' ಎಂದಳು.

ಅತ್ತೆ ಮತ್ತು ಅಳಿಯ ಇಬ್ಬರೂ ಕ್ಯಾಸಲಿನ ಸುತ್ತಲು ಆವರಿಸಿದ್ದ ಕಂದಕದ ಪಕ್ಕದಲ್ಲಿದ್ದ ದಾರಿಯಲ್ಲಿ ಮಾತನಾಡುತ್ತಾ ನಡೆದರು.

"ನನ್ನ ಮಗಳಲ್ಲಿ ಏನೋ ನ್ಯೂನ್ಯತೆಯನ್ನು ನೀನು ಕಂಡ ಹಾಗಿದೆ–ಯಾಕೆ ಅವಳು ನೋಡಲು ಲಕ್ಷಣವಾಗಿಲ್ಲವೇ ? ರೂಪವತಿಯಲ್ಲವೆ ?"

"ಅತ್ಯಂತ ಸುಂದರಿ .... ಸಂದೇಹವೇ ಇಲ್ಲ."

"ರೆನೀರ ! ವಯಸ್ಸಿನಲ್ಲಿ ನನಗಿಂತ ಕಿರಿಯವ. ನಾನು ಹೀಗೆ ಹೇಳುತ್ತೇನೆಂದು ಏನೂ ತಿಳಿದುಕೊಳ್ಳುವುದಿಲ್ಲವಷ್ಟೇ? ಹೆಂಡತಿಯು ಗಂಡನೊಡನೆ ಯಾವ ರೀತಿ ನಡೆದುಕೊಳ್ಳಬೇಕೋ ಆ ರೀತಿ ನಡೆದುಕೊಳ್ಳಲಿಲ್ಲವಾ ! ನಿನ್ನನ್ನು ಪ್ರೀತಿಸುವುದಿಲ್ಲವೆ?''

"ಪ್ರೀತಿಸುತ್ತಾಳೆ."

"ಹುರುಪಾಗಲೀ ಉತ್ಸಾಹವಾಗಲೀ, ತೋರುವುದಿಲ್ಲವಾ"

"ಹಾಗೇನಿಲ್ಲ ... ಅವಳ ಹುರುಪು ಉತ್ಸಾಹಗಳನ್ನು ನೋಡಿದರೆ ಮದುವೆಯಾಗುವುದಕ್ಕೆ ಮೊದಲೇ ಅನೇಕರೊಂದಿಗೆ ಸಹವಾಸ ಬೆಳಸಿರಬೇಕೆಂದು ನನಗೆ ಅನುಮಾನ. ನಾನು ಅಂದುಕೊಂಡಂತೆ ನಿಮ್ಮ ಮಗಳು ಪರಿಶುದ್ಧಳೂ ಅಲ್ಲ, ಸಾಧ್ವಿಯೂ ಅಲ್ಲ."

ಮೇಡೋನಳು ಆಶ್ಚರ್ಯದಿಂದ "ಏನು ಹೇಳಿದೆ? ನನ್ನ ಮಗಳು ಮದುವೆಯಾಗುವುದಕ್ಕೆ ಮೊದಲು ಬೇರೆಯವನ ಹತ್ತಿರ ಹವ್ಯಾಸ

ಬೆಳಸಿದ್ದಳೆಂದು ನಿನ್ನ ಅಭಿಪ್ರಾಯವಾ? ಅವಳಿಗೆ ವಯಸ್ಸೆಷ್ಟು? ಇನ್ನೂ ಚಿಕ್ಕವಳು. ನಿನ್ನ ವಯಸ್ಸೆಷ್ಟು? ನೀನೂ ಚಿಕ್ಕವನೇ. ನಿನಗೆ ಅನುಭವವಿದೆಯಾ? ನೀನು ಅವಳೊಡನೆ ಎಷ್ಟು ಉತ್ಸಾಹದಿಂದ ಮೊದಲನೆಯ ದಿವಸ ವರ್ತಿಸಿದೆಯೋ ಅಷ್ಟೇ ಉತ್ಸಾಹದಿಂದ ಅವಳು ನಡೆದುಕೊಂಡಲ್ಲಿ ತಪ್ಪೇನಿದೆ? ಆ ರೀತಿ ವರ್ತಿಸಿದಾಕ್ಷಣ ಅವಳು ಪತಿತಳಾ?" ಎಂದಳು.

ತನ್ನ ಮಗಳು ಉತ್ಸುಕತೆಯನ್ನು ತೋರಿದ್ದರಿಂದ ಅಳಿಯನಿಗೆ ಅನುಮಾನ ಬಂದಿರುವುದೆಂದು ತಿಳಿದು, ಯಾವ ರೀತಿ ತನ್ನ ಮಗಳು ಪರಿಶುದ್ಧಳೆಂದು ತೋರಿಸಬೇಕೆಂದು ಯೋಚಿಸುತ್ತಾ ನಡೆದಳು. ಎದುರಿಗೆ ಕೆಲಸದ ಹೆಂಗಸು ಆಗತಾನೆ ಮೊಟ್ಟೆಯಿಂದ ಹೊರಬಂದ ಬಾತು ಮರಿಗಳನ್ನು ಸೆರಗಿನಲ್ಲಿ ಹಾಕಿಕೊಂಡು ಬಂದು ಮೆಡೋನಾ ಮುಂದೆ ಇಟ್ಟು "ಅಮ್ಮಾರ್ರೆ ನೋಡಿ ಮರಿಗಳು ನೋಡುವುದಕ್ಕೆ ಎಷ್ಟು ಮುದ್ದಾಗಿವೆ. ಇವುಗಳಗೂ ನಿಷ್ಕಳಂಕವಾದ ಜೀವಿಗಳು ಪ್ರಪಂಚದಲ್ಲಿವೆಯಾ? ಎಂದಳು.

ಅತ್ತೆಯು ಮರಿಗಳನ್ನು ಹಿಡಿದೆತ್ತಿ ಕಂದಕದಲ್ಲಿ ಹರಿಯುತ್ತಿದ್ದ ನೀರಿನಲ್ಲಿ ಹೇಲಿಬಿಟ್ಟಳು.

"ಏನು ಅನ್ಯಾಯ! ಅಮ್ಮಾವ್ರೇ! ಎಂಥಹ ಕೆಲಸ ಮಾಡಿದಿರಿ .... ಪಾಪ ಮರಿಗಳು ಸತ್ತುಹೋಗುತ್ತವೆ" ಎಂದಳು ಕೆಲಸದವಳು.

"ನೋಡುತ್ತಾ ಇರು ಅವು ಏನು ಮಾಡುತ್ತವೆ ಎಂದು .... ನೋಡಿದಿಯಾ ಹೇಗೆ ಅನುಭವಶಾಲಿಗಳಂತೆ ಈಜುತ್ತಾ ಇವೆ! ಮೊಟ್ಟೆಯೊಳಗೆ ಇದ್ದಾಗಲೇ ಸದ್ಗುರುವಿನಿಂದ ಪಾಠ ಕಲಿತಿದ್ದವು. ಅದಕ್ಕೇ ಅಷ್ಟು ಚೆನ್ನಾಗಿ ಈಜುತ್ತವೆ".

"ಸದ್ಗುರು? .... ಯಾರದು?" ಎಂದು ಕೇಳಿದನು ಅಳಿಯ.

"ನಿನ್ನ ಹೆಂಡತಿಗೆ ಯಾವ ರೀತಿ ನಡೆದುಕೊಳ್ಳಬೇಕೆಂದು ಪ್ರೇರೇಪಿಸಿದ ಗುರುವೇ ಈ ಬಾತುಮರಿಗಳಿಗೂ ನೀರು ಕಂಡೊಡನೆ ಈಜಬೇಕೆಂದು ಉಪದೇಶ ಮಾಡಿದ್ದಾನೆ."

ಅಳಿಯನಿಗೆ ಆಗ ಅರ್ಥವಾಯಿತು. "ನೀವು ಹೇಳುವುದು ಸಹಜವೇ.... ಯೋಚನೆ ಮಾಡಬೇಡಿ. ಈಗಲೇ ಅವಳನ್ನು ಕರೆದುಕೊಂಡು ಹೋಗುತ್ತೇನೆ' ಎಂದನು.

ರೈನೀರಿಯು ಹೆಂಡತಿಯನ್ನು ಕರೆದುಕೊಂಡು ಹೋಗುತ್ತಿದ್ದಾಗ ಬಾತಿನ ಮರಿಗಳು ರೆಕ್ಕೆ ಒದರುತ್ತಾ ನೀರಿನಲ್ಲಿ ತಲೆಯನ್ನು ಅದ್ದಿ ಮೇಲೆ ತ್ತುತ್ತಾ ಮೈಮರೆತು ಹರ್ಷದಿಂದ ತೇಲುತ್ತಿದ್ದುದನ್ನು ನೋಡಿ "ಬಾತಿನ ಮರಿಯು ನೀರನ್ನು ಕಂಡಾಗ ಈಜುವಂತೆ" ಎಂದು ದೀರ್ಘ ನಿಶ್ವಾಸವನ್ನು ಬಿಟ್ಟನು. ಮನಸ್ಸನ್ನರಡಿದ ಅನುಮಾನವು ಚದುರಿತು. ಹರ್ಷಚಿತ್ತದಿಂದ ತಲೆಯನ್ನಲ್ಲಾಡಿಸಿ ಮತ್ತೊಮ್ಮೆ "ನೀರನ್ನು ಕಂಡಾಗ ಬಾತು ಈಜುವಂತೆ" ಎಂದುಕೊಂಡನು.



# ಗ್ಯಾಸ್ಕನ್ ಕಲಿತ ಪಾಠ

ಬರೆದವರು: **ಲಾ ಫಾನ್‌ಟೈನ್**

ಒಬ್ಬ ಗ್ಯಾಸ್ಕನ್ ಯುವಕನಿದ್ದ. ಮಹಾ ಜಂಭದ ಕೋಳಿ. ತನ್ನ ಸಮಾನ ಯಾರೂ ಇಲ್ಲಾಂತ ಎಲ್ಲರ ಹತ್ತಿರವೂ ಕೊಚ್ಚಿಕೊಳ್ಳುತ್ತಿದ್ದನು. ಅತ್ಯಂತ ರೂಪವತಿಯಾಗಿದ್ದ ಹುಡುಗಿಯೊಬ್ಬಳ ಮೇಲೆ ಅವನಿಗೆ ಕಣ್ಣು ಬಿತ್ತು. ನೋಡುವುದಕ್ಕೆ ಲಕ್ಷಣವಾಗಿರುವ ಹೆಂಗಸಿನ ವಿಚಾರವಾಗಿ ಏನಾದರೂ ಹೇಳಿದರೆ ಕೇಳಲು ಜನರಿಗೆ ಹತ್ತು ಕಿವಿ. ನಂಬುವುದೂ ಜಾಸ್ತಿ. ಗ್ಯಾಸ್ಕನನು, ಹುಡುಗಿಯು ತನ್ನ ಬುಟ್ಟಿಯಲ್ಲಿ ಬಿದ್ದಿದ್ದಾಳೇಂತ ಕೊಚ್ಚಿಕೊಂಡಾಗ ಕೇಳಿದವರು ನಿಜವೆಂದೇ ನಂಬಿದರು.

ಆ ಯುವತಿಯ ಹೆಸರು ಫಿಲಿಸ್. ಗ್ಯಾಸ್ಕನನು ತರುಣಿಯ ಮನೆಯ ಮುಂದೆ ಅವಳ ಕಣ್ಣಿಗೆ ಬೀಳುವ ಹಾಗೆ ಎದೆಯನ್ನು ಮುಂದೆ ಮಾಡಿಕೊಂಡು ಹುಂಜದಂತೆ ಠಳಾಯಿಸ ತೊಡಗಿದನು. ಫಿಲಿಸಳು ಅವನ ಕಡೆ ಒಂದು ಸಲ ಕೂಡ ಕಣ್ಣೆತ್ತಿ ನೋಡಲಿಲ್ಲ. ಮನೆಯ ಮುಂದೆ ಯುವಕನು ಠಳಾಯಿಸುತ್ತಿದ್ದರೆ ಜನರು ಏನು ತಿಳಿದು ಕೊಂಡಾರು? ಅವಳಿಗೆ ಬೇಸರ ಬಂದು ಅವನು ನೋಡುತ್ತಿದ್ದ ಹಾಗೆ ಮನೆಯ ಬಾಗಿಲನ್ನು ಹಾಕಿ, ಪಕ್ಕದ ಮನೆಗೆ ಹೋಗಿ ಕುಳಿತು ಕೊಳ್ಳುತ್ತಿದ್ದಳು. ಯುವಕನು ಠಳಾಯಿಸಿ ಕಾಲುಸೋತು ಬೇಸರವಾಗಿ ಪೆಚ್ಚು ಮುಖ ಹಾಕಿಕೊಂಡು ಹೋದ ಮೇಲೆ ಮನೆಗೆ ಹಿಂತಿರುತ್ತಿದ್ದಳು.

ಪಕ್ಕದ ಮನೆಯಲ್ಲಿದ್ದವಳು ಆಪ್ತ ಗೆಳತಿ ಕ್ಲೋರಿಸ್. ಅವಳ ಗಂಡನ ಹೆಸರು ಯೂರಿಲಾ. ಮನೆಯಲ್ಲಿ ಗಂಡ–ಹೆಂಡತಿ ಇಬ್ಬರೇ ಇದ್ದರು. ಹೆಂಡತಿಗಿಂತ ಗಂಡನಿಗೆ ಸುಮಾರು ನಲವತ್ತು ವರ್ಷ ವಯಸ್ಸು ಹೆಚ್ಚಾಗಿತ್ತು. ಕ್ಲೋರಿಸ್‌ಗೆ ಒಬ್ಬ ಪ್ರಿಯತಮನಿದ್ದನು. ಅವನ ಹೆಸರು ಡರ್ವೋನ್. ಕ್ಲೋರಿಸ್, ಫಿಲಿಸ್ ಮತ್ತು

ಪ್ರಿಯತಮ ಡರ್ಮೋ, ಗ್ಯಾಸ್ಕನನಿಗೆ ಸರಿಯಾದ ಪಾಠ ಕಲಿಸಬೇಕೆಂದು ಮನಸ್ಸುಮಾಡಿಕೊಂಡರು.

ಒಂದು ದಿವಸ ಗ್ಯಾಸ್ಕನನು ಮನೆಯ ಹತ್ತಿರ ಬರುವ ಸಮಯಕ್ಕೆ ಫಿಲಿಸ್ಸಳು ತಲೆಯ ಕೂದಲಿಗೆ ಘಂ ಎಂದು ನೂರುಗಾವುದ ವಾಸನೆ ಬರುವ ತೈಲವನ್ನು ಹಚ್ಚಿ, ಅಲಂಕೃತಳಾಗಿ ಸ್ತನದ್ವಯಗಳು ಎದ್ದು ಕಾಣುವಂತೆ ಭುಜಗಳಿಂದ ಸ್ವಲ್ಪ ಜಾರಿ ಬರುವಂತಹ ಲಂಗವನ್ನು ತೊಟ್ಟಳು. ಅವಳು ಮೈಗೆ ಸವರಿಕೊಂಡ ಸುಗಂಧವು ಆ ಊರಿನ ಆ ಜನ್ಮ ಬ್ರಹ್ಮಚಾರಿಯಾಗಿದ್ದ ಪಾದ್ರಿಯ ಮನಸ್ಸನ್ನು ಕೂಡ ಆಕರ್ಷಿಸಿ ಅಲ್ಲೋಲ ಕಲ್ಲೋಲವನ್ನುಂಟು ಮಾಡುವಂತಿತ್ತು.

ಅಲಂಕೃತಳಾಗಿ ನಸುನಗುತ್ತಾ ನಿಂತಿದ್ದ ಫಿಲಿಸಳನ್ನು ನೋಡಿ ಧೈರ್ಯವಾಗಿ ಗ್ಯಾಸ್ಕನನು ಮನೆಯನ್ನು ಪ್ರವೇಶಿಸಿದನು. ಯುವತಿಯು ನಸುನಗುತ್ತಾ ಅವನನ್ನು ಸ್ವಾಗತಿಸಿ, ಪಕ್ಕದಲ್ಲೇ ಕುಳಿತು ಕೊಳ್ಳಲು ಹೇಳಿದಾಗ ಇದೇನು ಕನಸೋ ಎಂದು ಭ್ರಮೆಯಾಯಿತು ಗ್ಯಾಸ್ಕನ್ನಿಗೆ. ಅವಳು ಮುಂಚಾಚಿದ ಮೃದುವಾದ ಹಸ್ತವನ್ನು ಹಿಡಿದಾಗ ಸ್ವರ್ಗವೇ ಸಿಕ್ಕಂತಾಗಿ ದೇಹದಲ್ಲಿ ವಿದ್ಯುತ್ ಪ್ರವಹಿಸಿದಂತೆ ಆಯಿತು. ಅರೆಮರೆಮಾಚಿ ಕಣಿವೆಯಂತೆ ಕಾಣುತ್ತಿದ್ದ ಸ್ತನದ್ವಯಗಳ ಮೇಲೆ ದೃಷ್ಟಿ ನೆಟ್ಟಿತು. ದಂತದಂತೆ ಬಿಳುಪಾಗಿ, ಮೃದುವಾದ ದೇಹದ ಅಂಗಾಂಗಗಳನ್ನು ಮುಕ್ತಕಂಠದಿಂದ ಹೊಗಳಿದನು. ಗ್ಯಾಸ್ಕನರು ಹೊಗಳುಭಟ್ಟರು. ಹೊಗಳುವುದರಲ್ಲಿ ಅವರನ್ನು ಮೀರಿಸುವ ಜನಾಂಗವು ಪ್ರಪಂಚದಲ್ಲೇ ಇಲ್ಲ. ಅವಳ ಚಂದುಟಿಗಳನ್ನು ಸುಂದರವಾದ ಹೂಗಳಿಗೆ ಹೋಲಿಸಿದನು.

ಫಿಲಿಸ್ಸಳು ಅವನ ಮಾತಿಗೆ ಮರುಳಾದಳು. ಗಾಸ್ಕನನು ಉತ್ತೇಜಿತನಾಗಿ ಅವಳ ಅಧರವನ್ನು ಚುಂಬಿಸಲು, ಇಷ್ಟರವರಿವಿಗೂ ತವೇಕ ಧ್ಯಾನದಲ್ಲಿ ನೆಟ್ಟ ನೋಟದಿಂದ ದೃಷ್ಟಿಸಿ ನೋಡುತ್ತಿದ್ದುದನ್ನು ಸ್ಪರ್ಶಿಸಲು ತವಕಗೊಂಡನು.

ಮುಂಚಾಚಿದ ಗ್ಯಾಸ್ಕನನ ಕೈಯನ್ನು ತಡೆದು ಫಿಲಿಸ್ "ನಾನು ಹೇಳಿದಂತೆ ಮಾಡಿದರೆ ನನ್ನ ಪ್ರೀತಿ, ಹಾಗೂ ದೇಹದ ಸುಖವನ್ನು ಪಡೆಯಬಲ್ಲೆ.

ನಾನು ಹುತ್ತು ಪಕ್ಕದ ಮನೆಯಲ್ಲಿರುವ ಕ್ಲೋರಿಸ್, ಅವಳ ಮುದಿಗಂಡನಿಗೆ ಮಂಕುಬೂದಿಯನ್ನು ಎರಿಚಬೇಕೆಂದು ಮಾತನಾಡಿಕೊಂಡಿದ್ದೇವೆ. ನೀನು ಇದಕ್ಕೆ ಸಹಾಯಮಾಡಬಲ್ಲೆಯಾ!'' ಎಂದಳು.

ಹಿಂದೂ ಮುಂದೂ ಯೋಚಿಸದೆ " ಓಹೋ ಅದಕ್ಕೇನು ! " ಎಂದ ಗ್ಯಾಸ್ಕರ್.

ಯುವತಿಯು " ನೀನು ಏನು ಮಾಡಬೇಕು ಗೊತ್ತಾ ? ಇವತ್ತು ರಾತ್ರಿ ಕ್ಲೋರಿಸ್ಸಳು ಗಂಡನಿಗೆ ಮಲಗುವುದಕ್ಕೆ ಹಾಸಿಗೆ ಹಾಸಿ, ನಿನ್ನನ್ನು ಮಲಗುವ ಕೋಣೆಯೊಳಗೆ ಬಿಡುತ್ತಾಳೆ. ನೀನು ಅವಳ ಲಂಗವನ್ನು ಹಾಕಿಕೊಂಡು ಹಾಸಿಗೆಯ ಮೇಲೆ ಮಲಗಿರು. ಗಂಡನು ಶುದ್ಧ ಬೆಪ್ಪುತಕ್ಕಡಿ ನಂಬರ್ ೧. ಮಲಗಿದ ಕ್ಷಣ ನಿದ್ದೆ ಬಂದುಬಿಡುತ್ತದೆ. ನಿದ್ದೆ ಕಣ್ಣಿಗೆ ಹತ್ತುತ್ತಿದ್ದ ಹಾಗೆ ಅಸಾಧ್ಯವಾಗಿ ಗೊರಿಕೆ ಹೊಡೆಯುತ್ತಾನೆ. ಪಕ್ಕದಲ್ಲಿ ನೀನು ಮಲಗಿದ್ದರೂ ಹೆಂಡತಿಯೇ ಮಲಗಿರುವುದೂಂತ ತಿಳಿದುಕೊಂಡಿರುತ್ತಾನೆ. ಅದೇ ಹೊತ್ತಿನಲ್ಲಿ ಕ್ಲೋರಿಸ್ಸಳು ಅವಳ ಪ್ರಿಯತಮ ಡಮೊನೆಯೊಡನೆ ಕಾಲ ಕಳೆಯುತ್ತಾಳೆ. ನಿನ್ನ ಕೈಲಿ ಸಾಧ್ಯವಾ ? ಹೇಳು ' ಎಂದಳು.

ಬಹಳ ಅಪಾಯಕರವಾದ ಕೆಲಸವೇ ಸರಿ. ಫಿಲಿಸ್ಸಳ ಮುದ್ದು ಮುಖವನ್ನು ನೋಡಿ ಅವಳ ಅನುರಾಗವನ್ನು ಪಡೆಯಲು ಕ್ಲೋರಿಸ್ಸಳ ಗಂಡನೊಟ್ಟಿಗೆ ಮಲಗಿಕೊಳ್ಳಲು ಸಿದ್ಧನಾದನು.

ರಾತ್ರಿ ಕ್ಲೋರಿಸಳು ಪತಿಗೆ ಮಲಗಲು ಹಾಸಿಗೆಯನ್ನು ಸಿದ್ಧಪಡಿಸಿದಂತೆ ಗ್ಯಾಸ್ಕನನು ಅವಳ ಮಲಗುವ ಕೋಣೆಯನ್ನು ಹೊಕ್ಕಿ ಹಾಸಿಗೆಯಲ್ಲಿ ಮಲಗಿದನು. ಸ್ವಲ್ಪ ಹೊತ್ತಾಗಲೂ ಪತಿ ಯಾರಿಲ್ಲಾ, ಕತ್ತಲಾಗಿದ್ದ ಕೋಣೆಯನ್ನು ಪ್ರವೇಶಿಸಿ ಹೆದರಿಕೆಯಿಂದ ನಡಗುತ್ತಾ ಮಲಗಿದ್ದ ಗ್ಯಾಸ್ಕನನ ಪಕ್ಕದಲ್ಲಿ ಮಲಗಿದನು.

ಯುವಕನಿಗೆ ರಾತ್ರಿಯೆಲ್ಲಾ ನಿದ್ರೆಯೇ ಬರಲಿಲ್ಲ. ಕಣ್ಣು ಕೂಡ ಮುಚ್ಚಲಿಲ್ಲ. ಆ ಕಡೆ ಈ ಕಡೆ ಹೊರಳುವುದಕ್ಕೂ ಹೆದರಿಕೆ. ಸೀನು ಕೆಮ್ಮು, ಬಂದರೂ ಹೇಗೋ ಕಷ್ಟಪಟ್ಟು ತಡೆದುಕೊಂಡನು. ಮುದುಕನು

ಬಂದು ಮಗ್ಗುಲಲ್ಲಿ ಮಲಗಿದನೇ? ಅದೂ ಇಲ್ಲ. ನಿಮಿಷ ನಿಮಿಷಕ್ಕೂ ಆಕಡೆ ಈಕಡೆ ಹೊರಳುತ್ತಲೇ ಇದ್ದನು. ಯುವಕನ ಬೆನ್ನಿನ ಕಡೆ ತಿರುಗಿ ಗೊರಕೆ ಹೊಡೆಯುತ್ತಿರುವಾಗ ಅವನ ಗಡ್ಡವು ಯುವಕನ ಬೆನ್ನನ್ನು ಸವರುತ್ತಿತ್ತು. ಯುವಕನಿಗೆ ಹೃದಯವು ಬಾಯಿಗೆ ಬಂದಂತಾಗಿ ಮೈಯೆಲ್ಲಾ ಬೆವರಿತು. ಆಕಸ್ಮಾತ್ತಾಗಿ ಎಚ್ಚರಗೊಂಡು ಪಕ್ಕದಲ್ಲಿ ಮಲಗಿರುವುದು ಮಡದಿಯೆಂದು ಕೊಂಡರೆ ಗತಿಯೇನು ? ಎಂದು ಮನಸ್ಸಿಗೆ ಹೊಳೆದಾಗ ಕೈ ಕಾಲು ತಣ್ಣಗಾದವು.

ಕೋಳಿಯು ಕೂಗುವ ಹೊತ್ತಿಗೆ ಹೆದರಿಕೆಯಿಂದ ಯುವಕನಿಗೆ ಕೈ ಕಾಲುಗಳು ಬಿದ್ದು ಹೋದ ಹಾಗೆ ಆಗಿತ್ತು. ಜೊತೆಗೆ ನಿದ್ರೆ ಬೇರೆ ಇಲ್ಲ. ಕ್ಲೋರಿಸ್ಸಳು ಮುದಿಗಂಡನು ಏಳುವುದಕ್ಕೆ ಮುಂಚೆ ಬಂದು ಎಬ್ಬಿಸುವು ದಾಗಿ ಹೇಳಿದ್ದಳು.

ಇದ್ದಿಕ್ಕಿದ್ದ ಹಾಗೆ ಕೊಠಡಿಯ ಬಾಗಿಲು ತೆರೆಯಿತು. ಕ್ಲೊರಿಸ್, ಮತ್ತು ಡರ್ಮೊ ಲಾಂದ್ರವನ್ನು ಹಿಡಿದು ನಗುತ್ತಾ ಕೊಠಡಿಯನ್ನು ಪ್ರವೇ ಶಿಸಿದರು. ಕೆಲಸ ಕೆಟ್ಟಿತೆಂದು ಕ್ಷಮೆಬೇಡಿಕೊಳ್ಳಲು ಯುವಕನು, ಯೂರಿಲಾ ಕಡೆ ಹೊರಳಿದನು. ಪಕ್ಕದಲ್ಲಿ ರಾತ್ರಿಯೆಲ್ಲಾ ಮಲಗಿದ್ದುದ್ದು, ಮುದಿಗಂಡ ನಲ್ಲ, ಪ್ರೇಯಸಿ ಫಿಲಿಸ್ ! ಯುವತಿಯು ಹಾಸಿಗೆಯಿಂದ ಚಂಗನೆ ಎದ್ದು, ಗೆಳತಿ ಮತ್ತು ಅವಳ ಪ್ರಿಯತಮನ ಭುಜಗಳ ಮೇಲೆ ಬಾಹುಗಳನ್ನು ಹಾಕಿ ನಿಂತಳು. ಮೂವರೂ ಹೊಟ್ಟೆ ಹುಣ್ಣಾಗುವ ಹಾಗೆ ನಕ್ಕರು. ಗ್ಯಾಸ್ಕ ನನು ರಾತ್ರಿಯೆಲ್ಲಾ ತನ್ನ ಇನಿಯಳ ಪಕ್ಕದಲ್ಲೇ ಮಲಗಿದ್ದರೂ ಹೆದರಿಕೆ ಯಿಂದ ಒಂದು ನಿಮಿಷ ಕೂಡ ನಿದ್ದೆ ಮಾಡದೆ ನಡಗುತ್ತಾ ಕಾಲಕಳೆದಿದ್ದನು.

ನಿರಾಶೆ, ಅವಮಾನಗಳಿಂದ ತಲೆ ತಗ್ಗಿಸಿ ಕುಳಿತುಕೊಂಡನು. ಮಾತ ನಾಡಲು ಹೋದಾಗ ಧ್ವನಿಯೇ ಹೊರಡಲಿಲ್ಲ. ಉರಿಯುವ ಹುಣ್ಣಿಗೆ ಉಪ್ಪು ಹಚ್ಚುವಂತೆ ರಾತ್ರಿ ಎಲ್ಲಾ ಅನುಭವಿಸಬಹುದಾಗಿದ್ದ ಅಂಗಾಂಗ ಸೌಂದರ್ಯವನ್ನು ತೋರಿಸಲು ಫಿಲಿಸ್ಸಳು ತೊಟ್ಟ ಲಂಗವನ್ನು ನಿಧಾನ ವಾಗಿ ಕಳಚಿ ನಗ್ನಳಾಗಿ ನಿಂತಳು.

# ಡೇರೆಯಲ್ಲಿ ಕಂಡ ಸುಂದರಿ

ಬರೆದವರು : ಕ್ರಿರ್ಟೇಡಿ ಟ್ರ್ರೋಯೆ

ಸಾಹಸ ಕಾರ್ಯವನ್ನೆಸಗಬೇಕೆಂದು ಉತ್ಕಟಾಪೇಕ್ಷೆ ಗವೈನನಿಗೆ. ಮೂರು ರಾತ್ರಿ, ಮೂರು ಹಗಲು ನಿದ್ದೆಯನ್ನು ಕೂಡಮಾಡದೆ ಕುದುರೆಯ ಮೇಲೆ ಕುಳಿತು ಒಂದೇ ಸಮನಾಗಿ ಬ್ರೊಸಿಲಿಯಾಂಡ ಕಗ್ಗಾಡಿನಲ್ಲಿ ಪ್ರಯಾಣ ಬೆಳಸಿದನು ದೂರದಲ್ಲಿ ಅತ್ಯಂತ ಸುಂದರವಾದ, ಅಲಂಕೃತ ವಾದ ರೇಶ್ಮೆಯ ಡೇರೆಯೊಂದು ಕಾಣಬಂದಿತು. ಡೇರೆಯ ಶಿಖರದಲ್ಲಿ ರಕ್ತ ವರ್ಣದ ಲಾಂಛನವೊಂದು ಹಾರಾಡುತ್ತಿತ್ತು. ಗವೈನನು ಉತ್ಸಾಹದಿಂದ ಕತ್ತಿಯನ್ನು ಸೆಳೆದು ಕುದುರೆಯನ್ನು ನಾಗಾಲೋಟ ಓಡಿಸುತ್ತಾ ಡೇರೆ ಯೊಳಗೆ ನುಗ್ಗಿದನು. ಡೇರೆಯ ಒಳಭಾಗವು ಮನವನ್ನು ಆಕರ್ಷಿಸುವಂತೆ ಅಲಂಕೃತವಾಗಿತ್ತು. ಮಧ್ಯದಲ್ಲಿ ಐದು ಸುಪ್ಪತ್ತಿಗೆಗಳು. ಡೇರೆಯಲ್ಲಿ ಯಾರೂ ಇದ್ದಂತೆ ಕಾಣಬರಲಿಲ್ಲ. ಒಂದು ಹಾಸಿಗೆಯ ಮೇಲೆ ಮಾತ್ರ ಮಲಗುವ ಉಡುಪನ್ನು ( ನೈಟ್ ಡ್ರೆಸ್ ) ಧರಿಸಿದ್ದ ಸುಂದರಿಯೊಬ್ಬಳು ನಿದ್ರಿಸುತ್ತಿದಳು. ತುಂಬಿದ ಕೆನ್ನೆ. ನೀಳವಾದ ಕಪ್ಪು ಕೇಶರಾಶಿ, ತೊಂಡೆ ಹಣ್ಣಿನಂತೆ ಕೆಂಪಗೆ ಮಾಟವಾಗಿದ್ದ ಅರೆತೆರೆದ ಚಂದುಟಗಳು. ಅವಳು ಮಲ ಗಿದ್ದ ಭಂಗಿ ಪ್ರಿಯತಮನನ್ನು ಓಕೊಟ್ಟು ತನ್ನ ಬಾಹುಗಳಲ್ಲಿ ಕಾತುರತೆ ಯಿಂದ ಸೆಳೆದಪ್ಪುವಂತೆ ಸೂಚಿಸುತ್ತಿತು.

ಗವೈನನು 'ವಾಹ್' ಎಂದು ಕತ್ತಿಯನ್ನು ಬಿಸಟು ಆವಳನ್ನು ಬಿಗಿ ದಪ್ಪಿದನು. ತರುಣಿಯು ಕಣ್ತೆರೆದು ನಸುನಗುತ್ತಾ, "ಮೂರು ದಿವಸ ಗಳಿಂದ ನಾನು ಗರ್ವೈನನ್ನು ಕನಸಿನಲ್ಲಿ ಕಾಣುತ್ತಲೇ ಇದ್ದೇನೆ. ನೀನೇ ಆ ಸಾಹಸಿಗ ಗರ್ವೈ ಆಗಿದ್ದರೆ ಯೋಧನು ತರುಣಿಗೆ ಸಲ್ಲಿಸುವ ಕಾರ್ಯ ವನ್ನು ಪೂರೈಸು " ಎಂದಳು.

ಗವೈನನ ಸಂತೋಷಕ್ಕೆ ಪಾರವೇ ಇಲ್ಲ. "ನಾನೇ ಅವನು ಕಾಣೇ" ಎಂದು ನೈಟ್ (ಯೂರೋಪಿನಲ್ಲಿ ಮಧ್ಯಯುಗದ ಯೋಧ) ಸುಂದರ ತರು ಣಿಗೆ ಎಸಗಬೇಕಾದ ಕಾರ್ಯವನ್ನು ಸುರು ಹಚ್ಚುತ್ತಿದ್ದಂತೆ ಬೆನ್ನಿನ ಮೇಲೆ ಬಲವಾಗಿ ಕತ್ತಿಯ ಅಲಗಿನಿಂದ ಯಾರೋ ಬಾರಿಸಿದರು.

ಬಂದವನು "ನೀಚ ! ಹೊರಡು ಇಲ್ಲಿಂದ. ಏನೂಂತ ತಿಳಿದುಕೊಂಡೆ. ನೀನು ನಿಜವಾಗಲೂ ಯೋಧನಾಗಿದ್ದರೆ ಇವಳನ್ನು ಆಲಂಗಿಸಿದ ರೀತಿ ಕತ್ತಿಯ ವರಸೆಯಲ್ಲೂ ನಿಪುಣನೆಂಬುದನ್ನು ತೋರಿಸು ನೋಡೋಣ" ಎಂದನು.

ಗವೈನನು ಕತ್ತಿಯನ್ನು ಹಿಡಿದು ಆಗುಂತಕನನ್ನು ಹಿಂಬಾಲಿಸಿದನು. ಇಬ್ಬರೂ ಘೋರವಾಗಿ ಯುದ್ಧ ಮಾಡಿದರು. ಕತ್ತಿಗಳನ್ನು ಝಳಪಿಸಿದಾಗ ಮಿಂಚಿನಂತೆ ತೋರಿದವು. ಕತ್ತಿಗೆ ಕತ್ತಿ ಮಸೆದಾಗ ಉರಿಯುವ ನಾಲಿಗೆ ಯಂತೆ ಬೆಂಕಿ ಎದ್ದಿತು. ಇಬ್ಬರೂ ಸೆಣೆಯುತ್ತಿದ್ದಾಗ ಎದ್ದ ಧೂಳಿನಿಂದ ಸೂರ್ಯನೇ ಮುಚ್ಚಿ ಹೋಗಿ ಕತ್ತಲೆಯು ಆವರಿಸಿದಂತೆ ತೋರಿತು.

ಕಡೆಗೆ ಆಗುಂತಕನು "ನಾನು ಸೋತೆ. ನನ್ನ ಮಗಳಿಗೆ ನೀನೇ ತಕ್ಕ ವರ. ಸೂಕ್ತವಾದ ರೀತಿ ಅವಳೊಂದಿಗೆ ಯೋಧನಂತೆಯೇ ನಡೆದು ಕೊ" ಎಂದು ಹೊಗಳಿ ಹೊರಟು ಹೋದನು.

ಗವೈನನು "ಹಾಗಾ ಅದಕ್ಕೇನು...." ಎಂದು ತಕ್ಷಣವೇ ಡೇರೆಯೊಳಗೆ ನುಗ್ಗಿ, ಅರ್ಧದಲ್ಲಿ ಅಡ್ಡಿ ಬಂದು ನಿಂತು ಹೋದ ಕಾರ್ಯವನ್ನು ಹುಮ್ಮಸ್ಸಿ ನಿಂದ ಮುಂದುವರಿಸತೊಡಗಿದನು. ಕಾರ್ಯವು ಪ್ರಾರಂಭವಾಗುತ್ತಿದ್ದಂತೆ ಬಿತ್ತು ಮತ್ತೊಮ್ಮೆ ಕತ್ತಿಯ ಅಲಗಿನಿಂದ ಬಲವಾದ ಪೆಟ್ಟು.

ಒಳಗೆ ಬಂದವನು "ನೀನು ನಿಜವಾದ ಯೋಧನೇ ಆಗಿದ್ದಲ್ಲಿ ನನ್ನ ಜೊತೆ ಭಲ್ಲೆಯಿಂದ ಸೆಣೆ" ಎಂದನು.

"ಇವನು ನನ್ನ ಅಣ್ಣ. ಸಾಹಸದಿಂದಲಾದರೂ ಸರಿ, ಚಾತುರ್ಯ ದಿಂದಲಾದರೂ ಸರಿ ಅಂತೂ ಹೇಗೋ ಯುದ್ಧ ಮಾಡಿ ಸೋಲಿಸು. ಇಲ್ಲ ದಿದ್ದರೆ ಇವನು ಸುಮ್ಮನೆ ಬಿಡುವವನಲ್ಲ" ಎಂದು ಮೆಲ್ಲನೆ ಸುಂದರಿಯು ಕಿವಿಯಲ್ಲಿ ಹೇಳಿದನು.

ಗರ್ವೈ ಅಲ್ಲೇ ಇದ್ದ ಭಲ್ಲೆಯೊಂದನ್ನು ತೆಗೆದುಕೊಂಡು ಬಂದವನನ್ನು ಹಿಂಬಾಲಿಸಿದನು. ಇಬ್ಬರೂ ಯುದ್ಧ ಮಾಡತೊಡಗಿದರು. ಭಲ್ಲೆಯು ರಾಜಕುಮಾರನಿಗೆ ತಗುಲಿ ರಕ್ತವು ಚಿಮ್ಮಿತು. ರಾಜಕುಮಾರನು "ನನ್ನ ತಂಗಿಯ ಕೈ ಹಿಡಿಯಲು ನೀನೇ ತಕ್ಕವನು ಯುದ್ಧದಲ್ಲಿ ಎಷ್ಟು ಕ್ರೂರವಾಗಿ ವರ್ತಿಸುತ್ತೀಯೋ ಅಷ್ಟೇ ಮೃದುವಾಗಿ ಆವಳನ್ನು ಪ್ರೀತಿಸು" ಎಂದು ಹೊರಟು ಹೋದನು

ಗರ್ವೈನನು 'ಓಹೋ' ಎಂದು ಪುನಃ ಡೇರೆಯನ್ನು ಹೊಕ್ಕನು.

ಸ್ವಲ್ಪ ಕಾಲ ಉರುಳಿ, ಗರ್ವೈನನು ಪ್ರೇಮದ ಪರಾಕಾಷ್ಠತೆಯನ್ನು ಮುಟ್ಟುತ್ತಿದ್ದಂತೆ ಕತ್ತಿಯು ಅಲುಗಿನಿಂದ ಯಾರೋ ಬಲವಾಗಿ ಬಿಗಿದು ಕೀರಲು ಧ್ವನಿಯಲ್ಲಿ "ಸಾಕು ನಿಲ್ಲಿಸೋ .... ನನ್ನ ತಂಗಿಯ ಒಲುವನ್ನು ಪಡೆಯಲು ಅರ್ಹನಾದ ಪುರುಷನಾಗಿದ್ದೀಯೆಂದು ತೋರಿಸುವ ಮುನ್ನ ನನ್ನ ಜೊತೆ ಹೋರಾಡಿ ಗೆಲ್ಲು ನೋಡೋಣ'' ಎಂದನು.

"ಇವನು ನನ್ನ ಎರಡನೆಯ ಅಣ್ಣ. ಶಕ್ತಿಯಿಂದಲಾದರೂ ಸರಿ, ಯುಕ್ತಿಯಿಂದಲಾದರೂ ಸರಿ ಸೋಲಿಸು" ಎಂದಳು ಚಲುವೆ.

ಗರ್ವೈನನು ಅರ್ಧಮನಸ್ಸಿನಿಂದ ಅಲ್ಲೇ ಜೋಡಿಸಿಟ್ಟಿದ್ದ ಆಯುಧಗಳಲ್ಲಿ ಗಂಡುಗೊಡಲಿಯೊಂದನ್ನು ತೆಗೆದುಕೊಂಡು, ಬಂದ ರಾಜಕುಮಾರನನ್ನು ಹಿಂಬಾಲಿಸಿದನು. ಇಬ್ಬರೂ ಹೋರಾಡುತ್ತಿರುವಾಗ ಗಂಡುಗೊಡಲಿಗಳು ಬೀಸಿದ ವೇಗಕ್ಕೆ ಬಿರುಗಾಳಿಯೆದ್ದು ಮರಗಳು ತತ್ತರಿಸಿದವು. ರೆಂಬೆಗಳು ಮುರಿದು ಬಿದ್ದು, ಎಲೆಗಳು ತೂರಿಹೋದವು. ಇಬ್ಬರಿಗೂ ಘಾಯಗಳಾಗಿ ರಕ್ತ ಬುಗ್ಗೆಯಂತೆ ಚಿಮ್ಮಿ ನದಿಯಂತೆ ಭೋರ್ಗರೆಯುತ್ತಾ ಹರಿಯಿತು. ಗಗನವನ್ನು ಚುಂಬಿಸುವಂತೆ ಧೂಳೆದ್ದಿತು. ಕಡೆಗೆ ರಾಜಕುಮಾರನು ಕೊಡಲಿಯನ್ನು ಬಿಸಾಕಿ, ಮಂಡಿಯೂರಿ ಕುಳಿತು ಯುದ್ಧವು ಸಾಕು. ನೀನೇ ಜಯಶಾಲಿ. ಶತ್ರುಗಳೊಡನೆ ಯಾವ ರೀತಿ ನಿರ್ದಯನಾಗಿ ಹೋರಾಡುತ್ತೀಯೋ ಅದೇ ರೀತಿ ನನ್ನ ತಂಗಿಯೊಂದಿಗೆ ಅತ್ಯಂತ ಕೋಮಲವಾಗಿ ವರ್ತಿಸು" ಎಂದು ಹಿಂತಿರುಗಿ ಕೂಡ ನೋಡದೆ ಹೊರಟು ಹೋದನು.

ಗವೈನನು 'ಓಹೋ' ಎಂದು ಪ್ರಾರಂಭಿಸಿದ ಕಾರ್ಯವನ್ನು ಮುಗಿಸಲು ಕಾತುರನಾಗಿ ಡೇರೆಯನ್ನು ಪ್ರವೇಶಿಸಿ ಸ್ವಲ್ಪ ಕಾಲವಾದ ಮೇಲೆ ತಣಿದು ತರುಣಿಯ ತೋಳ್ತಕ್ಕೆಯಲ್ಲಿ ಸಿದ್ರಿಸಿದನು.

ಸುಂದರ ತರುಣಿಯು ನೀಳವಾದ ಬೆರಳುಗಳಿಂದ ಗವೈನನ ಕಪೋಲವನ್ನು ಮೃದುವಾಗಿ ಸವರಿದಳು. ಗವೈನನು ನಿದ್ದೆಯಿಂದೆದ್ದು ತರುಣಿಯನ್ನು ಆಲಂಗಿಸಲು ಹೋದಂತೆ, ರಾಜಕುಮಾರಿಯು ಬಾಗಿಲ ಕಡೆ ಕೈ ತೋರಿಸಿದಳು. ಬಾಗಿಲಲ್ಲಿ ಕೋಪದಿಂದ ತನ್ನನ್ನೇ ದೃಷ್ಟಿಸಿ ನೋಡುತ್ತಾ ಯೋಧನೊಬ್ಬನು ನಿಂತಿದ್ದನು.

"ಇವನು ನನ್ನ ಕಿರಿಯ ತಮ್ಮ. ಮಹಾ ಕೋಪಿಷ್ಠ. ಬಲಶಾಲಿ. ಈ ಕಾಡಿನಲ್ಲಿ ಇವನಿಗೆ ಸರಿಸಮನಾಗಿ ಹೋರಾಡಿ ಗೆದ್ದವರೇ ಯಾರೂ ಇಲ್ಲ. ಇವನಿಗೆ ನಾನು ಮೊದಲೇ ಎಲ್ಲ ವಿಚಾರವನ್ನೂ ತಿಳಿಸಿದ್ದೇನೆ. ಆದರೂ ಯುದ್ಧ ಮಾಡಲು ಬಯಸುತ್ತಾನೆ. ಇವನನ್ನು ಸೋಲಿಸಲು ಸಾಧ್ಯವೇ ಇಲ್ಲ. ಒಂದು ವೇಳೆ ನೀನು ಯುದ್ಧದಲ್ಲಿ ಸೋತರೆ ತಕ್ಷಣ ನಿಲ್ಲದೆ ಹೊರಟು ಹೋಗು'' ಎಂದು ಎಚ್ಚರಿಸಿದಳು.

ಗವೈ್ನ ಹೆಮ್ಮೆಯಿಂದ "ನಾನು ಮತ್ತಾರೂ ಅಲ್ಲ ಗವೈ್ನ!" ಎಂದು ರಾಜಕುಮಾರನನ್ನು ಹಿಂಬಾಲಿಸಿದನು. ಇಬ್ಬರೂ ಸರಿಸಮಾನರಾಗಿ ಸೆಣೆದಾಡಿದರು. ಯುದ್ಧವಾಗುತ್ತಿದ್ದಂತೆ ಸೂರ್ಯನು ಮರೆಯಾಗಿ ಕತ್ತಲೆಯು ಹರಡಿತು. ಕಗ್ಗತ್ತಲೆಯಲ್ಲಿ ಅವರಿಬ್ಬರೂ ಹೋರಾಡುತ್ತಿದ್ದಾಗ ಕತ್ತಿಗಳು ಮಸೆದು ಎದ್ದ ಬೆಂಕಿ, ಮಿಂಚಿನಂತೆ ನಿಶೆಯನ್ನು ದೂಡುತ್ತಿತ್ತು. ಹೋರಾಡುತ್ತಿದಂತೆ ಕತ್ತಲೆಯೂ ದೂರವಾಗಿ ಸೂರ್ಯನು ಉದಯಿಸಿದನು. ಯುದ್ಧವು, ಮುಗಿಯುವಂತೆಯೇ ತೋರಲಿಲ್ಲ. ಬ್ರಾಡಲ್ಸ್ ಎಷ್ಟು ಚತುರನೋ, ನಿಪುಣನೋ ಗವೈನನು ಅಷ್ಟೇ ಬಲಶಾಲಿ. ಹಯವರಟ.

ಕಡೆಗೆ ಗವೈನನು "ಸರ್ ಬ್ರಾಡಲ್ಸ್ ನಿನ್ನಷ್ಟು ನಿಪುಣನಾಗಿ ಯುದ್ಧ ಮಾಡುವವನನ್ನು ಇದು ವರಿವಿಗೂ ಕಂಡಿದ್ದೇ ಇಲ್ಲ" ಎಂದನು.

"ಸರ್ ಗರ್ವೈನ್ ನಿನ್ನಷ್ಟು ವರಟಾಗಿ ಸೆಣೆಯುವವನನ್ನೂ ನಾನು ಕಂಡಿದ್ದೆಯಿಲ್ಲ. ಮತ್ತೊಮ್ಮೆ ಸಂಧಿಸುವವರೆಗೂ ನಮ್ಮಿಬ್ಬರ ಹಗೆತನವು ಹಾಗೆಯೇ ಉಳಿಯಲಿ" ಎಂದನು ಬ್ರಾಡಲ್ಸ್.

ಗವೈನನು 'ಒಪ್ಪಿದೆ....ಹಾಗೇ ಆಗಲಿ' ಎಂದನು.

ಇಬ್ಬರೂ ಕೈಕುಲಕಿದರು. ಯುದ್ಧಮಾಡಿ ಬಳಲಿದ್ದ ಗವೈನು ತನ್ನ ಮನದರಸಿಯನ್ನು ನೋಡಲು ಕಾತುರನಾಗಿ ಡೇರೆಯನ್ನು ಹೊಕ್ಕನು. ಆದರೆ ರಾಜಕುಮಾರಿಯು ಎಲ್ಲೂ ಕಾಣಿಸಲಿಲ್ಲ.

ಹಾಗಾದರೆ ಅವಳೆಲ್ಲಿ ಹೋದಳು ? ಒಬ್ಬಳೇ ಹೊರಟು ಹೋಗಲಿಲ್ಲವೆಂದು ವದಂತಿ.

ಸ್ವಲ್ಪ ಕಾಲವಾದ ಮೇಲೆ ರಾಜಕುಮಾರಿಯು ಡೇರೆಯ ಹೊರಗೆ ಮಗುವನ್ನು ಮುದ್ದಿಸುವುದನ್ನು ಕಾಣಬಹುದಾಗಿತ್ತು. ಯೋಧರು, ಮುದ್ದಾದ ಮಗು, ಮಗುವಿನ ಚಲುವಿಗೂ ನೂರ್ಮಡಿ ಚಲುವೆಯಾದ ತಾಯಿಯನ್ನು ಸುತ್ತುಗಟ್ಟಿ ತುಂಬುಗಣ್ಣಿನಿಂದ ನೋಡುತ್ತಿದ್ದರು. ತಾಯಿ ಮಗುವಿನ ಕಿವಿಯಲ್ಲಿ ತಂದೆಯ ಸಾಹಸಕಾರ್ಯಗಳನ್ನು ಬಹಳ ಹೆಮ್ಮೆಯಿಂದ ವರ್ಣಿಸುತ್ತಿದ್ದಳು. ಯೋಧರಿಗೆ ಇದ್ದುದು ಒಂದೇ ಸಂದೇಹ. ಮಗುವಿನ ತಂದೆ ಯಾರು ? ಗರ್ಗ್ಲೈರ್ ಇರಬಹುದೆ ? .... ಇರಲಿಕ್ಕಿಲ್ಲ.... ಅದು ಹೇಗೆ ಸಾಧ್ಯ....ಹಾಗಾದರೆ ಮತ್ತಾರಿರಬಹುದು ?



# ಹೆಂಡೆ ಮಾರಿದ ಚದುರೆ

ಬರೆದವರು : **ಗಿಯೋವಾನಿ ಬೊಕ್ಯಾಷಿಯೊ**

ಸಿಡಿದೆದ್ದ ಗಂಡನ ಕೋಪದಿಂದ ಪಾರಾದ ಚದುರೆಯ ಕಥೆ ಹೀಗೆ.

ನೇಪಲ್ಸಿನಲ್ಲಿ ಒಬ್ಬ ಬಡ ಗಾರೆಯ ಕೆಲಸದವನಿದ್ದನು. ಸಂಸಾರ ತೂಗಿಸುವುದೇ ಕಷ್ಟವಾಗಿತ್ತು. ಹೆಂಡತಿಯು ಕೂಡ ಗಂಡನೊಡನೆ ಸಹ ಕರಿಸಿ ಎರಡು ಹೊತ್ತು ಊಟಮಾಡಿಕೊಂಡಿರಲು ನೂಲುತ್ತಿದ್ದಳು. ಇಬ್ಬರೂ ಕಷ್ಟ ಜೀವಿಗಳು. ಅಂತೂ ಹೇಗೋ ಸಂಸಾರ ಪಥವು ಸಾಗುತ್ತಿತ್ತು.

ಗಾರೆ ಕೆಲಸದವನ ಮನೆಯ ಹತ್ತಿರ ಒಬ್ಬ ಯುವಕನಿದ್ದನು. ರಸಿಕ. ಅವನಿಗೆ ಇವಳ ಮೇಲೆ ಕಣ್ಣು ಬಿತ್ತು. ಹಾವ ಭಾವ, ಒಲುವನ್ನು ಸೂಚಿ ಸಲು ನೋಡುತ್ತಿದ್ದ ಚಂಚಲದೃಷ್ಟಿ, ಅವಳು ಮಾಡುತ್ತಿದ್ದ ಸಂಜ್ಞೆಗಳಿಂದ ತನ್ನಲ್ಲಿ ಅನುರಕ್ತಳಾಗಿದ್ದಾಳೆಂದು ತಿಳಿದುಕೊಳ್ಳಲು ರಸಿಕನಿಗೆ ಹೆಚ್ಚುಕಾಲ ಬೇಕಾಗಲಿಲ್ಲ. ಇಬ್ಬರೂ ಗಂಡನು ಕೆಲಸಕ್ಕೆ ಹೋದ ಸಮಯದಲ್ಲಿ ಒಂದು ಗೂಡಲು ಸನ್ನಾಹ ಹೂಡದರು.

ಗಿಯಾನೆಲ್ಲೊ (ರಸಿಕ ಶಿಖಾಮಣಿಯ ಹೆಸರು) ಪೆರೊನೆಲ್ಲಾ (ಸಾಧ್ವಿ ಮಣಿಯ ಹೆಸರು) ಪತಿಯು ಕೆಲಸಕ್ಕೆ ಹೋದ ವೇಳೆಯಲ್ಲಿ ಅನೇಕ ದಿನ ಬೆಳಗಿನ ಹೊತ್ತು ಮೋಜಿನಿಂದ ಕಾಲಕಳೆದರು

ಒಂದು ದಿವಸ ಇಬ್ಬರೂ ಪ್ರೇಮಲೀಲೆಯಲ್ಲಿ ತೊಡಗುತ್ತಿದ್ದಂತೆ, ಗಂಡನು ಮನೆಗೆ ಹಿಂತಿರುಗಿದನು. ಬಾಗಿಲು ಹಾಕಿದ್ದನ್ನು ನೋಡಿ ಮನದಲ್ಲೇ ಹಿಗ್ಗಿ "ಭೇಷ್! ಯಾರಾದರೂ ಸರಿ ಕೈ ಹಿಡಿವರೆ ಇಂತಹವಳ ಕೈಹಿಡಿಯ ಬೇಕು. ನಾನೇ ಪುಣ್ಯಶಾಲಿ! ಇವಳಷ್ಟು ಒಳ್ಳೆಯವಳು ಈ ಪ್ರಪಂಚ ದಲ್ಲಿ ಬೇರೆ ಯಾರಾದರೂ ಇದ್ದಾರೆಯೆ? ಸಾಧ್ವಿಮಣಿಯೆಂದರೆ ಇವಳೇ. ನಾನು ಹೋಗುತ್ತಿದ್ದ ಹಾಗೆ, ಒಳಗೆ ಯಾರಾದರೂ ಪುಂಡರು ನುಗ್ಗಿಯಾ ರೊಂತ ಬಾಗಿಲನ್ನು ಹಾಕಿಕೊಂಡಿದ್ದಾಳೆ" ಎಂದು ಕೊಂಡನು.

ಪೆರೊನೆಲ್ಲಾಗೆ ಬಾಗಿಲು ತಟ್ಟುತ್ತಿರುವುದಾರೆಂದು ಗೊತ್ತಾಯಿತು. " ಗಿಯೋನೆಲ್ಲೋ ಕೆಲಸ ಕಟ್ಟಿತು ! ಹಿಂತಿರುಗಿ ಬಂದೇಬಿಟ್ಟ ಇಷ್ಟು ಬೇಗ ಹಿಂತಿರುಗಿ ಬರುತ್ತಾನೇಂತ ಕನಸಿನಲ್ಲೂ ಎಣಿಸಿರಲಿಲ್ಲ. ನೀನು ಮನೆಯೊಳಗೆ ಬಂದಾಗ ಆಚೆ ಈಚೆ ಯಾರಾದರೂ ನೋಡಿದರಾ ? ಏನಾದರೂ ಆಗಲಿ ಆಗೋ ಅಲ್ಲಿ ಮದ್ಯದ ಹಂಡೆ ಕಾಣಿಸುತ್ತಲ್ಲಾ ಅದರಲ್ಲಿ ಅವಿತುಕೊ. ನಾನು ಚಿಲಕ ತೆಗೆಯುತ್ತೇನೆ' ಎಂದಳು.

ಗಿಯುನೆಲ್ಲೋ ಹಂಡೆಯನ್ನು ಹತ್ತಿ ಅವಿತುಕೊಳ್ಳುತ್ತಿದ್ದಂತೆ ಪೆರೊನೆಲ್ಲಾ ಗಂಡನಿಗೆ ಬಾಗಿಲನ್ನು ತೆರೆದಳು. ಜೊತೆಗೆ ಇನ್ನೊಬ್ಬನು ಬಂದಿದ್ದನು. ಗಂಡನು ಒಳಗೆ ಬಂದಂತೆ ಕೋಪಗೊಂಡವಳಂತೆ " ಚನ್ನಾಯ್ತು, ಇದೇ ನೂಂದ್ರೆ .... ನಿಮಗೇನು ಬಂತು ? ಇವತ್ತು ಉಪವಾಸವಿರಬೇಕೂಂತ ನಿಮ್ಮ ಆಸೇನಾ ? ಎಲ್ಲೋ ನನ್ನ ಬಟ್ಟೆಗಳನ್ನೂ ಅಡವಿಡೋದಕ್ಕೆ ಮನೆಗೆ ಹಿಂತಿರುಗಿ ಬಂದಂತೆ ಕಾಣಿಸುತ್ತೆ. ನಾನು ಹಗಲೂ ರಾತ್ರಿ ಕೈ - ಬೆನ್ನು ನೋಯಿಸ್ಕೊಂಡು ನೂಲುವುದನ್ನು ನೋಡಿ ನಾನೇಕೆ ಕೆಲಸ ಮಾಡಬೇಕೆಂದು ಸೋಮಾರಿತನ ಬಂದಂತೆ ಕಾಣಿಸುತ್ತದೆ. ಮೊದಲೇ ನಮ್ಮ ಪರಿಸ್ಥಿತಿ ನೋಡಿ ಅಕ್ಕಪಕ್ಕದ ಜನ ಆಡಿಕೊಂಡು ನಗುತ್ತಾರೆ. ಸಾಲದ್ದಕ್ಕೆ ಕೆಲಸಾನೂ ಮಾಡದೆ ಇದ್ದರೆ ಬಹಳ ಚನ್ನಾಂದ್ರೆ " ಎಂದು ಹೇಳುವಾಗ ಅವಳ ಕಣ್ಣುಗಳಲ್ಲಿ ಅಶ್ರು ಧಾರೆಯು ಬುಗ್ಗೆಯಂತೆ ಹರಿದು ಬಂದವು .... " ಯಾತಕ್ಕಾದರೂ ಹೆಣ್ಣಾಗಿ ಹುಟ್ಟಿದೆನೋ .... ದೇವರು ಈ ಜನ್ಮ ಯಾವತ್ತು ಸಾಕು ಮಾಡುತ್ತಾನೋ ತಿಳಿಯದು. ಹೋಗಿ, ಹೋಗಿ, ನಿಮ್ಮ ಕೈ ಹಿಡಿದೆನಲ್ಲಾ. ನಾನು ಸರಿಯಾಗಿ ಮಾನ ಮರ್ಯಾದೆಯಿಂದ ಬಾಳುತ್ತಿರುವುದಕ್ಕೆ ಇದೇ ಪ್ರತಿಫಲ. ನಿಮಗೆ ಮೋಸ ಮಾಡುವುದು ಎಷ್ಟು ಹೊತ್ತು. ಕಣ್ಣು ಸನ್ನೆ ಮಾಡಿದರೆ ಸಾಕು ಕಾದಿದ್ದಾರ ನೂರಾರು ಜನ. ನಾನು ಹಾಯಾಗಿರಬಹುದು. ಅಂಬಲಿ ಕುಡಿದುಕೊಂಡಾದರೂ ಮಾನವಾಗಿ ಬಾಳಬೇಕು ಅನ್ನುವುದಕ್ಕೆ ತಾನೆ ನಾನು ಹೀಗಿರೋದು. ಹೀಗಿದ್ದರೂ ಒಂದು ದಮ್ಮಡಿ ಸಂಪಾದಿಸದೆ ಬರಿಯ ಕೈಯಲ್ಲಿ ಬಂದಿದ್ದೀರಲ್ಲಾ " ಎಂದು ಬೊಬ್ಬೆಯಿಟ್ಟಳು.

"ಸಾಕು, ಸುಮ್ಮನಿರೆ, ನಾಲಿಗೆ ಇದೇಂತ ಬಾಯಿಗೆ ಬಂದದ್ದೇ ಹರಟಬೇಡ. ಹಿಂದೂ ಮುಂದೂ ಗೊತ್ತಿಲ್ಲದೆ ಮಾತನಾಡಬೇಡ ಹಬ್ಬ ಅನ್ನುವುದು ಮರೆತು ಕೆಲಸಕ್ಕೆ ಹೋದೆ. ಇವತ್ತು ಸ್ಯಾಂಗೆಲಿಯೊನೆ ಹಬ್ಬ ಕಾಣೆ! ರಜ. ಇವತ್ತು ಯಾರೂ ಕೆಲಸ ಮಾಡುವುದಿಲ್ಲ. ಅದಕ್ಕೇ ಮನಗೆ ವಾಪಸ್ ಬಂದೆ. ಸುಮ್ಮನೆ ಬರಿಯ ಕೈಲಿ ಬಂದೇಂತ ತಿಳಿದು ಕೊಂಡೆಯಾ? ಊಟಕ್ಕೆ ಬೇಕಾಗೋಷ್ಟು ಹಣಕ್ಕೆ ದಾರಿ ಮಾಡೇ ಬಂದಿದ್ದೇನೆ. ಏನೂಂತ ತಿಳಿದುಕೊಂಡಿದ್ದಿಯಾ? ಆ ಹಳೆಯ ಹಂಡೆ ಕೊಠಡಿಯ ಅರ್ಧ ಭಾಗವನ್ನು ಆಕ್ರಮಿಸಿಕೊಂಡಿದೆ. ಅದನ್ನು ನನ್ನ ಜೊತೆಗೆ ಬಂದಿದ್ದಾರಲ್ಲ ಇವರಿಗೆ ಐದು ಫ್ಲಾರಿನ್ಸಿಗೆ ಮಾರಿದ್ದೇನೆ. ಸುಮ್ಮ ಸುಮ್ಮನೆ ಯಾಕೆ ಅರಚುತ್ತಿ" ಎಂದನು.

ಪೆರೊನೆಲಾ "ಚೆನ್ನಾಯಿತ್ತೂಂದ್ರೆ .... ನಿಮಗೆ ವ್ಯಾಪಾರ ಮಾಡೋದಕ್ಕೆ ಬೇರೆ ಬರುತ್ತಾ? ಶುದ್ಧ ಮಂಕು ಕಾಣ್ರೀ ನೀವು! ಗಂಡಸರಿಗೇ ಅಷ್ಟು ಏನೂ ಗೊತ್ತಾಗೊಲ್ಲ. ತಿಳಿದುಕೊಂಡಿರುವುದು ಮಾತ್ರ ತಾವೇ ಬುದ್ಧಿವಂತರೂಂತ! ಮನೆಯಲ್ಲೇ ಕೂತುಕೊಂಡು ಹಂಡೆಯನ್ನು ಏಳು ಫ್ಲಾರಿಗೆ ಮಾರಿಯಾಯಿತು. ಇದಕ್ಕೇನು ಹೇಳುತ್ತೀರಾ?" ಎಂದಳು.

ಗಂಡನು ಹಂಡೆ ಕೊಳ್ಳಲು ಬಂದವನ ಕಡೆ ತಿರುಗಿ "ಕೇಳಿದಿರಾ? ನಮ್ಮಾಕೆ ಆಗಲೇ ಮಾರಿಯಾಯಿತಂತೆ" ಎಂದನು. ಕೊಳ್ಳಲು ಬಂದವನು ಹಿಂತಿರುಗಿ ಹೊರಟು ಹೋದನು.

ಪೆರೊನೆಲಾ "ಕೊಂಡುಕೊಳ್ಳಲು ಬಂದಿರುವವನ ಹತ್ತಿರ ನೀವೇ ಮಾತನಾಡಿ" ಎಂದಳು.

ಗಯನೆಲ್ಲೊ ಹಂಡೆಯಿಂದ ಹೊರಗೆ ಬಂದು ಬಟ್ಟೆಯ ಮೇಲಿದ್ದ ಧೂಳನ್ನು ಕೊಡವಿಕೊಳ್ಳುತ್ತಾ, 'ಹಂಡೆ ಸರಿಯಾಗಿದೆ ಆದರೆ ಹಂಡ ಮಾಡಲು ಹಾಕಿದ್ದ ಮೂಲಿಕೆಗಳು ಪದಾರ್ಥಗಳು ಒಣಗಿ ಕಟ್ಟಿಕೊಂಡಿದೆ. ಅದನ್ನು ಕೆರೆದು ಶುದ್ಧಮಾಡಿಕೊಟ್ಟರೆ ತೆಗೆದುಕೊಳ್ಳುತ್ತೇನೆ" ಎಂದನು.

'ಅದೇನು ಮಹಾ! ಐದೇ ನಿಮಿಷದಲ್ಲಿ ಶುದ್ಧ ಮಾಡಿಕೊಡುತ್ತೇನೆ." ಎಂದು ಗಂಡನು ಶರಟಿನ ತೋಳನ್ನು ಮೇಲಕ್ಕೆ ಮಡಚಿ ಹಂಡೆಯೊಳಗೆ ಇಳಿದು ಕೆರೆಯುಲು ಪ್ರಾರಂಭಿಸಿದನು.

ಪೆರೊನೆಲಾ ಬಗ್ಗಿ ಗಂಡನಿಗೆ ಕರೆ ಕಟ್ಟಿಕೊಂಡ ಜಾಗಗಳನ್ನು "ನೋಡಿ ಇಲ್ಲಿ .... ಅಲ್ಲಿ ...." ಎಂದು ತೋರಿಸತೊಡಗಿದಳು.

ಈ ರೀತಿ ತೋರಿಸುತ್ತಿದ್ದಂತೆ, ಗಂಡನು ಬರುವುದಕ್ಕೆ ಮುಂಚೆ ಪ್ರಾರಂಭಿಸಿದ ಕಾರ್ಯಕ್ಕೆ ಮಧ್ಯದಲ್ಲಿ ವಿಘ್ನ ಬಂದಿದ್ದರಿಂದ ನಿರಾಶೆಗೊಂಡಿದ್ದ ಗಿಯೋನೆಲ್ಲೋಗೆ ಅವಳು ನಿಂತ ಭಂಗಿ ಅನುಕೂಲವಾಗಿ ಕಾಣಿಸಿತು. ಸಾಧ್ಯವಾದಷ್ಟು ತನ್ನಾಸೆಯನ್ನು ತೀರಿಸಿಕೊಳ್ಳಲು ತವಕಗೊಂಡನು. ಹಿಂದಿನಿಂದ ಪಾರ್ಥಾವಿನ ಗಂಡು ಕುದುರೆ, ಹೆಣ್ಣು ಕುದುರೆಯ ಮೇಲೆ ಏರುವಂತೆ ಮೇಲೇರಿ ತನ್ನ ತಾಪವನ್ನು ಉಪಶಮನಮಾಡಿಕೊಂಡು ಕೆಳಗಿಳಿದನು. ಅಷ್ಟು ಹೊತ್ತಿಗೆ ಗಂಡನು ಶುದ್ಧಪಡಿಸಿದುದೂ ಮುಕ್ತಾಯವಾಯಿತು.

"ಈ ದೀಪವನ್ನು ತೆಗೆದುಕೊಂಡು ಒಳಗೆಲ್ಲಾ ಸರಿಯಾಗಿದೆಯಾ ನೋಡು" ಎಂದು ಗಂಡನು ಗಿಯುನೆಲ್ಲೋ ಕೈಗೆ ಹಣತೆಯನ್ನು ಕೊಟ್ಟನು.

ಗಿಯುನೆಲ್ಲೋ ಹಂಡೆಯೊಳಗಿಳಿದು ಪರೀಕ್ಷಿಸಿ ಸರಿಯಾಗಿದೆಯೆಂದು ಏಳು ಫ್ಲಾರೆನ್ಸ್ ಕೊಟ್ಟು ಗಂಡನ ತಲೆಯ ಮೇಲೆಯೇ ಹಂಡೆಯನ್ನು ಹೊರಸಿಕೊಂಡು ಮನೆಯ ಕಡೆ ನಡೆದನು.

